ಗಳಗನಾಥ ಸ್ಮರಣೆ



ಮನೆಮಂದಿಗೆಲ್ಲ ಮುದ ನೀಡುವ ಮಾಸಿಕ

# ಕಸ್ತೂರಿ

ಮಾರ್ಚ್ ೧೯೯೫ ಬೆಲೆ: ರೂ. ೬-೦೦

ಪುಸ್ತಕ ವಿಭಾಗ

ವಿದ್ಯಾರ್ಥಿಗಳೇ, ಯಶಸ್ಸು ಕನಸಲ್ಲ!

'ಪವಿತ್ರ ಸ್ನಾನ'ದ ಪರಮ ಸಂಕಟಗಳು

• ಆರೋಗ್ಯದಂಗ



# ಕಸ್ತೂರಿ

ಕನ್ನಡ ಡೈಜೆಸ್ಟ್


ಲೋಕ ಶಿಕ್ಷಣ ಟ್ರಸ್ಟಿನ
ಹೆಮ್ಮೆಯ ಕಾಣಿಕೆ

ವ್ಯವಸ್ಥಾಪಕ ಸಂಪಾದಕ:
ಕೆ. ಶಾಮರಾವ್

ಸಂಪಾದಕ:
ಎನ್.ವಿ. ಜೋಶಿ

ಸಹಸಂಪಾದಕ:
ವೆಂಕಟನಾರಾಯಣ

ನಿರ್ವಹಣೆ:
ಗೋಪಾಲ ವಾಜಪೇಯಿ
ಶ್ರೀಕಾಂತ ಮಳಗಿ

ಕಲೆ:
ಪಿ.ಆರ್. ಪಾಟೀಲ
ಎಂ.ಎಸ್. ಶಶಿಧರ

ಮುಖಪುಟ:
ಅಲಂಕಾರ ಭೂಷಿತೆ
ವರ್ಣಪಾರದರ್ಶಿಕೆ:
ದಿಲೀಪ ಬ್ಯಾನರ್ಜಿ

ಗಳಗನಾಥರ ವರ್ಣಚಿತ್ರ
'ಕಸ್ತೂರಿ'ಯ ಸಂಗ್ರಹದಿಂದ

ಕಸ್ತೂರಿ ಕಾರ್ಯಾಲಯ,
ಕೊಪ್ಪೀಕರ ರಸ್ತೆ
ಹುಬ್ಬಳ್ಳಿ-೫೮೦ ೦೨೦.


## ಚಿಂತನ

ಕನ್ನಡ ಸಾಹಿತ್ಯಕ್ಕೆ ಈಗ ಎಲ್ಲವೂ ಇದೆ....

ಸಾಹಿತ್ಯ ಪ್ರಕಾಶನಗಳಿವೆ, ಭಾಷೆ ಮತ್ತು ಸಂಸ್ಕೃತಿ ನಿರ್ದೇಶನಾಲಯವಿದೆ, ಸಾಹಿತ್ಯ ಅಕಾಡೆಮಿಯಿದೆ, ಪ್ರತಿವರ್ಷವೂ ಪುಷ್ಕಳವಾಗಿ ಪುಸ್ತಕಗಳು ಪ್ರಕಟವಾಗುತ್ತಿವೆ, ಅವುಗಳಿಗೆ ಪ್ರಶಸ್ತಿ-ಪುರಸ್ಕಾರಗಳನ್ನೀಯುವ ಸರಕಾರಿ ಹಾಗೂ ಖಾಸಗಿ ಸಂಸ್ಥೆಗಳೂ ಇವೆ. ನಮ್ಮ ರಾಜ್ಯ ಸರಕಾರ 'ಪಂಪ ಪ್ರಶಸ್ತಿ'ಯನ್ನು ಕೊಡಲಾರಂಭಿಸಿದೆ.

ಆದರೆ ಇರದಿರುವುದೆಂದರೆ ನಮ್ಮವರಲ್ಲಿ ಅಭಿಮಾನ ಹಾಗೂ ಕೊಂಡು ಓದುವ ಆಸಕ್ತಿ.

ಇಂಥ ಆಸಕ್ತಿಯನ್ನು ಅಭಿಮಾನವನ್ನು ಬೆಳೆಸಲು ತಮ್ಮ ಬದುಕನ್ನೇ ಸವೆಸಿದ ಅನೇಕರಲ್ಲಿ ಅಪರೂಪದವರು ಕಳೆದ ಒಂದು-ಒಂದೂವರೆ ಶತಮಾನದ ಅವಧಿಯಲ್ಲಿ ಕಾಣಸಿಗುವುದು ಕೇವಲ ಕೈ ಬೆರಳೆಣಿಕೆಯಷ್ಟು ಜನ. ಅವರೆಲ್ಲ ನಮಗೆ 'ಪ್ರಾತಃಸ್ಮರಣೀಯರು.'

ಗಳಗನಾಥರು ಅಂಥ ಅಪರೂಪದವರಲ್ಲಿ ಅಗ್ರಗಣ್ಯರು. ಹಳ್ಳಿಯೊಂದರ ಪ್ರಾಥಮಿಕ ಶಾಲಾ ಮಾಸ್ತರರಾಗಿದ್ದರೂ ಅವರು 'ನಾಡಿಗೇ ಶಿಕ್ಷಕ'ರಾಗುವಂಥ ಕೆಲಸ ಮಾಡಿದರು. ನಿವೃತ್ತಿಗೆ ಹತ್ತು ವರ್ಷ ಮುಂಚೆಯೆ ನೌಕರಿಗೆ ರಾಜೀನಾಮೆಯಿತ್ತು ಕನ್ನಡದ ಕೆಲಸಕ್ಕಾಗಿ ಟೊಂಕಕಟ್ಟಿ ನಿಂತ ಗಳಗನಾಥರು ಬದುಕಿದ ೭೫ ವರ್ಷಗಳಲ್ಲಿ ನಮಗಿತ್ತದ್ದು ೬೦ರಷ್ಟು ಕೃತಿಗಳನ್ನು. "ಆಧುನಿಕ ಕನ್ನಡ ಸಾಹಿತ್ಯದ ಆರಂಭಕಾಲದ ಕೃತಿಗಳೆಂದು ಗಳಗನಾಥರ ಕಾದಂಬರಿಗಳಿಗೆ ಐತಿಹಾಸಿಕ ಮಹತ್ವ ಉಳಿಯುತ್ತದೆ. ಕಷ್ಟಪಟ್ಟು ಕಾಡು ಕಡಿದು, ನೆಲ ಹದಗೊಳಿಸಿ, ಗುಡಿಸಲು ಕಟ್ಟಿ, ಅಡವಿಯಲ್ಲಿ ಜನವಸತಿ ನಿರ್ಮಿಸಿದ ಕೀರ್ತಿ ಗಳಗನಾಥರದು," ಎಂಬ ಬಸವರಾಜ ಕಟ್ಟೀಮನಿಯವರ ಮಾತು ನಮಗೆ ಆ ಮಹಾಜೀವಿಯ ಬದುಕನ್ನೆ ಕಣ್ಣೆದುರು ತೆರೆದಿಡುತ್ತದೆ.

ಈಗ ಗಳಗನಾಥರ ೧೨೫ನೆ ಜನ್ಮವರ್ಷ. 'ಕಸ್ತೂರಿ'ಯ ಈ ಸಂಚಿಕೆ ಅವರಿಗೆ ಅರ್ಪಿತ.

ಅಂದಹಾಗೆ, ಈ ವರ್ಷ ಇನ್ನೊಬ್ಬ ಮಹಾಮೇಧಾವಿ 'ಮುದ್ದಣ'ನ ೧೨೫ನೆ ಜನ್ಮವರ್ಷವೂ ಹೌದು.

ಈ ಎರಡೂ ಚೇತನಗಳು ನಮಗೆ ಅನುಗಾಲವೂ ದಾರಿದೀಪಗಳಾಗಿರಲಿ.

• ವ್ಯವಸ್ಥಾಪಕ ಸಂಪಾದಕ




### ಬೇಂದ್ರೆ ಸ್ಮರಣೆ

ಶಬ್ದಗಾರುಡಿಗನ ಮುಖಪುಟದೊಂದಿಗೆ ಬಂದ ಫೆಬ್ರುವರಿ ೯೫ರ 'ಕಸ್ತೂರಿ' ಸಂಚಿಕೆ ಮುದ ನೀಡಿತು. ವರಕವಿ ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರ ಜನ್ಮಶತಮಾನೋತ್ಸವದ ವರ್ಷಾರಂಭದ ಸಂದರ್ಭದಲ್ಲಿ, ಬೇಂದ್ರೆಯವರು ತಮ್ಮನ್ನು ಕುರಿತಂತೆ ಹೇಳಿರುವ ಅಪರೂಪದ ಸಂಗತಿಗಳು, ಗೆಳೆಯರು ಕಂಡಂತೆ ಬೇಂದ್ರೆ ಹಾಗೂ ಬೇಂದ್ರೆ ನೆನಪು ಅತ್ಯಂತ ಸಮಯೋಚಿತ ಲೇಖನಗಳು.

ಬೆಳಗಾವಿ ಶ್ರೀದೇವಿ ಮರಿಗೇರಿ

ಫೆಬ್ರುವರಿ ೯೫ರ 'ಕಸ್ತೂರಿ'ಯ ಲೇಖನಗಳು ಬಹಳ ಸೊಗಸಾಗಿವೆ. ಕವಿ ಬೇಂದ್ರೆಯವರ ಬಗ್ಗೆ ಲೇಖನ, ಪಿ.ಸಿ. ಅಲೆಗ್ಸಾಂಡರ್ ಬರೆದಿರುವ 'ಪ್ರಿಯದರ್ಶಿನಿ ಇಂದಿರಾ' ಬಗೆಗಿನ ಲೇಖನ ಹಾಗೂ 'ಅಲರ್ಜಿ- ಆರೋಗ್ಯದಂಗಳ' ಇವುಗಳೆಲ್ಲ ಮನಕ್ಕೆ ಮುದ ನೀಡುವ, ಸಂಗ್ರಹಿಸಲು ಯೋಗ್ಯವಾದ ಲೇಖನಗಳು. ಬೇಂದ್ರೆಯವರ ಮುಖಪುಟ ಚಿತ್ರ ಹಾಗೂ 'ಕಸ್ತೂರಿ'ಯ ೨೩ನೇ ಪುಟದಲ್ಲಿ ಅವರ ಹರೆಯದ ಚಿತ್ರಗಳು ಎದ್ದು ಬರುವಂತೆ ಕಾಣುತ್ತಿವೆ.

ಮಂಡ್ಯ ಪಿ. ಜವರಾಯಗೌಡ

ಕಾವ್ಯ ಗಾರುಡಿಗ, ಮಹಾನ್ ಕವಿ ಡಾ. ದ.ರಾ. ಬೇಂದ್ರೆ ಅವರ ಜನ್ಮಶತಾಬ್ದಿಯನ್ನು ಕನ್ನಡಿಗರಿಗೆ ನೆನಪಿಸಲೆಂದೇ ಕನ್ನಡದ ಹಿರಿಯ ಪತ್ರಿಕೆ 'ಕಸ್ತೂರಿ' ತನ್ನ ಸಂಚಿಕೆಯ ಬಹುಭಾಗವನ್ನು ಈ ಮಹಾನ್ ಕಾರ್ಯಕ್ಕಾಗಿಯೇ ಮೀಸಲಿಟ್ಟಿದೆ. ಯಾವುದೇ ಅಹಮಿಕೆ ಬೆಳೆಸಿಕೊಳ್ಳದೆ, ಜನಮಾನಸದೊಂದಿಗೆ ಬೆರೆತ, ಜನರಿಗಾಗೇ ಕವನ ಬರೆದು ಜನಪ್ರಿಯರಾದ ಧೀಮಂತ ಕವಿ ದ.ರಾ.ಬೇಂದ್ರೆಯವರ ಜನ್ಮಶತಮಾನೋತ್ಸವ ನಮಗೆ ನಾಡಹಬ್ಬವಾಗಬೇಕು.

ಚಾಮರಾಜನಗರ ಎಸ್. ಲಕ್ಷ್ಮೀನರಸಿಂಹ

ಬೇಂದ್ರೆಯವರು ಬರೆದ 'ಕುರುಡು ಕಾಂಚಾಣ ಕುಣಿಯುತ್ತಿತ್ತು, ಕಾಲಿಗೆ ಬಿದ್ದವರ ತುಳಿಯುತ್ತಿತ್ತು....' ೯ನೇ ತರಗತಿಯಲ್ಲಿ ಕಲಿತ ಈ ಹಾಡು ಇಂದು ಅವರ ಜನ್ಮಶತಮಾನೋತ್ಸವ ಸಂದರ್ಭದಲ್ಲಿ ನೆನಪಾಗುತ್ತಿದೆ. ಅವರ ಜನ್ಮಶತಮಾನೋತ್ಸವ ಸಂದರ್ಭದಲ್ಲಿ 'ಬೇಂದ್ರೆ ನೆನಪು' ಅಂಕಣ ಆರಂಭಿಸಿರುವ 'ಕಸ್ತೂರಿ'ಗೆ ನನ್ನ ಅಭಿನಂದನೆಗಳು.

ಶೆಟಗೇರಿ ಸಂತೋಷ ನಾಯಕ

### ಆತ್ಮೀಯ ನೆನಪು

೧೯೯೫ರ ಫೆಬ್ರುವರಿ ಸಂಚಿಕೆಯಲ್ಲಿನ 'ಇಂದಿರಾ ಜತೆಗಿನ ನನ್ನ ವರ್ಷಗಳು' ದಿವಂಗತ ಪ್ರಧಾನಿಯವರ ವ್ಯಕ್ತಿತ್ವದ ಮತ್ತೊಂದು ಮುಖವನ್ನು ನಮಗೆ ಪರಿಚಯಿಸಿಕೊಡುತ್ತದೆ. ಕಾದಂಬರಿ ಶೈಲಿಯಲ್ಲಿ ಸಾಗಿಬರುವ ಅಲೆಕ್ಸಾಂಡರರ ಕೃತಿ 'ಕಸ್ತೂರಿ'ಯು ಈ ಸಲ ತನ್ನ ಓದುಗರಿಗೆ ನೀಡಿದ ಪ್ರಥಮ ಬೋನಸ್ ಎಂದರೆ ಅತಿಶಯೋಕ್ತಿಯಲ್ಲ.

ಬೆಳಗಾವಿ ನಾಗರಾಜ ಹೀರಾ

'ಇಂದಿರಾ ಜತೆಗಿನ ನನ್ನ ವರ್ಷಗಳು' ಇಂದಿರಾಗಾಂಧಿಯವರ ವರ್ಣಮಯ ವ್ಯಕ್ತಿತ್ವವನ್ನು ಹೃದಯಂಗಮವಾಗಿ ಪರಿಚಯಿಸುತ್ತದೆ.

ಸಾಗರ ವೈ.ಎಚ್. ಸಂಗಪ್ಪ

ಫೆಬ್ರುವರಿ ೯೫ರ 'ಕಸ್ತೂರಿ' ಸಂಚಿಕೆಯ 'ಪುಸ್ತಕ ವಿಭಾಗ'ದಲ್ಲಿ ಪ್ರಕಟಗೊಂಡ ಪಿ.ಸಿ. ಅಲೆಗ್ಸಾಂಡರ್ ಅವರು ಬಯಾಗ್ರಫಿಯಲ್ಲಿ ಪ್ರಿಯದರ್ಶಿನಿ ಇಂದಿರಾಗಾಂಧಿ ಅವರ ಜೊತೆಗೆ ಕಾರ್ಯನಿರ್ವಹಿಸಿದ ಅನುಭವಗಳನ್ನು, ಪ್ರಸಂಗಗಳನ್ನು ಲೇಖಕರು ಸ್ವಾರಸ್ಯಪೂರ್ಣ ಮತ್ತು ವಸ್ತುನಿಷ್ಠವಾಗಿ ನಿರೂಪಿಸಿದ್ದಾರೆ.

ಪ್ರೊ. ಶಿವಕುಮಾರ ಕಲ್ಲೂರ ಕಮತ್ರಹಳ್ಳಿ

### ನುಡಿಚಿತ್ರಗಳ ಮೋಡಿಗಾರ

ಫೆಬ್ರುವರಿ ೧೯೯೫ರ ಸಂಚಿಕೆಯಲ್ಲಿ ಎ. ಮಾಧವ ಉಡುಪ ಬರೆದಿರುವ 'ನುಡಿಚಿತ್ರಗಳ ಮೋಡಿಗಾರ ಎಚ್ಚೆಸ್ಕೆ' ಓದಿ ಸಾರ್ಥಕ ಭಾವನೆ ಮೂಡದಿರಲಿಲ್ಲ. ಎಚ್ಚೆಸ್ಕೆ ಅವರು ಕನ್ನಡ ಸಾಹಿ

ತ್ಯಕ್ಕೆ ನೀಡಿದ ಕೊಡುಗೆ ಅಮೋಘ. ಇದೇ ರೀತಿ ಇನ್ನೂ ಎಷ್ಟೋ ಕವಿಗಳು, ಲೇಖಕರು ಎಲೆಮರೆಯ ಕಾಯಿಯಾಗಿ ಉಳಿದಿದ್ದಾರೆ. ಅಂಥವರ ಬಗ್ಗೆಯೂ 'ಕಸ್ತೂರಿ' ಪ್ರಕಟಿಸಬೇಕು.

ಮಾಲೂರು ಮಾ.ನಾ. ಸ್ವಾಮಿ

ಫೆಬ್ರುವರಿ ೯೫ರ 'ಕಸ್ತೂರಿ'ಯಲ್ಲಿ ಪ್ರಕಟವಾದ 'ನುಡಿಚಿತ್ರಗಳ ಮೋಡಿಗಾರ ಎಚ್ಚೆಸ್ಕೆ' ಲೇಖನ ತುಂಬಾ ಅರ್ಥಪೂರ್ಣವಾಗಿತ್ತು. ಕನ್ನಡದ ಖ್ಯಾತ ಪತ್ರಿಕೆಗಳಲ್ಲಿ ಅಂಕಣಕಾರರಾಗಿರುವ ಎಚ್ಚೆಸ್ಕೆಯವರು, ದೇಶ-ವಿದೇಶದ ಮಹಾನ್ ವ್ಯಕ್ತಿಗಳ ಬಗ್ಗೆ ಸಂಪೂರ್ಣ ಮಾಹಿತಿಯನ್ನು ಕೇವಲ ಕೆಲವೇ ವಾಕ್ಯಗಳಲ್ಲಿ ಬರೆಯುವ ಸಾಮರ್ಥ್ಯವನ್ನು ಪಡೆದಿರುವ ಲೇಖಕರು.

ಕುಕನೂರು ಎಚ್.ಆರ್. ವಸ್ತ್ರದ

**ಸಂಜೆಗಣ್ಣಿನ ಹಿನ್ನೋಟವಲ್ಲ**

'ಕಸ್ತೂರಿ'ಯ ಫೆಬ್ರುವರಿ ಸಂಚಿಕೆಯ 'ಅಚ್ಚಳಿಯದ ಪುಟಗಳು' ವಿಭಾಗದಲ್ಲಿ ಕ.ದೋ ಚಿಕ್ಕೇಗೌಡರು ಸಂಗ್ರಹಿಸಿದ್ದು ಎ.ಎನ್. ಮೂರ್ತಿರಾವ್ ಅವರ 'ಸಂಜೆಗಣ್ಣಿನ ಹಿನ್ನೋಟ' ಪುಸ್ತಕದಿಂದ ಎಂದು ಬರೆಯಲಾಗಿದೆ. ಆದರೆ ಲೇಖಕರು ಸಂಗ್ರಹಿಸಿಕೊಟ್ಟ ಭಾಗ 'ಸಂಜೆಗಣ್ಣಿನ ಹಿನ್ನೋಟ'ದಲ್ಲಿಲ್ಲ, 'ದೇವರು' ಪುಸ್ತಕದಲ್ಲಿದೆ. ಅದಕ್ಕಾಗಿ ಎ.ಎನ್. ಮೂರ್ತಿರಾವ್‌ರಿಗೆ 'ಪಂಪ ಪ್ರಶಸ್ತಿ'ಯೂ ಬಂತು.

ಬಳ್ಳಾರಿ ಡಾ. ಯಲಗುರೇಶ ಸಂಕನಾಳ

**ಚಿರಾಪುಂಜಿ ?**

ಫೆಬ್ರುವರಿ 'ಕಸ್ತೂರಿ'ಯ ಪುಟ ೪೫ರಲ್ಲಿ ಹೆಚ್ಚು ಮಳೆ ಬೀಳುವ ಪ್ರದೇಶ: ಚಿರಾಪುಂಜಿ (೫೦೦ ಸೆಂಟಿಮೀಟರ್) ಎಂದಾಗಿದೆ. ಅದು (೧,೦೮೦ ಸೆಂಟಿಮೀಟರ್) ಮತ್ತು 'ಮಾಸಿನ್‌ರಾಮ್' (೧೧೪೧ ಸೆಂಟಿಮೀಟರ್) ಎಂದಾಗಬೇಕಿತ್ತಲ್ಲವೆ ?

ರಬಕವಿ ಸಂತೋಷ ಚಂ. ಹುಲಗಬಾಳಿ

**ಜಿಜ್ಞಾಸೆಗೆ ಪರಿಹಾರ**

'ಅಧಿಕಮಾಸ ಏಕೆ ಬರುತ್ತದೆ ?' ಎಂಬ ಜಿಜ್ಞಾಸೆಗೊಳಗಾದ ನನಗೆ ಶ್ರೀವತ್ಸ ವಟಿಯವರ ಈ ಲೇಖನದಿಂದ ಪರಿಹಾರ ದೊರೆತಂತಾಯಿತು. ಇದೊಂದು ಅತ್ಯುಪಯುಕ್ತ, ಸಂಗ್ರಾಹ್ಯ ಲೇಖನ.

ಕುಂದಾಪುರ ಗುರುಪ್ರಸಾದ ಎಂ.

೧೯೯೫ರ ಫೆಬ್ರುವರಿ ಸಂಚಿಕೆಯಲ್ಲಿ ಪ್ರಕಟವಾದ ಶ್ರೀವತ್ಸ ವಟಿ ಅವರ 'ಅಧಿಕ ಮಾಸ ಏಕೆ ಬರುತ್ತದೆ ?' ಎಂಬ ಲೇಖನದಲ್ಲಿ ಇನ್ನೊಂದು ಅಂಶ ಸೇರಬೇಕಾಗಿತ್ತೆಂದು ನನಗನಿಸುತ್ತದೆ. ಅದು ಹೀಗಿದೆ:

ಮಕರ ಸಂಕ್ರಮಣವೊಂದನ್ನೇ ನಾವು ವಿಜೃಂಭಣೆಯಿಂದ ಆಚರಿಸುತ್ತೇವೆ. ಆದರೆ ಪ್ರತಿ ತಿಂಗಳೂ ಒಂದು ಸಂಕ್ರಮಣ ಬಂದೇ ಬರುತ್ತದೆ. ಸೂರ್ಯನು ಒಂದು ರಾಶಿಯನ್ನು ದಾಟಿ ಇನ್ನೊಂದು ರಾಶಿಯನ್ನು ಪ್ರವೇಶಿಸುವುದೇ ಈ ಸಂಕ್ರಮಣ. ಸೌರಮಾಸದ ಲೆಕ್ಕದವರು ಈ ಸಂಕ್ರಮಣವನ್ನೇ ಪ್ರತಿಪದೆಯೆಂದು ಎಣಿಸುವದರಿಂದ ಅವರಿಗೆ ಅಧಿಕ ಮಾಸದ ಪ್ರಶ್ನೆ ಉದ್ಭವಿಸುವುದಿಲ್ಲ. ಚಂದ್ರಮಾನ ಮಾಸವು ೩೦ ದಿನಗಳಿಗಿಂತ ಚಿಕ್ಕದಿರುವುದರಿಂದ ಯಾವುದೇ ಒಂದು ೨೯ ದಿನಗಳ ವಿಶಿಷ್ಟ ತಿಂಗಳಲ್ಲಿ ಈ ಸಂಕ್ರಮಣ ಬರುವುದೇ ಇಲ್ಲ. ಉದಾ: ಈ ಸಲದ ಸಂಕ್ರಮಣ ಚಾಂದ್ರಮಾನ ಅಮಾವಾಸ್ಯೆಯಂದು ಬಂದರೆ ಮುಂದಿನ ಸಂಕ್ರಮಣ ಬರುವ ಹೊತ್ತಿಗೆ ಇನ್ನೊಂದು ಅಮಾವಾಸ್ಯೆ ದಾಟಿ ಹೋಗಿರುತ್ತದೆ. ಈ ಸಂಕ್ರಮಣ ರಹಿತ ಮಾಸವೇ ಅಧಿಕ ಮಾಸ. ಮೂರು ವರ್ಷಕ್ಕೊಮ್ಮೆ ಇಂಥ ಸಂದರ್ಭ ಬರುತ್ತದೆ. ಇದನ್ನು ಕೆಲವರು ಮಲಮಾಸವೆಂದೂ ಇನ್ನು ಕೆಲವರು ಶೂನ್ಯ ಮಾಸವೆಂದೂ ಕರೆಯುತ್ತಾರೆ.

ಸೂರ್ಯನ ೩೬೫ ದಿನಗಳ ವರ್ಷಕ್ಕೆ ೧೨ ತಿಂಗಳುಗಳನ್ನು ಹೊಂದಿಸಲೆಂದು ಯಾವ ಶಾಸ್ತ್ರದ ಆಧಾರವಿಲ್ಲದೆ ಒಂದು ತಿಂಗಳು ೩೦, ಇನ್ನೊಂದು ತಿಂಗಳು ೩೧ ಮತ್ತೊಂದು ತಿಂಗಳು ೨೮ ಈ ರೀತಿ ಗೊತ್ತು ಮಾಡಿದ ಕ್ರಿಶ್ಚನ್ ಕ್ಯಾಲೆಂಡರಿಗಿಂತ ಶಾಸ್ತ್ರಬದ್ಧವಾದ ಅಧಿಕ ಮಾಸವನ್ನು ನಿರ್ಮಿಸಿ ಸೌರವರ್ಷದೊಡನೆ ಚಾಂದ್ರಮಾನ ತಿಂಗಳುಗಳನ್ನು ಹೊಂದಿಸಿದ ನಮ್ಮ ಪಂಚಾಂಗ ಹೆಚ್ಚು ಶಾಸ್ತ್ರೀಯವಲ್ಲವೆ ?

ಹುಬ್ಬಳ್ಳಿ ಸುರೇಂದ್ರ ದಾನಿ

(ಆರನೆ ಪುಟಕ್ಕೆ)

ಪುಸ್ತಕ ವಿಭಾಗ ........೧೧೫

ವಿದ್ಯಾರ್ಥಿಗಳೇ,
ಯಶಸ್ಸು ಕನಸಲ್ಲ!



ಯುವಜನತೆಗೆ
ಆತ್ಮಶಕ್ತಿಜಾಗೃತಿಯ ಕರೆ



ಆ್ಯಂಬ್ರೋಜ್ ಬಿಯರ್ಸ್‌ನ
ಕಟುಹಾಸ್ಯ ಕಥೆಗಳು

ಅನುವಾದ: **ಗುರುನಾಥ ಇನಾಮದಾರ** ೫೭

# ಅಂತರಂಗ





'ಪವಿತ್ರ ಸ್ನಾನ'ದ
ಪರಮ ಸಂಕಟಗಳು...
• ಡಾ. ಬಿ.ಬಿ. ಪಾಟೀಲ

## ಬೆಳಕಿಂಡಿ

ಕೃತಿರಚನೆಯಂತೆ ರಸಾಸ್ವಾದನೆಯೂ ಒಂದು ಸೃಷ್ಟಿಕಾರ್ಯ.

- ಕುವೆಂಪು

ಕಾಣದ ಕಣ್ಣಿಗೆ ಕಣ್ಣಿಲ್ಲ
ಕಾಣುವ ಕಣ್ಣಿಗೆ ಕಣ್ಣೆಲ್ಲ
ಕಾಣುತ ನಡೆದರೆ ಕೊನೆಯಿಲ್ಲ.

- ಜ.ಹೊ. ನಾರಾಯಣಸ್ವಾಮಿ

ಬರಿಗೈಯಿಂದ ಇರುವವರೇ ಸಚ್ಚಾರಿತ್ರ್ಯರಾಗಿರುವುದು ಹೆಚ್ಚು.

- ಡಾನ್ ಹೆಲ್ಡ್

ವಿಶ್ರಾಂತಿಯೆನ್ನುವುದು ಒಂದು ಸುಂದರವಾದ ಬಟ್ಟೆಯಿದ್ದ ಹಾಗೆ. ಆದರೆ ಅದನ್ನು ಯಾವಾಗಲೂ ತೊಟ್ಟಿರಲಾಗದು.

- ಅನಾಮಿಕ

ನಿಜವಾದ ಸುಖ ಎಂದರೇನೆಂಬುದು ಮದುವೆಯಾಗುವವರೆಗೂ ಗೊತ್ತಾಗುವುದಿಲ್ಲ. ಆದರೆ ಆ ವೇಳೆಗಾಗಲೆ ತೀರಾ ತಡವಾಗಿಬಿಟ್ಟಿರುತ್ತದೆ.

- ಎಂ.ಆರ್.ಎಸ್.

ಸ್ಥಿರ ಶೀರ್ಷಿಕೆಗಳು

### (ಮೂರನೆ ಪುಟದಿಂದ)

೧೯೯೫ರ ಜನವರಿ ಸಂಚಿಕೆಯಲ್ಲಿ ಪ್ರಕಟವಾದ ಲೇಖನದಲ್ಲಿ (ಮಾಜಿ ಪ್ರಧಾನಿ ಮೌನ ಮುರಿದಾಗ) ಅಂದಿನ ರಾಜಕೀಯದಲ್ಲಿನ ಕೆಲವು ಪ್ರಮುಖ ಘಟನೆಗಳನ್ನು ಸ್ಪಷ್ಟವಾಗಿ ತಿಳಿಸಲಾಗಿದೆ. 'ವಾಸುಕಿ'ಯವರಿಗೆ ಧನ್ಯವಾದಗಳು

**ಚಿಕ್ಕೇನಕೊಪ್ಪ — ಚೆನ್ನವೀರ ನಾಲ್ವಾಡ**

### ರೋಮಾಂಚಕ

ಜನವರಿ ೧೯೯೫ರ ಸಂಚಿಕೆಯ 'ಪುಸ್ತಕ ವಿಭಾಗ'ದ 'ಅನ್ವೇಷಣೆಯ ಹಾದಿಯಲ್ಲಿ' ಒಂದು ಉತ್ತಮ ಲೇಖನ. ನೈಜರ್ ನದಿಯ ಮೂಲ ಶೋಧನೆಗಾಗಿ ಮುಂಗೋಪಾರ್ಕ್ ಕೈಗೊಂಡ ಸಾಹಸ ಯಾತ್ರೆಯನ್ನು ಓದಿ ರೋಮಾಂಚನವಾಯಿತು.

**ರಾಯನಾಳ — ಕೆ.ಎಸ್. ಕಮಡೊಳ್ಳಿ**

### ದಾರಿಯಿರದ ದಾರಿಯ ಕಡೆಗೆ?

'ಭಷ್ಟಾಸುರ'ನ ಕುರಿತು 'ಕಸ್ತೂರಿ'ಯಲ್ಲಿ ಬಂದ ಲೇಖನ ಓದಿ ಕಳವಳವಾಯಿತು. (ಜನವರಿ ೧೯೯೫.) 'ದಾರಿಯಿರದ ದಾರಿ'ಯ ಕಡೆಗೆ ಭಾರತ ಹೊರಟಿದೆಯೇನೋ? 'ಭ್ರಷ್ಟಾಚಾರ ನಿಲ್ಲಿಸಿ...' ಎಂದು ನಾವು ಕೂಗು ಹಾಕಿದರೂ, ಭ್ರಷ್ಟರು ಅದಕ್ಕೂ ಲಂಚ ಕೇಳಿದರೆ ಹೇಗೆಂದು ನನಗೆ ಕಸಿವಿಸಿಯಾಯಿತು.

**ರಾಯಚೂರ — ಮಧುಸೂದನ ಮುತಾಲಿಕ**

ಭ್ರಷ್ಟಾಸುರನನ್ನು ಸಂಹಾರ ಮಾಡಿದರೆ ಅವನನ್ನೇ ನಂಬಿಕೊಂಡಿರುವ ನಮ್ಮ ಪಾಪದ ರಾಜಕಾರಣಿಗಳ ಗತಿ ಏನು ಮಾರಾಯರೆ? ನಮ್ಮಂಥವರು ಕೂಲಿ-ನಾಲಿ ಮಾಡಿಯಾದ್ರೂ ಹೊಟ್ಟೆ ತುಂಬಿಸಿಕೊಳ್ತೇವೆ. ಆದರೆ ಅವರಿಗದು ಸಾಧ್ಯವೆ?

**ಕಲ್ಕೆರೆ — ಜಿ. ಗಾಯತ್ರಿ ಕುಂಬ್ರಿಮನೆ**

---

## ಲೇಖಕರಿಗೆ ಸೂಚನೆ

- 'ಕಸ್ತೂರಿ'ಗಾಗಿ ಕಳಿಸುವಂಥ ಲೇಖನಗಳು ಕಾಗದದ ಒಂದೇ ಮಗ್ಗುಲಲ್ಲಿ ಸ್ಫುಟವಾಗಿ ಬರೆದಂಥವಾಗಿರಲಿ. ನಿಮ್ಮ ಹೆಸರು-ವಿಳಾಸಗಳು ಸ್ಪಷ್ಟವಾಗಿರಲಿ. ಅನುವಾದ, ರೂಪಾಂತರ, ಆಧಾರಿತ ಲೇಖನಗಳಾದರೆ ಮೂಲ ಲೇಖಕ-ಪ್ರಕಾಶಕರ ವಿಳಾಸ, ಅನುಮತಿ ಪತ್ರಗಳನ್ನು ಜತೆಗೆ ಲಗತ್ತಿಸಿ.
- ಅಸ್ವೀಕೃತ ಲೇಖನಗಳನ್ನು ಮರಳಿ ಪಡೆಯಲಿಚ್ಛಿಸುವವರು ಲೇಖನಗಳ ಸಂಗಡವೆ ಅಗತ್ಯ ಅಂಚೆಚೀಟಿ ಲಗತ್ತಿಸಿದ ಲಕೋಟೆಯನ್ನಿಡಿ.
- ಚುಟುಕು, ಪುಟಕೊನೆಯ ಕಿರುಲೇಖನ, ನೆನಪು ನೆರಳಿನಲ್ಲಿ ಮುಂತಾದವುಗಳ ಕುರಿತು ಪತ್ರವ್ಯವಹಾರ ಮಾಡಲಾಗುವುದಿಲ್ಲ.
- ಲೇಖನದ ಕಾರ್ಬನ್ ಅಥವಾ ಝೆರಾಕ್ಸ್ ಪ್ರತಿಯನ್ನು ಕಳಿಸಲೇಬೇಡಿ.
- ಸ್ವೀಕೃತ ಲೇಖನಗಳನ್ನು ಯಥಾವಕಾಶ ಪ್ರಕಟಿಸಿ ಸೂಕ್ತ ಗೌರವಧನವನ್ನು ನೀಡಲಾಗುವುದು.

## ಚಂದಾದಾರರಿಗೆ ಸೂಚನೆ

- 'ಕಸ್ತೂರಿ' ಪ್ರತಿ ತಿಂಗಳ ೧ನೇ ದಿನಾಂಕದೊಳಗೆ ಪ್ರಕಟವಾಗುವುದು. ತಿಂಗಳಿನ ೨ನೆಯ ದಿನಾಂಕದೊಳಗೆ ನಿಮಗೆ ತಲುಪದಿದ್ದಲ್ಲಿ ಚಂದಾದಾರರು ತಮ್ಮ ಟಪ್ಪಾಲು ಕಚೇರಿಯಲ್ಲಿ ಮೊದಲು ವಿಚಾರಿಸಿ ಅನಂತರ ನಮಗೆ ತಿಳಿಸಬೇಕು. ಈ ಸಂಬಂಧದಲ್ಲಿ ಪತ್ರವ್ಯವಹಾರ ಮಾಡುವಾಗ, ವಿಳಾಸ ಬದಲಾವಣೆಯ ಸಂದರ್ಭದಲ್ಲಿ ದಯವಿಟ್ಟು ಚಂದಾ ನಂಬರು ಸ್ಫುಟವಾಗಿ ನಮೂದಿಸಿರಬೇಕಾದ್ದು ಅತ್ಯವಶ್ಯಕ.

**ಪತ್ರವ್ಯವಹಾರ ವಿಳಾಸ:**
ಪ್ರಸಾರಾಂಗ ವ್ಯವಸ್ಥಾಪಕ,
ಕಸ್ತೂರಿ, ಪೊ.ಬಾ. ನಂ. ೩೦,
ಹುಬ್ಬಳ್ಳಿ-೫೮೦ ೦೨೦.

**ಚಂದಾ ದರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೬-೦೦ |
| ೬ ತಿಂಗಳಿಗೆ ಅಂಚೆ ವೆಚ್ಚ ಸೇರಿ | ರೂ. ೩೫-೦೦ |
| ೧ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೭೦-೦೦ |
| ೨ ವರ್ಷಕ್ಕೆ ಅಂಚೆ ವೆಚ್ಚ ಸೇರಿ | ರೂ. ೧೩೦-೦೦ |

# ಕಸ್ತೂರಿ

ವರ್ಷ: ೩೯ ಮಾರ್ಚ್ ೧೯೯೫ ಸಂಚಿಕೆ: ೭

# ವಿಷಕಂಠ

ಸಮುದ್ರ ಮಥನದಲ್ಲಿ ಹೊರಬಂದ ಹಾಲಾಹಲವನ್ನು ಹೀರಿದ ಹರ 'ವಿಷಕಂಠ'ನೆನಿಸಿದ.

"ಹಾಗೇಕೆ ಅದನ್ನು ಹೀರಿದೆ? ಹೀರಿ ಗಂಟಲಲ್ಲೇ ಉಳಿಸಿಕೊಂಡೆ?" ಎಂದೊಬ್ಬ ಪರಮಭಕ್ತನ ಪ್ರಶ್ನೆಗೆ ಹರ ಉತ್ತರಿಸಿದ:

"ನನ್ನ ವಾಹನ ನಂದಿ, ಪಾರ್ವತಿಯದು ಸಿಂಹ. ನಾವು ಸತಿಪತಿಗಳಾದರೂ ನಮ್ಮ ವಾಹನಗಳು ಬದ್ಧದ್ವೇಷಿಗಳು. ನನ್ನ ಪುತ್ರ ಷಣ್ಮುಖನ ವಾಹನ ನವಿಲು, ನನ್ನ ಕಂಠಾಭರಣ ನಾಗರಾಜ. ಅವರಿಬ್ಬರೂ ಹುಟ್ಟು ವೈರಿಗಳು. ಮಗ ಗಣಪತಿಯ ವಾಹನ ಇಲಿಗೆ ಈ ನಾಗರಾಜನಿಂದ ಜೀವನವೇ ದುರ್ಭರ. ನನ್ನ ಜಟೆಯನ್ನಲಂಕರಿಸಿರುವ ಗಂಗೆ ಹಾಗೂ ನನ್ನಾಕೆ ಪಾರ್ವತಿ ಇಬ್ಬರಲ್ಲೂ ಸವತಿ ಮಾತ್ಸರ್ಯ. ಆದರೆ ಇವರೆಲ್ಲ ನನ್ನ ಪರಿವಾರಕ್ಕೆ ಸೇರಿದವರು. ನನ್ನ ಆಪ್ತರು. ಇವರ ನಡುವಿನ ಈರ್ಷ್ಯೆ, ಕೋಪ, ರಾಗ-ದ್ವೇಷದ ವಿಷದ ದಳ್ಳುರಿಯ ಮಧ್ಯೆಯೆ ನಾನು ದಿನ ಕಳೆಯಬೇಕಾಗಿದೆ. ಹಾಗೆಂದು ಸಹಿಸಲಾರದೆ ಈ ವಿಷವನ್ನು ನಾನು ಪೂರ್ಣ ಕುಡಿದದ್ದೇ ಆದರೆ ನನಗೆ ಮರಣ ನಿಶ್ಚಿತ. ವಿಷವನ್ನು ಹಾಗೆಯೇ ಹೊರಬಿಟ್ಟರೆ ಸರ್ವನಾಶ. ಆದ್ದರಿಂದ ನಾನೊಬ್ಬನೇ ಎಲ್ಲವನ್ನೂ ಸಹಿಸಬೇಕೆಂದೇ ಈ ವಿಷವನ್ನು ಗಂಟಲಲ್ಲಿ ಧರಿಸಿದ್ದೇನೆ."

ಈ ಪ್ರಪಂಚದ ಎಲ್ಲ ಸಂಸಾರಗಳಲ್ಲೂ ನಡೆಯುವುದು ಇದೇ ರೀತಿ. ಸಂಸಾರ ಬಂಧನದಲ್ಲಿನ ಹಾಲಾಹಲವನ್ನು ತಡೆಯಲಾರದೇ ಒಳಗೆ ಇಳಿಯಲುಬಿಟ್ಟರೆ ನಮ್ಮನ್ನೇ ನಾವು ನಾಶಪಡಿಸಿಕೊಂಡಂತೆ. ಸಂಸಾರದ ಸದಸ್ಯರಿಂದ ಬರುವ ಟೀಕೆ, ಟಿಪ್ಪಣಿ, ಕ್ರೋಧ, ದ್ವೇಷ ಮುಂತಾದ ವಿಷವನ್ನು ನಾವೇ ತಡೆಯದೇ ಹೊರಹರಿಯಲು ಬಿಟ್ಟರೆ ಜನರ ಮಾತಿನ ದಳ್ಳುರಿಯ ವಿಷಜ್ವಾಲೆ ಇಡೀ ಸಂಸಾರವನ್ನೇ ಆಹುತಿ ತೆಗೆದುಕೊಳ್ಳುತ್ತದೆ. ಸಂಸಾರದ ರಹಸ್ಯದ ಹಾಲಾಹಲವನ್ನು ಹೊರಗೆ ಹೋಗಲೂ ಬಿಡದೆ ಒಳಗೆ ಸೇರಿಸಿಕೊಂಡು ನಮ್ಮನ್ನೇ ನಾವು ನಾಶಪಡಿಸಿಕೊಳ್ಳದೇ ಗಂಟಲಲ್ಲೇ ಇರಿಸಿಕೊಂಡು ನಮ್ಮ ಸಂಸಾರವನ್ನು ಕಾಪಾಡಿಕೊಳ್ಳಬೇಕು. ಪ್ರತಿಯೊಬ್ಬ ವ್ಯಕ್ತಿಯೂ ವಿಷಕಂಠನಾಗಬೇಕು.

● ಟಿ.ಎಸ್. ಲಲಿತ



# ಕನ್ನಡಕ್ಕೆ ಗಳಗನಾಥರ ಕಾಣಿಕೆ

• ಬೆಟಗೇರಿ ಕೃಷ್ಣಶರ್ಮ

**ಗಳಗನಾಥರೆಂದರೆ ಸಾಕು, ಅವರು ಕನ್ನಡ ಕಾದಂಬರಿಲೋಕದ ಆದ್ಯ ಪ್ರವರ್ತಕರಲ್ಲೊಬ್ಬರೆಂಬುದು ನೆನಪಿಗೆ ಬರುತ್ತದೆ. ಕನ್ನಡಿಗರಲ್ಲಿ ಓದುವ ಅಭಿರುಚಿಯನ್ನು ಹುಟ್ಟಿಸಿದ ಗಳಗನಾಥರು ಇಂದಿನ ಕೆಲ ಲೇಖಕರಂತೆ ಐಷಾರಾಮಿಯಾಗಲಿಲ್ಲ; ಪ್ರಸಿದ್ಧಿಗಾಗಿ ಹಂಬಲಿಸಲಿಲ್ಲ. ಬರೆದು ಮುದ್ರಿಸಿ ಪ್ರಕಟಿತ ಗ್ರಂಥಗಳ ಗಂಟು ಹೊತ್ತು ಊರೂರು ಅಲೆದರು. 'ಸದ್ಬೋಧ ಚಂದ್ರಿಕೆ'ಯ ಮೂಲಕ ಕಾದಂಬರಿಗಳನ್ನು ಧಾರಾವಾಹಿಯಾಗಿ ಪ್ರಕಟಿಸುವ ಯೋಚನೆಯನ್ನು ಮೊಟ್ಟಮೊದಲ ಬಾರಿಗೆ ಮಾಡಿದವರೇ ಗಳಗನಾಥರು. ಈಗ ಅವರ ೧೨೫ ಜನ್ಮವರ್ಷದ ಸಂದರ್ಭ. ಅವರಿಂದ ಪ್ರಭಾವಿತರಾಗಿ, ಅವರನ್ನು ಕಂಡು ಮಾತನಾಡುವ ಭಾಗ್ಯ ಪಡೆದಿದ್ದವರು ನಮ್ಮ ಇನ್ನೊಬ್ಬ ಹಿರಿಯ ಕಾದಂಬರಿಕಾರ ಬೆಟಗೇರಿ ಕೃಷ್ಣಶರ್ಮ. ಅವರು ೧೯೬೮ರ ಜನವರಿ ೫ರ 'ಕರ್ಮವೀರ'ದ ಗಳಗನಾಥ ವಿಶೇಷಾಂಕದಲ್ಲಿ ಬರೆದಿದ್ದ ಈ ಲೇಖನವನ್ನು ನಿಮಗಾಗಿ ಎತ್ತಿ ಪ್ರಕಟಿಸುತ್ತಿದ್ದೇವೆ.**

---

ಕನ್ನಡಿಗರಿಗೆ ದಿ. ಗಳಗನಾಥರ ಪರಿಚಯವನ್ನು ಹೊಸತಾಗಿ ಮಾಡಿಕೊಡಬೇಕಾದುದೇನೂ ಇಲ್ಲ. ಅಖಿಲ ಕರ್ನಾಟಕಕ್ಕೂ ಅವರ ಹೆಸರು ಅವಿಸ್ಮರಣ'ೀಯ ಪರಿಚಯದ್ದಾಗಿದೆ. ಅವರ ನಿಜವಾದ ಹೆಸರು 'ವೆಂಕಟೇಶ ತಿರಕೊ ಕುಲಕರ್ಣಿ' ಎಂಬುದನ್ನು ಎಷ್ಟು ಜನರು ಅರಿತಿರುವರೋ, ಅರಿತವರು ಎಷ್ಟು ಜನ ಜ್ಞಾಪಕದಲ್ಲಿ ಇರಿಸಿಕೊಂಡಿರುವರೋ! ಆದರೆ ಕಾದಂಬರಿ ಲೇಖಕ ಗಳಗನಾಥರನ್ನು ಸಾಕ್ಷರಿ ಕನ್ನಡಿಗರೆಲ್ಲರೂ ಚೆನ್ನಾಗಿ ಅರಿತಿರುವರು. ನಿರಕ್ಷರಿಗಳಿಗೆ ಕೂಡ ಅವರು ಅಪರಿಚಿತರಾಗಿರಲಿಲ್ಲವೆಂಬುದು ನನ್ನ ಪ್ರತ್ಯಕ್ಷಾನುಭವದ ಸಂಗತಿ.

೧೯೨೪ನೆಯ ಡಿಸೆಂಬರ್ ತಿಂಗಳ ಕೊನೆಯ ವಾರದಲ್ಲಿ ಬೆಳಗಾವಿಯಲ್ಲಿ ಜರುಗಿದ ಅಖಿಲ ಭಾರತ ರಾಷ್ಟ್ರೀಯ ಮಹಾಸಭೆಯ ಅಧಿವೇಶನವನ್ನು ಮುಗಿಸಿಕೊಂಡು, ವಿಶ್ರಾಂತಿಗೆಂದು ನಾನು, ನನ್ನ ಹುಟ್ಟಿದೂರಿಗೆ ಹೋಗಿ ಇದ್ದು ಕೆಲವು ದಿನಗಳನ್ನು ಅಲ್ಲಿ ಕಳೆದೆ. ಆಗ ಪ್ಲೇಗಿನ ಮೂಲಕ ನಮ್ಮ ಹಳ್ಳಿಯ ಜನರೆಲ್ಲರೂ ಹೊಲ-ತೋಟಗಳಲ್ಲಿ ತಮ್ಮ ತಮ್ಮ ಅನುಕೂಲತೆಯಂತೆ ಬೇರೆ ಬೇರೆ ಗುಡಿಸಲುಗಳನ್ನು ಕಟ್ಟಿಕೊಂಡು, ನಿಸರ್ಗ ಸೌಂದರ್ಯೋಪಾಸಕರಾಗಿ ಬಿಡಾರ ಬಿಟ್ಟಿದ್ದರು. ಹಳ್ಳಿಯ ಪಡುವಲು ನಿಟ್ಟಿನಲ್ಲಿರುವ ನಮ್ಮ ತೋಟದಲ್ಲಿ ನಮ್ಮ ಮತ್ತು ಬೇರೆ ಕುಟುಂಬಗಳ ಇಪ್ಪತ್ತು ಇಪ್ಪತ್ತೈದು ಗುಡಿಸಲುಗಳಿದ್ದವು. ಎಲ್ಲ ಗುಡಿಸಲುಗಳ ಒಡೆಯರು ಶ್ರೀಮಂತರಿರಲಿಲ್ಲವಾದರೂ ಅವರು ಬಡವರೇನೂ ಅಲ್ಲ.

ಹಗಲು ಹೊತ್ತಿನಲ್ಲಿ ಅವರೆಲ್ಲರೂ ನಿಶ್ಚಿಂತ

ನಿರ್ಭೀತರಾಗಿ ಬಾಳನ್ನು ನಡೆಯಿಸುತ್ತಿದ್ದರಾದರೂ ನಿತ್ಯವೂ ಬರುವ ಇರುಳುಗಳು ಅವರಿಗೆ ಭೀತಿ ಚಿಂತೆಗಳ ವಿಷಯಗಳಾಗಿದ್ದವು. ಆದುದರಿಂದಲೆ ಅಲ್ಲಿಯ ಹೊಣೆಗಾರ ಮುಂದಾಳುಗಳೆಲ್ಲರೂ ರಾತ್ರಿಯಲ್ಲಿ ಬಹಳ ವೇಳೆಯನ್ನು ಎಚ್ಚರಿದ್ದೇ ಕಳೆಯಬೇಕಾಗಿದ್ದಿತು. ನಮ್ಮ ಗುಡಿಸಿಲ ಪಕ್ಕದಲ್ಲಿಯೆ ಇಬ್ಬರು ಕಿರಾಣಿ ಅಂಗಡಿಕಾರರ ಗುಡಿಸಿಲುಗಳಿದ್ದುವು. ಇಬ್ಬರಿಗೂ ತಮ್ಮ ಅಂಗಡಿಗಳನ್ನು ಸಂರಕ್ಷಿಸುವ ಚಿಂತೆ ವಿಶೇಷವಾಗಿದ್ದಿತು. ಅವರಲ್ಲಿಯ ಒಬ್ಬನು ದಿ. ಗಳಗನಾಥರ ಕಾದಂಬರಿಯ ಭಕ್ತ. ತನಗೆ ಚೆನ್ನಾಗಿ ಓದಲಿಕ್ಕೆ ಬರುತ್ತಿರಲಿಲ್ಲವಾದರೂ ಅವರ ಎಲ್ಲ ಕಾದಂಬರಿಗಳನ್ನೂ ಬೆಲೆ ಕೊಟ್ಟು ಕೊಂಡು ತನ್ನ ಸಂಗ್ರಹದಲ್ಲಿ ಇರಿಸುತ್ತಿದ್ದನು; ತನಗೆ ಸಮಯ ದೊರೆತಾಗಲೆಲ್ಲ ಗಳಗನಾಥರ ಯಾವುದಾದರೊಂದು ಪುಸ್ತಕವನ್ನು ಕಣ್ಣೆದುರು ಹಿಡಿದುಕೊಂಡು ಒಂದು ಬಗೆಯ ರಾಗದೊಂದಿಗೆ ನಿಧಾನವಾಗಿ ಓದುತ್ತಿರುವುದು ಆತನ ಪದ್ಧತಿ.

ಆ ಅಂಗಡಿಕಾರ, ಗುಡಿಸಲುಗಳ ಕಾವಲಿಗಾಗಿ ಎಚ್ಚರಿರಬೇಕಾದವರನ್ನೆಲ್ಲ ತನ್ನ ಅಂಗಡಿಯ ಮುಂದಣ ಅಂಗಳದಲ್ಲಿ ರಾತ್ರಿ ಒಟ್ಟುಗೂಡಿಸಿ ಅವರೆದುರು ತನ್ನದೇ ಆದ ವಿಶಿಷ್ಟ ರಾಗಮಯ ವಾಚನ ಪದ್ಧತಿಯಿಂದ ಕಾದಂಬರಿಗಳನ್ನು ಓದಿ ಹೇಳುತ್ತಿದ್ದನು. ನಾನು ಹಳ್ಳಿಗೆ ಹೋದ ದಿನದ ರಾತ್ರಿಯೇ ಈ 'ಕಾದಂಬರಿ ಕಾಲಕ್ಷೇಪ'ದ ಕೂಟದಲ್ಲಿ ಭಾಗವಹಿಸಲು ಹೋಗಿ ಕುಳಿತೆ. ನನ್ನ ಕಾದಂಬರಿ ವಾಚನದ ಪದ್ಧತಿ, ಆ ಅಂಗಡಿಕಾರನಿಗೆ ಚೆನ್ನಾಗಿ ಗೊತ್ತು. ಏಕೆಂದರೆ ಯಾವಾಗಲಾದರೂ ನಾನು ಅವನ ಅಂಗಡಿಗೆ ಹರಟೆ ಹೊಡೆಯಲು ಹೋದಾಗ ಯಾವುದಾದರೊಂದು ಕಾದಂಬರಿಯನ್ನು ನನ್ನ ಕೈಗೆ ಕೊಟ್ಟು, ನನ್ನಿಂದ ಓದಿಸಿ ಕೇಳಿ ಭಾವಾನಂದವನ್ನು ಅನುಭವಿಸುತ್ತಿದ್ದನು. ಎಂತಲೆ ನಾನಂದು ಹೋದೊಡನೆಯೆ "ನಾವೇನು ದಿನಾ ಓದತೀವಿ, ಇಂದ ಸಣ್ಣ ಗೌಡರು ಬಂದಾರು; ಅವರ ಓದಲಿ" ಎಂದು ಅಂಗಡಿಕಾರ ಗಳಗನಾಥರ 'ಈಶ್ವರೀಸೂತ್ರ' ಕಾದಂಬರಿಯನ್ನು ನನ್ನ ಕೈಯಲ್ಲಿ ಕೊಟ್ಟ. ಆಗ ನಾನು ಪ್ರಯಾಣದಿಂದ ದಣಿದಿದ್ದರೂ ಒಲ್ಲೆನೆಂದು ಹೇಳದೆ ಕಾದಂಬರಿಯನ್ನು ಓದಲು ತೊಡಗಿದೆ.

ನಾನು ಓದಿ ತೋರಿಸುವ ಪದ್ಧತಿಯ ಮೂಲಕ ಕಥೆಯ ಪ್ರಸಂಗಗಳು, ಕೂಡಿದ ಜನರೆಲ್ಲರಿಗೂ ಚೆನ್ನಾಗಿ ತಿಳಿಯತೊಡಗಿದವು. ಎಲ್ಲರೂ ವಿವಿಧ ಭಾವಗಳನ್ನು ಅನುಭವಿಸುತ್ತ ಮೈ ಕೈ ಕದಲದಂತೆ ಕುಳಿತು ಮನಗೊಟ್ಟು ಕೇಳಿ ಆನಂದಪಟ್ಟರು. ಅಂದಿನ ನನ್ನ ವಾಚನದ ಪರಿಣಾಮದಿಂದ ಶ್ರೋತೃಗಳಲ್ಲಿಯ ಹಿರಿಯನೊಬ್ಬ ಆವಿಷ್ಟನಾಗಿ ಮಾತನಾಡಿದ.

*ಒಮ್ಮೆ ಬಸವಜಯಂತಿಯ ಉತ್ಸವಕ್ಕೆ ಹಾವೇರಿಯ ಹಿರಿಯ ನಾಯಕರಾದ ಚೆನ್ನಪ್ಪ ಚೌಶೆಟ್ಟಿಯವರು ಎಂ.ಆರ್. ಶ್ರೀನಿವಾಸಮೂರ್ತಿ, ಬಿ.ಎಂ. ಶ್ರೀಕಂಠಯ್ಯ ಮತ್ತು ಟಿ.ಎಸ್. ವೆಂಕಣ್ಣಯ್ಯ ಅವರನ್ನು ಕರೆಸಿದ್ದರು. ಅವರುಗಳು ತುಂಬಿದ ಸಭೆಯಲ್ಲಿ, "ಪಾಂಡಿತ್ಯದ ಸಮುದ್ರವೇ (ಗಳಗನಾಥರು) ನಿಮ್ಮಲ್ಲಿರುವಾಗ ನಮ್ಮಂಥ ಹೊಳೆ-ಹಳ್ಳಗಳನ್ನು ಏಕೆ ಕರೆಸಿದಿರಿ?" ಎಂದು ಕೇಳಿದರಂತೆ.*

• ಪ್ರೊ. ಕೃಷ್ಣಮೂರ್ತಿ ಕಿತ್ತೂರ



"ಸಣ್ಣ ಗೌಡರ, ಎಂಥಾ ಪಾಡ ಓದತೀರೀ ನೀವು ? ಕತೀ ಒಳಗಿನ ಸಂಗತಿಗೋಳೆಲ್ಲಾ ಕಣ್ಣ ಮುಂದ ಬಂದು ನಿಂತ್ಹಾಂಗ ಆಗತಾವ ! ಚೇ ಚೇ ಚೇ ! ಗೌಡರ, ನೀವು ಇಲ್ಲಿ ಇರೂತನಕಾ ದಯ ಮಾಡಿ ದಿನಾ ನೀವ ಓದಿ ತೋರಿಸಲಾಕ ಬೇಕರೀ !"

ಹಿರಿಯನ ಈ ಮಾತನ್ನು ಕಾವಲು ಕೂಟದ ವರೆಲ್ಲರೂ ಪುರಸ್ಕರಿಸಿ, ನನಗೆ ಬಿನ್ನವಿಸಿಕೊಳ್ಳತೊಡಗಿದರು. ಅವರ ಮಾತನ್ನು ಮೀರಲಾರದವನಾಗಿ ನಿತ್ಯವೂ ನಾನೇ ಓದಲುತೊಡಗಿದೆ. ಈ ವರ್ತಮಾನ ಉಪ್ಪುಕಾರದ ರುಚಿಯ ಬಣ್ಣನೆಯೊಂದಿಗೆ ಬೇರೆ ಕಡೆಯ ಗುಡಿಸಿಲ ಗುಂಪಿನವರ ಕಿವಿಗೆ ಬೀಳಲು ಅಲ್ಲಿಯ ರಸಿಕರೂ ಹಿಂಡುಗಟ್ಟಿಕೊಂಡು ನಮ್ಮ ಕಾದಂಬರಿ ಶ್ರವಣಕ್ಕೆ ಬರಲುತೊಡಗಿದರು. ನಮ್ಮ ಗುಡಿಸಿಲ ಗುಂಪಿನವರಿಗೆ ತಮ್ಮ ಬದುಕಿನ ಕಾವಲಿನ ಚಿಂತೆ ಅನಾಯಾಸವಾಗಿಯೆ ತಪ್ಪಿಹೋಯಿತು. ಏಕೆಂದರೆ ದಿನದಿನಕ್ಕೂ ಶ್ರೋತೃಗಳ ಸಂಖ್ಯೆ ಹೆಚ್ಚತೊಡಗಿತು. ಓದುವ ಕಾಲವೂ ಬೆಳೆಯತೊಡಗಿತು. ನಾನಲ್ಲಿ ಇದ್ದ ಕೆಲವು ದಿನಗಳಲ್ಲಿ 'ಈಶ್ವರೀ ಸೂತ್ರ'ವೊಂದಲ್ಲದೆ, 'ಕಮಲಕುಮಾರಿ', 'ಕುಮುದಿನಿ', 'ಸತ್ವಸಾರ', 'ಕ್ಷಾತ್ರತೇಜ', 'ಶಿವಪ್ರಭುವಿನ ಪುಣ್ಯ', 'ಮರಾಠರ ಅಭ್ಯುದಯ', 'ಛತ್ರಪತಿ' ಮೊದಲಾದ ಗಳಗನಾಥರ ಐತಿಹಾಸಿಕ ಕಾದಂಬರಿಗಳನ್ನೇ ಓದಿ ತೋರಿಸಿದೆ. ನಿರಕ್ಷರಿಯಾದ ಆ ಶ್ರೋತೃವರ್ಗವು ಆ ಕಾದಂಬರಿಗಳನ್ನು ಬರೆದವರಾರೆಂದು ಕೇಳಿ, ಮೆಚ್ಚಿಕೆ, ಅಚ್ಚರಿಯ ನುಡಿಗಳಿಂದ ಬರೆದವನನ್ನು ಕೊಂಡಾಡುತ್ತಲಿದ್ದರು.

ನಾನು ಒಂದು ಸಲ ಆ ಶ್ರೋತೃಗಳ ಮನದೊಲವನ್ನು ಪರೀಕ್ಷಿಸಬೇಕೆಂದು ಗಳಗನಾಥರದಲ್ಲದ ಒಂದು ಸಾಮಾಜಿಕ ಕಾದಂಬರಿಯನ್ನು ಓದಿ ತೋರಿಸಲು ತೊಡಗಿದೆ. ಸುಶಿಕ್ಷಿತ ಪ್ರಪಂಚದಲ್ಲಿ ಅದು ಒಳ್ಳೆಯ ಕಾದಂಬರಿಯೆಂದು ಖ್ಯಾತಿ ಪಡೆದಿದ್ದರೂ, ನಮ್ಮ ಹಳ್ಳಿಗರ ರಸಾಭಿರುಚಿಗೆ ಅದು ಅಷ್ಟೊಂದು ಒಪ್ಪಿಗೆಯಾಗಲಿಲ್ಲ. ಯಾವುದೋ ದಾಕ್ಷಿಣ್ಯಕ್ಕೆ ಕಟ್ಟುಬಿದ್ದು ಜನರೆಲ್ಲ ಕುಳಿತು ಕೇಳುತ್ತಿದ್ದರಾದರೂ ಆ ಕಾದಂಬರಿಯಲ್ಲಿ ತಮಗೆ ಬೇಕಾದ ಜೀವನಚಿತ್ರ ದೊರೆಯದೆ ಹೋಗಲು, ಬಹುಜನರು ಆಕಳಿಸತೊಡಗಿದರು. ಕೆಲವರು ತೂಕಡಿಸಲೂ ತೊಡಗಿದರು. ನಾನದನ್ನು ಅದಷ್ಟಕ್ಕೆ ನಿಲ್ಲಿಸಿ, ಗಳಗನಾಥರ ಕಾದಂಬರಿಯನ್ನು ಓದಲು ತೊಡಗಿದಾಗ ಎಲ್ಲ ಶ್ರೋತೃಗಳೂ ಉತ್ಸಾಹವನ್ನು ಮುಖದಲ್ಲಿ ಮೂಡಿಸಿಕೊಂಡಿದ್ದರು. ಆಕಳಿಸುವವರೂ ತೂಕಡಿಸುವವರೂ ಯಾರೂ ಅಲ್ಲಿ ಕಣ್ಣಿಗೆ ಬೀಳಲಿಲ್ಲ. ಗಳಗನಾಥರ ಕಾದಂಬರಿಗಳ ಕಥಾವಸ್ತು, ಬೆಳವಣಿಗೆ, ಕಥನ ರೀತಿ- ಇವೆಲ್ಲ ಪಂಡಿತ-ಪಾಮರರಿಬ್ಬರ ಮನಸ್ಸಿಗೂ ಮೆಚ್ಚಿಗೆಯೆನಿಸಿದುದು, ಅವರದೇ ಆದ ಒಂದು ವೈಶಿಷ್ಟ್ಯವಾಗಿದೆಯೆಂಬುದು ನಾನು ಕಂಡುಂಡ ವಿಷಯವಾಗಿದೆ.

## ಕಾದಂಬರಿ ಲೇಖನ

೨೦ನೆಯ ಶತಮಾನದ ಮೊದಲ ದಶಕದ ಕೊನೆಯ ಭಾಗದಲ್ಲಿ ಪ್ರಾರಂಭವಾದ ಗಳಗನಾಥರ ಸಾಹಿತ್ಯ ಕೀರ್ತಿಯ ಭೇರಿ, ಮುಂದಿನ ಎರಡು ದಶಕಗಳಲ್ಲಿ ಅವರ ವಿಜಯದುಂದುಭಿಯ ಉತ್ಸಾಹ ಧ್ವನಿಯಾಗಿ ನಮ್ಮ ನಾಡಿನ ದಿಕ್ಕು-ದಿಕ್ಕುಗಳನ್ನೂ ವ್ಯಾಪಿಸಿ ನಿಂತಿತು. ನೆರೆಯ ನಾಡುಗಳಲ್ಲಿಯೂ ನುಗ್ಗಿ- ನುಸುಳತೊಡಗಿತು. ಆಗ 'ಗಳಗನಾಥ' ಎಂಬ ಹೆಸರು, 'ಕಾದಂಬರಿ ಲೇಖಕ' ಎಂಬ ಅರ್ಥವನ್ನು ಕೊಡತೊಡಗಿತು.

ಗಳಗನಾಥರು ಲೇಖನ ರಂಗಕ್ಕೆ ಬರುವ ಮೊದಲು ನಮ್ಮ ಉತ್ತರ ಕರ್ನಾಟಕದಲ್ಲಿ ಕಾದಂಬರಿ ಸಾಹಿತ್ಯ ಪ್ರಪಂಚದ ಸ್ಥಿತಿಯು ಹೇಗಿದ್ದಿತು ? ದಿವಂಗತ ತುರಮರಿಯವರು ಸಂಗ್ರಹಿಸಿ ಅನುವಾದಿಸಿದ ಬಾಣನ ಕಾದಂಬರಿಯೊಂದೇ ಅಂದಿನ ವಾಚಕರ ಕೈಗೆ ದೊರೆಯುತ್ತಿತ್ತು. ದಿವಂಗತ ವಾಸುದೇವಾಚಾರ್ಯ ಕೆರೂರ ಅವರ 'ಇಂದಿರಾ' ಎಂಬ ಸಾಮಾಜಿಕ ಕಾದಂಬರಿಯು ಪ್ರಕಾಶಗೊಂಡಿದ್ದಿತಾದರೂ, ಅದೇಕೋ ಏನೋ- ಅದು ಸಾಮಾನ್ಯ ವಾಚಕರ ಕೈಗೆ ಬಂದು ನಿಲುಕಿರಲಿಲ್ಲ. ಬಳ್ಳಾರಿಯ ಸೆಟ್ಟರು ಪ್ರಕಟಿಸಿದ 'ಮಂಜುಘೋಷಾ', 'ಸೂರ್ಯಕಾಂತ ಕಾದಂಬರಿ', 'ಹಾತೀಮತಾಯಿ', ಮೊದಲಾದ ಅದ್ಭುತ ರಮ್ಯ ಕಥೆಗಳೂ ಅಂದು ಕಾದಂಬರಿಗಳೆನಿಸಿಕೊಳ್ಳುತ್ತಿದ್ದವು. ದೂರವೇಕೆ ದಿವಂಗತ ಗಳಗನಾಥರವರ ಮೊತ್ತಮೊದಲಿನ ಕಾದಂಬರಿಯನ್ನು ನೋಡಿದರೆ, ಕಾದಂಬರಿಯೆಂದರೆ ಅದ್ಭುತ ರಮ್ಯ ಕಥೆಯೇ- ಎಂದು, ಅವರ

ಅಭಿಪ್ರಾಯವೂ ಆಗಿನ ಕಾಲದಲ್ಲಿ ಇದ್ದಿತೆಂದು ತೋರುವುದು. ದಿವಂಗತ ಬಿ. ವೆಂಕಟಾಚಾರ್ಯರ ಕೆಲವು ಬಂಗಾಲಿ ಕಾದಂಬರಿಗಳ ಕನ್ನಡಾನುವಾದ ಗಳು ಬೆಳಕಿಗೆ ಬಂದಿದ್ದುವಾದರೂ, ಅವರ ಪ್ರಾಯೋಗಿಕ ಗದ್ಯಶೈಲಿಯ ಜಟಿಲತೆಯ ಮೂಲಕ, ತುಂಗಭದ್ರೆಯಿಂದ ಈಚೆಗಿರುವ ಕನ್ನಡಿ ಗರ ಮನವನ್ನು ಅವು ಆಕರ್ಷಿಸಿರಲಿಲ್ಲ. ನೂತನ ಮಾರ್ಗದ ಸ್ವತಂತ್ರ ಕಾದಂಬರಿಗಳ ನಿರ್ಮಿತಿ ಒತ್ತ ಟ್ಟಿಗಿರಲಿ, ಪಶ್ಚಿಮದ ಭಾಷೆಗಳಿಂದಾಗಲಿ, ಅದಾ ಗಲೇ ಜಾಗೃತವಾಗಿ ಕಾದಂಬರಿ ರಂಗದಲ್ಲಿ ಮುಂದುವರೆದ ಭಾರತೀಯ ಭಾಷೆಗಳಿಂದಾಗಲಿ, ಅನುವಾದಿತ ಕಾದಂಬರಿಗಳಿಗೂ ಅಂದು ಉತ್ತರ ಕರ್ನಾಟಕವು ಶೂನ್ಯ ಸ್ಥಾನವೇ ಆಗಿದ್ದಿತು. ಓದಬೇ ಕೆಂದು ಅಪೇಕ್ಷೆಯಿದ್ದ ಜನರು, ಎಂತೆಂತಹ ಅಸ್ವಾ ಭಾವಿಕ ಕಥೆಯ ಕಗ್ಗಗಳನ್ನೇ ಅನಿವಾರ್ಯವೆಂದು ಓದುತ್ತಲಿದ್ದರು. ಕಾದಂಬರಿ ವಿಷಯಕವಾದ ಇಂತಹ ಕಗ್ಗತ್ತಲೆಯ ಕಾಲದಲ್ಲಿ ಗಳಗನಾಥರ ಅನುವಾದಿತ ಕಾದಂಬರಿಯ ತಾರೆಗಳು ಒಂದೊಂ ದಾಗಿ ಬಾನ ಬಯಲಲ್ಲಿ ಮಿನುಗತೊಡಗಿದವು.

## ಪ್ರಥಮ ದರ್ಶನ

ಆ ಕಾಲದಲ್ಲಿಯ ಸಾಕ್ಷರಿ ಕನ್ನಡಿಗರಂತೆ, ಗಳ ಗನಾಥರೂ ತಮ್ಮ ಬಾಳು-ಬದುಕಿನ ಕಾರ್ಯವಷ್ಟೇ ತಮ್ಮ ಕರ್ತವ್ಯವೆಂದು ಭಾವಿಸಿ, ಕಾದಂಬರಿಗಳ ಅನುವಾದ ಕಾರ್ಯವನ್ನು ಉಪೇಕ್ಷಿಸಿಬಿಟ್ಟಿದ್ದರೆ, ಕನ್ನಡ ಕಾದಂಬರಿ ಪ್ರಪಂಚಕ್ಕೆ ಶುಭ ಭವಿಷ್ಯವೇ ಇರುತ್ತಿರಲಿಲ್ಲ. ಅದರಂತೆಯೇ ಕನ್ನಡಿಗರಲ್ಲಿ ವಾಚ ನದ ಅಭಿರುಚಿಯೂ ಬೆಳೆಯುತ್ತಿರಲಿಲ್ಲ. ಆದರೆ ದೈವಸಂಕಲ್ಪದ ನೆಲೆಯನ್ನು ಅರಿತವರಾರು? ಕನ್ನಡ ಕಾದಂಬರಿ ಸಾಹಿತ್ಯಕ್ಕೂ ಒಳ್ಳೆಯ ಭವಿಷ್ಯ ವನ್ನು ಬೇಗನೆ ತರಬೇಕೆಂದು ದೈವ ಸಂಕಲ್ಪಿಸಿದ್ದಿ ತೇನೋ! ತನ್ನ ಸಂಕಲ್ಪಿತ ಕಾರ್ಯ ಸಾಧನೆಗಾಗಿ ಮುಂಚೂಣಿಯ ಕಾರ್ಯಕರ್ತರನ್ನಾಗಿ ಗಳಗನಾಥ ರಂತಹ ದೃಷ್ಟಾರರನ್ನು ನಮಗೆ ಒದಗಿಸಿಕೊಟ್ಟಿತು. ಅವರು ಕೈಗಡ ತಂದು ಬಿತ್ತಿ ಕೃಷಿ ಮಾಡಿದ ಬೀಜಗಳೇ, ಇಂದಿನ ನಮ್ಮ ಏಳ್ಗೆವೆತ್ತ ಸ್ವತಂತ್ರ ಕಾದಂಬರಿ ಸಾಹಿತ್ಯದ ಸತ್ಫಲಗಳಿಗೆ ಪ್ರೇರಕವಾಗಿದೆ; ಪೋಷಕವಾಗಿದೆ.

ಗಳಗನಾಥರು, ಒಂದು ಹಳ್ಳಿಯ ಕುಲಕರ್ಣಿ ಗಳ ಮನೆತನದಲ್ಲಿ ಹುಟ್ಟಿದರು. ಮೂರನೆಯ ವರ್ಷದ ಕನ್ನಡ ಟ್ರೇನಿಂಗ್ ಕಾಲೇಜಿನ ಪರೀಕ್ಷೆ ಯನ್ನು ಮುಗಿಸಿ, ಧಾರವಾಡ ಜಿಲ್ಲೆಯ ಬೇರೆ ಬೇರೆ ಹಳ್ಳಿಗಳಲ್ಲಿ ಪ್ರಾಥಮಿಕ ಶಾಲೆಯಲ್ಲಿ ಶಿಕ್ಷಕ ರಾಗಿ ಕೆಲಸ ಮಾಡಿದರು. ಅವರ ಸಮಕಾಲೀನ ರಾದ ಪ್ರಾಥಮಿಕ ಶಾಲೆಯ ಶಿಕ್ಷಕರು ಎಷ್ಟು ಜನರಿರಲಿಕ್ಕಿಲ್ಲ! ಅವರಲ್ಲಿಯ ಅನೇಕ ಜನರು 'ಒಳ್ಳೆಯ ಶಿಕ್ಷಕರು' ಎಂದು ಮೇಲಿನ ಅಧಿಕಾರಿಗ ಳಿಂದ ಕೊಂಡಾಡಿಸಿಕೊಂಡಿರಲೂಬಹುದು. ಆದರೆ ಅವರಾರ ಹೆಸರೂ ಇಂದು ಕಿವಿಗೆ ಬೀಳುತ್ತಿಲ್ಲ. ಅವರೆಲ್ಲರೂ ಕಣ್ಮರೆಯಾಗಿ ಹೋಗಿದ್ದಾರೆ. ಕರ್ನಾ ಟಕ ಸಾಂಸ್ಕೃತಿಕ ಚರಿತ್ರೆಯಲ್ಲಿ ಅವರಾರ ಹೆಸರೂ ನೋಡಲು ಸಿಕ್ಕಲಾರದು. ಆದರೆ, ಗಳಗನಾಥರ ಹೆಸರೂ ಅವರ ಕಾರ್ಯವೂ ಆ ಇತಿಹಾಸದ ಪುಟಗಳನ್ನು ಅಲಂಕರಿಸಿ ಚಿರಕಾಲ ಉಳಿಯುವಂ ತಹದು. ಇಂದಿನ ನಮಗೆ ಪ್ರಾಥಮಿಕ ಶಾಲೆಯ ಶಿಕ್ಷಕರೆಂದು ಅವರು ಪರಿಚಿತರಲ್ಲ; ಅನೇಕ ಗ್ರಂಥ ರತ್ನಗಳ ಹಾರವನ್ನು ಕನ್ನಡ ಶಾರದೆಯ ಕೊರಳಿಗೆ ಅರ್ಪಿಸಿದ ಸಾಂಸ್ಕೃತಿಕ ಪುರುಷರಾಗಿ ನಮ್ಮೆಲ್ಲರ ಎದೆಯ ಕಣ್ಣುಗಳ ಮುಂದೆ ಪ್ರತ್ಯಕ್ಷವಾಗಿ ಅವರು ನಿಂತಿದ್ದಾರೆ, ತಮ್ಮ ಕಾರ್ಯದಿಂದ ಅವರು ಅಮ ರರಾಗಿದ್ದಾರೆ. ಅವಿಸ್ಮರಣೀಯ ಕಾರ್ಯವನ್ನವರು ಮಾಡಿ ಮರೆಯಾಗಿದ್ದಾರೆ.

ನನ್ನ ವಯಸ್ಸಿನ ಹತ್ತನೆಯ ವರ್ಷದಿಂದಲೂ ಗಳಗನಾಥರು ನನಗೆ ಪರಿಚಿತರು- ಪ್ರತ್ಯಕ್ಷವಾಗಿ ಯಲ್ಲ; ಅವರ ಕಾದಂಬರಿಗಳ ಮೂಲಕ. ನನ್ನ ಎಳೆಯ ವಯಸ್ಸಿನಲ್ಲಿಯೇ ಅವರು ನನ್ನಿಂದ ಹೃದ ಯದ ಆದರದ ಕಾಣಿಕೆಯನ್ನು ಪಡೆಯುತ್ತಿದ್ದರು. ಗಳಗನಾಥರ ಕಾದಂಬರಿಯೆಂದರೆ, ನನ್ನ ಮನಸ್ಸು ಚಿಗರೆಯಂತೆ ಜಿಗಿಯುತ್ತಿದ್ದಿತು. ಅವರ ಮೊದಮೊ ದಲಿನ ಕಾದಂಬರಿಗಳು ಹೆಚ್ಚಾಗಿ, 'ಸದ್ಬೋಧ ಚಂದ್ರಿಕೆ' ಎಂಬ ಮಾಸಪತ್ರಿಕೆಯ ನಿಯಮಿತ ಪುಟಗಳಲ್ಲಿ, ಕ್ರಮಕ್ರಮವಾಗಿ ಪ್ರಕಟವಾಗಿ ಬರುತ್ತಿ ದ್ದವು. ಆದುದರಿಂದ ಪ್ರತಿ ತಿಂಗಳ ಸಂಚಿಕೆಯನ್ನು ಬೇಗನೆ ದೊರಕಿಸಿ ಓದಬೇಕೆಂಬ ನನ್ನ ಆತುರವು, ೪-೫ ಮೈಲುಗಳ ಅಂತರದಲ್ಲಿದ್ದ ಅಂಚೆಯ ಆಫೀಸು ಇರುವ ಊರಿಗೆ ನನ್ನನ್ನು ಆಗಾಗ

*ಶ್ರೀ ಎಸ್. ಗರಳಪುರಿ ಶಾಸ್ತ್ರಿಗಳು (ಎಂಎಸ್.ಸಿ.) ತಾವು ಬರೆದ ಒಂದು ಗ್ರಂಥದ ಹಸ್ತಪ್ರತಿಯನ್ನು ಓದಿತೋರಿಸುವ ಉದ್ದೇಶದಿಂದ ಗಳಗನಾಥರ ನಿವಾಸಕ್ಕೆ ಬರಲು ಅಪೇಕ್ಷಿಸಿದರು. "ನಿಮ್ಮಂಥವರ ಮನೆಗೆ ಬರುವುದು ದೇವರ ಗುಡಿಗೆ ಬಂದ ಹಾಗೆ," ಅಂದರು. ಗಳಗನಾಥರು, "ನನ್ನನ್ನು ಸಂಕೋಚಗೊಳಿಸಬಾರದು ಮನೆ ಚಿಕ್ಕದು...." ಎಂದು ಬಿನ್ನವಿಸಿದರು. ಶಾಸ್ತ್ರಿಗಳು, "ನಿಮ್ಮ ಮನೆಗೆ ಬರುವ ಪುಣ್ಯವನ್ನು ನನಗೆ ಒದಗಿಸಿಕೊಡಿರಿ," ಎಂದರು. ಇಲ್ಲಿ ನಾವು ಯಾರ ವಿನಯ ಹೆಚ್ಚಿನದೆಂದು ಹೇಳೋಣ!*

• ಪ್ರೊ. ಕೃಷ್ಣಮೂರ್ತಿ ಕಿತ್ತೂರ



ಓಡಾಡಿಸುತ್ತಿದ್ದಿತು. ಪತ್ರಿಕೆಯ ಸಂಚಿಕೆ ಕೈಗೆ ದೊರೆತಾಗ, ದಾರಿ ನಡೆದು ಹೋದ ಶ್ರಮವೇ ನನಗೆ ಇರುತ್ತಿರಲಿಲ್ಲ. ಗಳಗನಾಥರವರನ್ನು ಪ್ರತ್ಯಕ್ಷವಾಗಿ ಕಂಡು, ಅವರಿಗೆ ನನ್ನ ಭಕ್ತ್ಯಾದರಗಳನ್ನು ಸಲ್ಲಿಸಬೇಕೆಂದು ನನ್ನ ಹೃದಯ ಹಾರಾಡುತ್ತಿದ್ದಿತು. ಅವರ ಒಂದೊಂದು ಕಾದಂಬರಿಯನ್ನು ಓದಿ ಮುಗಿಸಿದಾಗ, ಅವರ ಒಂದೊಂದು ಬಗೆಯ ರೂಪವನ್ನು ಕಲ್ಪನೆ ಚಿತ್ರಿಸಿ ತೋರಿಸುತ್ತಿದ್ದಿತು. 'ನಮ್ಮಂತೆ ಸಾಮಾನ್ಯ ಮನುಷ್ಯರಾಗಿಯೇನೂ ಅವರು ಇರಲಾರರು!' ಎಂಬ ಗೌರವ ಭಾವವು ಮನದಲ್ಲಿ ತಲೆದೋರುತ್ತಿದ್ದಿತು.

ಅನೇಕ ವರ್ಷಗಳವರೆಗೂ ಗಳಗನಾಥರನ್ನು ನೋಡಬೇಕೆಂಬ ಆಶೆಗೆ ಫಲ ದೊರೆತಿರಲಿಲ್ಲ. ೧೯೨೭ರವರೆಗೂ ಅದಕ್ಕಾಗಿ ಕಾಯಬೇಕಾಯಿತು. ಈ ಅವಧಿಯಲ್ಲಿ ನಾನೂ ಏನೇನನ್ನೋ ಬರೆಯಲು ತೊಡಗಿದ್ದೆ. ಬರೆದವುಗಳಿಗಾಗಿ ಕನ್ನಡ ವಾಚಕ ವರ್ಗದ ಮನ್ನಣೆಯನ್ನೂ ಗಳಿಸಿದ್ದೆ. ಈ ಮನ್ನಣೆಗಾಗಿ ನನ್ನ ತರುಣ ಹೃದಯದಲ್ಲಿ ಹೆಮ್ಮೆ ಮೂಡಿರಬಹುದಾದರೂ, ಗಳಗನಾಥರ ವಿಷಯದಲ್ಲಿದ್ದ ಭಕ್ತ್ಯಾದರಗಳನ್ನು ಹೊಡೆದೋಡಿಸಲು ಅದು ಸಮರ್ಥವಾಗಿರಲಿಲ್ಲ.

೧೯೨೭ರಲ್ಲಿ ನಾನು ಬೆಂಗಳೂರಿನಲ್ಲಿ ಒಂದು ಶಾಲೆಯಲ್ಲಿ ಕನ್ನಡ ಶಿಕ್ಷಕನಾಗಿ ಇದ್ದೆ. ದಿವಂಗತ ದೇವುಡು ನರಸಿಂಹ ಶಾಸ್ತ್ರಿಗಳು, ಆ ಶಾಲೆಯ ಮುಖ್ಯಾಧ್ಯಾಪಕರು. ಇಬ್ಬರೂ ಸಾಹಿತ್ಯ ವ್ಯಸನಿಗಳಾದುದರಿಂದ, ಪರಸ್ಪರರ ನಡುವೆ 'ಹಿರಿಯ-ಕಿರಿಯ' ಎಂಬ ತಾರತಮ್ಯ ಭಾವವಿರಲಿಲ್ಲ, ಸ್ನೇಹಿತರಾಗಿಯೆ ಇದ್ದೆವು. ಒಂದು ದಿನ ನನಗವರು ಸಂಭ್ರಮ ಸ್ವರದಲ್ಲಿ ಹೇಳಿದರು-

"ಏನು ಶರ್ಮಾ, ಈ ಊರಿಗೆ ಗಳಗನಾಥರು ಬಂದಿದ್ದಾರಂತೆ; ಬಸವನಗುಡಿಯ 'ಬಾಂದಿನವರ' ಬೀದಿಯಲ್ಲಿ ಯಾರ ಮನೆಯಲ್ಲಿಯೋ ಉಳಿದುಕೊಂಡಿದ್ದಾರಂತೆ. ಅವರನ್ನು ಕಾಣಲು ಹೋಗೋಣ, ಬರುತ್ತೀರಾ?"

ಕೇಳಿ ನನ್ನ ಮೈ ಉಬ್ಬಿತು. ಬಹುದಿನದ ಆಶೆ ಫಲಿಸುವ ಕಾಲ ಬಂದಿತೆಂದು ಮನಸ್ಸು ಕುಣಿದಾಡಿತು. ಇಬ್ಬರೂ ಕೂಡಿ ಬಸವನಗುಡಿಗೆ ಹೊರಟೇಬಿಟ್ಟೆವು. ಬಾಂದಿನವರ ಬೀದಿಯಲ್ಲಿ ಅವರಿವರನ್ನು ಕೇಳಿ, ಗಳಗನಾಥರು ವಸತಿ ಮಾಡಿದ ಮನೆಯನ್ನೂ ಕಂಡುಹಿಡಿದೆವು. ನಾವು ಗಳಗನಾಥ ಅವರನ್ನು ಕಂಡಾಗ, ಸಂಜೆಯ ಏಳೂವರೆ ಗಂಟೆಯಾಗಿದ್ದಿತು.

ಮನೆಯ ಚಿಕ್ಕ ಮೊಗಸಾಲೆಯಲ್ಲಿ ಹಾಸಿದ ಶತರಂಜಿಯ ಮೇಲೆ, ಗಳಗನಾಥರು, ತೆಕ್ಕೆಯೊಂದಕ್ಕೆ ಒರಗಿ ವಿಶ್ರಮಿಸಿಕೊಂಡಿದ್ದರು. ನಾವಿಬ್ಬರೂ

ಹೋಗಿ ಮೈ ಬಾಗಿಸಿ ನಮಸ್ಕರಿಸಲು, ಅವರು ಸರಿಯಾಗಿ ಎದ್ದು ಕುಳಿತು, ಅಪರಿಚಿತ ಭಾವವನ್ನು ದೃಷ್ಟಿಗಳಲ್ಲಿ ತುಂಬಿಕೊಂಡು ನಮ್ಮ ಕಡೆಗೆ ನೋಡಲು ತೊಡಗಿದರು. ದೇವುಡು ಅವರು, ತಮ್ಮ ಮತ್ತು ನನ್ನ ಪರಿಚಯವನ್ನು ಮಾಡಿಕೊಟ್ಟರು; ಇಬ್ಬರನ್ನೂ ಸ್ವಾಗತಿಸಿ, ಹತ್ತಿರ ಕುಳ್ಳಿರಿಸಿಕೊಂಡ ಮೇಲೆ ಗಳಗನಾಥರು ನನ್ನ ಕಡೆಗೆ ನೋಡುತ್ತ ಹೇಳಿದರು:

"ನಿಮ್ಮ ಬರಹಗಳ ಮೂಲಕ ನಿಮ್ಮ ಹೆಸರಿನ ಪರಿಚಯವಾಗಿದ್ದಿತು. ಆದರೆ ನೀವು ಗೋಕಾಕ ತಾಲೂಕಿನ ಬೆಟಗೇರಿಯ ಗೌಡರ ಮನೆತನದವರೆಂಬುದು, ನಾನು ನಿಮ್ಮ ಊರಿಗೆ ಹೋದಾಗ ಗೊತ್ತಾಯಿತು."

ನಾನು ಬೆರಗಿನ ಧ್ವನಿಯಲ್ಲಿ ಕೇಳಿದೆ:

"ನಮ್ಮ ಹಳ್ಳಿಗೆ ಹೋಗಿದ್ದಿರಾ ತಾವು ?"

"ನಿಮ್ಮ ಹಳ್ಳಿಗೆ ಹೋಗಿದ್ದೆನಷ್ಟೆ ಅಲ್ಲ; ನಿಮ್ಮ ಮನೆಯಲ್ಲಿಯೆ ಎರಡು ಮೂರು ದಿನಗಳವರೆಗೆ ಇದ್ದೆ. ತುಂಬ ಸಂಪ್ರದಾಯ ಪಾಲನೆಯ ಸುಸಂಸ್ಕೃತ ಮನೆತನ ನಿಮ್ಮದು. ನಾನಲ್ಲಿ ಬಹು ಆನಂದದಿಂದ ಕಾಲ ಕಳೆದೆ. ನಿಮ್ಮ ಅಣ್ಣಂದಿರು ತುಂಬ ಸನಾತನ ಧರ್ಮದ ಅಭಿಮಾನಿಗಳು! ಇಲ್ಲಿ ನಿಮ್ಮನ್ನು ನೋಡಿದರೆ ತಲೆ ತುಂಬ ಕ್ರಾಪು ಬೆಳಸಿದ್ದೀರಿ, ಒಳ್ಳೆಯ ಮನೆತನದಲ್ಲಿ ಹುಟ್ಟಿದ್ದೀರಿ, ಮನೆತನದ ಪರಂಪರೆಯನ್ನು ಮರೆತು ನಡೆಯಬೇಡಿರಿ!" ಎಂದು ಉಪದೇಶಿಸಿದರು ಗಳಗನಾಥರು.

## ಪುಸ್ತಕಗಳ ಮಾರಾಟಕ್ಕಾಗಿ ಸಂಚಾರ

ನಾನು ಕ್ರಾಪಿನ ಮಾತನ್ನು ಬೇಕೆಂತಲೇ ದೂರಕ್ಕೆ ಸರಿಸಿ, ವಿನಯದ ಧ್ವನಿಯಲ್ಲಿ ಕೇಳಿದೆ:

"ನಮ್ಮ ಹಳ್ಳಿಗೆ ತಾವು ಏತಕ್ಕಾಗಿ ಹೋಗಿದ್ದಿರಿ ?"

"ಏತಕ್ಕೆಂದು ಹೇಳಲಿ ? ಹೂಡಿದ ಸಾಂಸ್ಕೃತಿಕ- ಧಾರ್ಮಿಕ ಸಂಸ್ಥೆಗಳಿಗಾಗಿ ಮಾಡಿದ ಸಾಲದ ಭಾರ ತಲೆಯ ಮೇಲೆ ಕುಳಿತಿದೆ- ಆ ಸಾಲ ತೀರಿಸುವುದಕ್ಕಾಗಿ ನನ್ನ ಪುಸ್ತಕಗಳನ್ನು ನಾನೇ ಹೊತ್ತು ಮಾರಾಟ ಮಾಡುತ್ತ, ನಾಡಿನ ಹಳ್ಳಿ-ಹಳ್ಳಿಗಳನ್ನೂ ತಿರುಗುತ್ತಲಿದ್ದೇನೆ. ನಿಮ್ಮ ಹಳ್ಳಿಗೆ ಹೋದುದೂ ಪುಸ್ತಕ ಮಾರಾಟಕ್ಕಾಗಿಯೆ! ಈಗ ಈ ಪಟ್ಟಣಕ್ಕೆ ಬಂದುದೂ ಪುಸ್ತಕ ಮಾರಾಟಕ್ಕಾಗಿಯೆ! ಹಳೆಯ ಸಾಲ ತೀರಿಸುವುದಕ್ಕೆಂದು, ಹೊಸ ಸಾಲ ಮಾಡಿ, ನನ್ನ ಎಲ್ಲ ಗ್ರಂಥಗಳನ್ನೂ ಅಚ್ಚುಹಾಕಿಸಿದ್ದೇನೆ. ಅವುಗಳನ್ನು ಹೊತ್ತುಕೊಂಡು, ಮನೆಮನೆಗೆ ಹೋಗಿ ನಾನೇ ಮಾರಾಟ ಮಾಡುತ್ತಲಿದ್ದೇನೆ."

ಸಮಾಧಾನ ಧ್ವನಿಯಲ್ಲಿಯೆ ಗಳಗನಾಥರು ಹೇಳಿದರು, ಆಗ ದೇವುಡು ಅವರು ಕುತೂಹಲ

*೩೦ಥ ಶ್ರೇಷ್ಠ ಲೇಖಕ ತನ್ನ ಲೇಖನ ವ್ಯವಸಾಯದಿಂದ ೬೦-೭೦ ಸಾವಿರಕ್ಕೂ ಮಿಕ್ಕ ಹಣ ಗಳಿಸಿದರೂ ಸಾಲದಿಂದ ಮುಕ್ತನಾಗಲಿಲ್ಲ. ಆವರ ಅತಿ ಔದಾರ್ಯವೇ ಅವರನ್ನು ಕಷ್ಟಕ್ಕೀಡುಮಾಡಿತು. ಧರ್ಮಕಾರ್ಯಗಳಿಗಾಗಿ, ವಿದ್ಯಾದಾನಕ್ಕಾಗಿ, ಪಶು ಸಂಗೋಪನೆಗೆ, ಬಡವರ ಸಹಾಯಕ್ಕಾಗಿ ಅವರು ಮಾಡಿದ ವೆಚ್ಚವನ್ನು ನಾವು 'ಅತಿ' ಎನ್ನಬಹುದು. ಆದರೆ ಉದಾರಗುಣ ಅವರ ಜೀವನದ ಉಸಿರಾಗಿತ್ತು.*

*- ಪ್ರೊ. ಕೃಷ್ಣಮೂರ್ತಿ ಕಿತ್ತೂರ*



ಧ್ವನಿಯಲ್ಲಿ ಕೇಳಿದರು:

"ತಮ್ಮ ಕಾರ್ಯ ಈ ನಗರದಲ್ಲಿ ಚೆನ್ನಾಗಿ ನಡೆದಿದೆಯೇನು ?"

ಗಳಗನಾಥರು ವಾಸ್ತವ ಸಂಗತಿಯನ್ನು ಕಿರುನಗೆಯೊಂದಿಗೆ ಹೇಳತೊಡಗಿದರು:

"ನೋಡಿ, ಪಟ್ಟಣದ ದೊಡ್ಡ ಮನುಷ್ಯರ ರೀತಿ ವಿಲಕ್ಷಣವಾದುದು. ನಾನೊಬ್ಬನೆ ಇಲ್ಲಿ ಮನೆ ಮನೆಗೆ ಹೋಗಿದ್ದರೆ ಏನಾಗುತ್ತಿದ್ದಿತೋ ಏನೋ ! ಆದರೆ, ಪರಿಷತ್ತಿನ ಉಪಾಧ್ಯಕ್ಷರಾದ ಬಿ. ವೆಂಕಟನಾರಣಪ್ಪನವರು, ಕನ್ನಡದ ಅಭಿಮಾನಿಗಳಾದ ಪ್ರೊ. ಟಿ.ಎಸ್. ವೆಂಕಣ್ಣಯ್ಯನವರು ನನ್ನ ಜೊತೆಗೆ ಬರುತ್ತಿರುವುದರಿಂದ, ಅವರ ವಿಷಯಕವಾದ ದಾಕ್ಷಿಣ್ಯದಿಂದಾದರೂ ನನ್ನ ಪುಸ್ತಕಗಳನ್ನು ಜನರು ಕೊಳ್ಳುತ್ತಲಿದ್ದಾರೆ. ನಿನ್ನೆ ಇಂದು ಕೂಡಿ ೨೫೦೦ ರೂಪಾಯಿಗಳಿಗೆ ಮಿಕ್ಕಿದ ಬೆಲೆಯ ಪುಸ್ತಕಗಳು ನಗದು ಹಣಕ್ಕೆ ಮಾರಾಟವಾಗಿವೆ. ಬಿ. ವೆಂಕಟನಾರಣಪ್ಪನವರೂ, ಟಿ.ಎಸ್. ವೆಂಕಣ್ಣಯ್ಯನವರೂ ತುಂಬ ದೊಡ್ಡ ಮನುಷ್ಯರು. ಅವರು ಕೊಡುತ್ತಿರುವ ಸಹಕಾರ ಅವಿಸ್ಮರಣೀಯವಾದುದು !"

"ತಮಗೆ ಸಹಕಾರ ನೀಡುವುದು ಪ್ರತಿಯೊಬ್ಬ ಕನ್ನಡಿಗನ ಕರ್ತವ್ಯ. ಅವರಿಬ್ಬರೂ ತಮ್ಮ ಕರ್ತವ್ಯವನ್ನೇ ಮಾಡುತ್ತಿದ್ದಾರೆ !" ದೇವುಡು ನುಡಿದರು.

## ಒಂದು ಅನುಭವ

ಗಳಗನಾಥರು ತಮ್ಮ ಅನುಭವವೊಂದನ್ನು ಹೇಳಿದರು:

"ವೆಂಕಟನಾರಣಪ್ಪನವರೂ ವೆಂಕಣ್ಣಯ್ಯನವರೂ ದೊಡ್ಡ ಅಂತಸ್ತಿನವರು. ಇಂತಹ ಜನರು, ನಮ್ಮಂತಹ ಸಾಹಿತ್ಯಕರ ಕಾರ್ಯವನ್ನು ಲಕ್ಷಿಸುವುದು ತೀರ ಅಪೂರ್ವ ! ನೋಡಿ, ಹೀಗೆಯೆ ನಾನು, ನನ್ನ ಪುಸ್ತಕಗಳ ಮಾರಾಟಕ್ಕಾಗಿ, ಹೈದರಾಬಾದಿಗೆ ಹೋಗಿದ್ದೆ. ಅಲ್ಲಿಯ ಸಾಮಾನ್ಯ ಪರಿಸ್ಥಿತಿಯ ಕನ್ನಡಿಗರಿಂದ ನನಗೆ ಮನ್ನಣೆಯೂ ತಕ್ಕಮಟ್ಟಿಗೆ ಹಣವೂ ದೊರೆಯಿತೇನೋ ಸರಿ ! ನಮ್ಮ ಉತ್ತರ ಕರ್ನಾಟಕದಿಂದ ಅಲ್ಲಿಗೆ ಹೋಗಿ ನೆಲೆಸಿದ ಡಾಕ್ಟರೊಬ್ಬರ ಕಡೆಗೂ ಆಗ ನಾನು ಹೋಗಿದ್ದೆ. ಸಾಕಷ್ಟು ಹಣ ಸಂಪಾದಿಸಿ ಸಿರಿವಂತರಾದ ಡಾಕ್ಟರ್ ಅವರು. ನಾನು ನನ್ನ ಪುಸ್ತಕಗಳ ಗಂಟನ್ನು ಹೊತ್ತುಕೊಂಡು ಹೋಗಿ ನಿಂತಾಗ, ಅವರು ನನ್ನನ್ನು ಸ್ವಾಗತಿಸಲಿಲ್ಲ ಕೂಡ. ನಾನೇ ಒಂದು ಕುರ್ಚಿಯ ಮೇಲೆ ಕುಳಿತು, ನಾನಾರೆಂಬುದನ್ನೂ ಏತಕ್ಕೆ ಬಂದಿರುವೆನೆಂಬುದನ್ನೂ ಅವರಿಗೆ ವಿವರಿಸಿ ಹೇಳಿದೆ. ಆಗ ಆ ಡಾಕ್ಟರು ನುಡಿದುದು ಹೀಗೆ:

" 'ಓ, ನೀವೇ ಗಳಗನಾಥರೇನು ! ನಿಮ್ಮ ಹೆಸರು ನನ್ನ ಕಿವಿಗೆ ಬಿದ್ದಿದೆ. ನಮಸ್ಕಾರ. ನಮ್ಮ ಮನೆಯಲ್ಲಿ ಯಾರಿಗೂ ಕನ್ನಡ ಪುಸ್ತಕ ಓದಲಿಕ್ಕೆ ಬರುವುದಿಲ್ಲ ಎಂದ ಮೇಲೆ ನಿಮ್ಮ ಪುಸ್ತಕ ತೆಗೆದುಕೊಂಡು ನಾನೇನು ಮಾಡಲಿ ? ಇಲ್ಲಿ ಕನ್ನಡಿಗರು ಸಾಕಷ್ಟು ಜನರಿದ್ದಾರೆ ! ಅವರ ಬಳಿಗೆ ಹೋದರೆ, ಅಲ್ಪಸ್ವಲ್ಪ ನಿಮಗೆ ಸಹಾಯ ದೊರಕೀತು.'

"ನಾನು ಅವರಿಗೆ ಬಿಚ್ಚು ನುಡಿಗಳಲ್ಲಿ ಹೇಳಿದೆ:

" 'ನೀವೂ ಕನ್ನಡಿಗರೆಂದು ನಿಮ್ಮ ಬಳಿಗೆ ಬಂದಿದ್ದೇನೆ. ಪುಸ್ತಕಕ್ಕಾಗಿ ನೀವು ನನಗೆ ಕೊಟ್ಟ ಹಣ ವ್ಯರ್ಥವಾಗುವುದಿಲ್ಲ. ಸಾಂಸ್ಕೃತಿಕ ಸಂಸ್ಥೆಗಾಗಿ ವೆಚ್ಚವಾಗುತ್ತದೆ ! ದಯಮಾಡಿ ಕೆಲವು ಪುಸ್ತಕಗಳನ್ನಾದರೂ ಕೊಂಡುಕೊಳ್ಳಿರಿ !'

"ಕೂಡಲೆ ಅವರು ಜೇಬಿನಿಂದ ಎಂಟಾಣೆಯ ನಾಣ್ಯವೊಂದನ್ನು ತೆಗೆದಿಟ್ಟು, 'ಇಷ್ಟು ಬೆಲೆಗೆ ಯಾವ ಪುಸ್ತಕ ಬರುವುದೋ ಅದನ್ನು ಕೊಟ್ಟುಬಿಡಿರಿ !' ಎಂದು ಹೇಳಿದರು. ನಾನು ಅಷ್ಟೇ ಬೆಲೆಯ ಚಿಕ್ಕ ಪುಸ್ತಕವೊಂದನ್ನು ಅವರ ಟೇಬಲ್ಲಿನ ಮೇಲೆ ಇರಿಸಿ, ಎಂಟಾಣೆ ತೆಗೆದುಕೊಂಡು ಅಲ್ಲಿಂದ ಹೊರಟುಬಿಟ್ಟೆನು. ಮನಸ್ಸು ಕೆಲವು ವೇಳೆ ತುಂಬ ಉದ್ವೇಗಗೊಂಡಿತ್ತು.

"ಆದರೆ ಆಶ್ಚರ್ಯದ ಸಂಗತಿ: ಅಂದಿಯ ರಾತ್ರಿ ಎಂಟು ಗಂಟೆಗೆ, ಆ ಡಾಕ್ಟರರ ಹೆಂಡತಿ ನನ್ನನ್ನು ಹುಡುಕಿಕೊಂಡು ನಾನಿದ್ದಲ್ಲಿಗೆ ಬಂದರು. ಅವರು ಬೊಮ್ಮನಹಳ್ಳಿಯವರಂತೆ, ನನ್ನ ಪುಸ್ತಕಗಳನ್ನೆಲ್ಲ ಬಿಡದೆ ಓದುವವರಂತೆ. ಡಾಕ್ಟರರ ಟೇಬಲ್ಲಿನ ಮೇಲೆ ಇರಿಸಿ ಬಂದ ಕನ್ನಡ ಪುಸ್ತಕವನ್ನು ನೋಡಿದಾಗ, ನಾನು ಅಲ್ಲಿಗೆ ಬಂದ ವಿಷಯ ಗೊತ್ತಾಯಿತಂತೆ. ತನ್ನ ಪತಿರಾಜರು ನನ್ನೊಂದಿಗೆ ನಡೆದುಕೊಂಡ ಅಸೌಜನ್ಯದ ರೀತಿ ಅವರಿಗೆ ಗೊತ್ತಾಗಿರಬೇಕು. ಎಂತಲೇ ಆಕೆ ಮುಖದ ಮೇಲೆ ಪಶ್ಚಾತ್ತಾಪ ಭಾವವನ್ನು ಮೂಡಿಸಿಕೊಂಡೇ ನನ್ನ ಬಳಿಗೆ ಬಂದಿದ್ದರು, ತಮ್ಮ ಪತಿಯ ನಡವಳಿಕೆಗಾಗಿ

ನನ್ನಲ್ಲಿ ಕ್ಷಮೆ ಯಾಚಿಸಿ, ಮರುದಿನ ಮಧ್ಯಾಹ್ನ ತಮ್ಮ ಮನೆಗೆ ಊಟಕ್ಕೆ ಬರಬೇಕೆಂದು ಔತಣವಿತ್ತರು. ಆಕೆಯ ಆತ್ಮೀಯಭಾವದ ಔತಣವನ್ನು ತಿರಸ್ಕರಿಸಲಿಕ್ಕೆ ನನ್ನಿಂದಾಗಲಿಲ್ಲ. ಒಪ್ಪಿಕೊಂಡು ಬಿಟ್ಟೆ.

"ಮರುದಿನ ನನ್ನನ್ನು ಕರೆದುಕೊಂಡು ಹೋಗಲು ಡಾಕ್ಟರರ ಕಾರು ಬಂದಿತು. ಹೋದ ಮೇಲೆ ಸವಿಯಡಿಗೆಯ ಊಟ- ಡಾಕ್ಟರರೊಂದಿಗಿನ ಸಲುಗೆಯ ಮಾತಿನೊಂದಿಗೆ ನಡೆಯಿತು. ಊಟವಾದ ಮೇಲೆ ಆ ಮಹಾತಾಯಿಯ ಹೇಳಿಕೆಯಂತೆ- ನಾನು ಜತೆಗೆ ತೆಗೆದುಕೊಂಡು ಹೋದ ನನ್ನ ಪ್ರತಿಯೊಂದು ಪುಸ್ತಕದ ಒಂದೊಂದು ಪ್ರತಿಯನ್ನೂ ಅವರಿಗೆ ಕೊಟ್ಟಾಯಿತು. ಇನ್ನೂರಾಮೂವತ್ತು ರೂಪಾಯಿ ಆ ಪುಸ್ತಕಗಳ ಬೆಲೆ. ಮೊದಲ ದಿನ ಮನಸ್ಸಿಲ್ಲದೆ ಎಂಟಾಣೆಯನ್ನು ಕೊಟ್ಟ ಆ ಡಾಕ್ಟರರೇ ಆಗ, ಹೆಂಡತಿಯ ದಾಕ್ಷಿಣ್ಯಕ್ಕಾಗಿ, ಇನ್ನೂರಾಮೂವತ್ತು ರೂಪಾಯಿಗಳನ್ನು, ತಮ್ಮ ಪೆಟ್ಟಿಗೆಯಿಂದಲೇ ತೆಗೆದು, ಸಮಾಧಾನ ಮನಸ್ಕರಾಗಿದ್ದೇ ನನಗೆ ಸಲ್ಲಿಸಿದರು. ಇಷ್ಟೇ ಅಲ್ಲ, ಮೊದಲ ದಿನದ ತಮ್ಮ ಉಪೇಕ್ಷೆಯ ವರ್ತನಕ್ಕಾಗಿ, ಪಶ್ಚಾತ್ತಾಪವನ್ನು ವ್ಯಕ್ತಪಡಿಸಿದರು. ಇಂತಹ ಅನುಭವಗಳು ನಿತ್ಯವೂ ನನಗೆ ಬರುತ್ತಲಿವೆ. ನಾನೆಷ್ಟು ದೊಡ್ಡ ಮನುಷ್ಯನಾಗಿದ್ದರೂ, ನನ್ನ ಪುಸ್ತಕಗಳನ್ನು ಮಾರಾಟ ಮಾಡುವಾಗ, ಬೇರೆಯವರ 'ವಶೀಲಿ' ಬೇಕಾಗುತ್ತದೆ."

ಗಳಗನಾಥರು ಹೇಳಿದ ಈ ಅನುಭವ ಕಥನ, ನಮ್ಮನ್ನು ಯಾವುದೋ ಭಾವರಾಜ್ಯಕ್ಕೆ ಒಯ್ದಿದ್ದಿತು. ಅವರ ಕಥನ ಕೊನೆಗೊಂಡಾಗ, ಮತ್ತೆ ನಾವು ವಾಸ್ತವ ಪ್ರಪಂಚಕ್ಕೆ ಇಳಿದು ಬಂದೆವು. ರಾತ್ರಿ ಒಂಬತ್ತು ಗಂಟೆ ಮೀರಿದುದರಿಂದ, ಗಳಗನಾಥರನ್ನು ಬೀಳ್ಕೊಂಡು, ನಮ್ಮ ಬೀಡುಗಳತ್ತ ನಡೆದೆವು.

ಗಳಗನಾಥರ ರೂಪ-ವೇಷಗಳು ಜನರನ್ನು ಆಕರ್ಷಿಸುವಂತಹವೇನೂ ಅಲ್ಲ. ಅವರನ್ನು ಪ್ರತ್ಯಕ್ಷವಾಗಿ ಕಂಡ ಮೇಲೆ, ಹಿಂದೆ ಕಲ್ಪಿಸಿ ಮೂಡಿಸಿಕೊಂಡಿದ್ದ ಅವರ ಸುಂದರ ಚಿತ್ರಗಳೆಲ್ಲ ಇದ್ದಲ್ಲಿಯೇ ಅಡಗಿಹೋದವು. ಬಡಕಲು ದೇಹ, ಮೈಬಣ್ಣ ಕಪ್ಪು, ಮುಖದ ಮೇಲೆ ಮೈಲಿಯ

> *ಒಂದು ಮಾತು ನಿಜ. ಐವತ್ತು ವರ್ಷಗಳ ಹಿಂದೆ ಅಂದಿನ ಕನ್ನಡ ಜನತೆಯಲ್ಲಿ ಕಾದಂಬರಿಯ ಸದಭಿರುಚಿಯನ್ನು ಬಿತ್ತಿದ ಪುಣ್ಯ, ಶ್ರೇಯಸ್ಸು ಗಳಗನಾಥರದಾಗಿದೆ. ಕಾದಂಬರಿ ಎಂದೊಡನೆ ಸರಸ ಶೃಂಗಾರಗಳೇ ಎದ್ದುಕಾಣುತ್ತಿರಬೇಕು ಎಂಬ ಅಪೇಕ್ಷೆಯಿಂದಲೇ ವಾಚಕ ಓದುತ್ತಿರುತ್ತಾನೆ. ಆದರೆ ಗಳಗನಾಥರಂತಹ ಶ್ರದ್ಧಾವಂತ, ದೇವಭಕ್ತ, ಧರ್ಮನಿಷ್ಠ ಕಾದಂಬರಿಕಾರರ ಕೈಯಲ್ಲಿ ಎಂತಹ ಶೃಂಗಾರದ ಸನ್ನಿವೇಶವೂ ಉದಾತ್ತಮಟ್ಟವನ್ನು ಬಿಟ್ಟು ಕೆಳಗಿಳಿಯುವುದಿಲ್ಲ.*
>
> • ಎನ್ಕೆ

ಕಿರುಗಲೆಗಳಲ್ಲದೆ, ಅವರಿಗಾದ ವಯಸ್ಸು ಮುಖದಲ್ಲಿ ಅಲ್ಲಲ್ಲಿ ಸುಕ್ಕುಗಳನ್ನು ಉಂಟುಮಾಡಿದ್ದಿತು. ತಲೆ ನರೆಗೂದಲ ಚಂಡಿಕೆಯಿಂದ ಕೂಡಿದ್ದಿತು. ಮೀಸೆಯಲ್ಲೂ ನರೆಗೂದಲು ತಲೆಯೆತ್ತಿ ನಿಂತಿದ್ದವು. ಕಣ್ಣು-ಮೂಗಿನಿಂದ ಚೆಲುವರೇನೂ ಅಲ್ಲ! ನಾನು ನೋಡಿದಾಗ, ಅವರ ಹಣೆಯ ನಡುವೆ, ಗಂಧದ ಅಡ್ಡನಾಮ ಸ್ಪಷ್ಟವಾಗಿ ಕಾಣುತ್ತಿದ್ದಿತು. ಮೈಯಲ್ಲಿ ಹಳೆಯ ಕಾಲದ ಮಾದರಿಯ ಬಗಲಬಂಡಿ! ನಮ್ಮನ್ನು ಕಳುಹಲು ಅವರು ಎದ್ದು ನಿಂತಾಗ, ಸಾಮಾನ್ಯ ನಿಲುವಿಕೆಗಿಂತ ಸ್ವಲ್ಪ ಎತ್ತರದ ನಿಲುವಿಕೆಯವರಾಗಿಯೇ ಕಂಡರು.

ನಾವು ಮನೆಯ ಕಡೆಗೆ ಹೊರಟಿದ್ದಾಗ, ದಾರಿಯುದ್ದಕ್ಕೂ ನನ್ನ ಮನಸ್ಸನ್ನು ಒಂದೇ ಒಂದು ವಿಚಾರದ ಕೀಟ ಕೊರೆಯುತ್ತಿದ್ದಿತು:

"ಗಳಗನಾಥರ ಆಕಾರ-ರೂಪಗಳನ್ನು ನಾನು ಹೇಗೆ ಬಯಸಿದ್ದೆ; ಆದರೆ ಅವರ ವಾಸ್ತವ ಆಕಾರ-ರೂಪ-ವೇಷಗಳು ಹೀಗಿವೆಯಲ್ಲ!"

ಮುಂದೆ ಎರಡು ದಿನಗಳಿಗೇ ಬಳೇಪೇಟೆಯಲ್ಲಿದ್ದ ಕಲಾಮಂದಿರದ ಎ.ಎನ್. ಸುಬ್ಬರಾಯರು ಗಳಗನಾಥರನ್ನು ತಮ್ಮ ಸಂಸ್ಥೆಗೆ ಬರಮಾಡಿಕೊಂಡು ಗಳಗನಾಥರ ಸತ್ಕಾರ ಸಭೆಯನ್ನು ಏರ್ಪಡಿಸಿದ್ದರು. ಆ ಸಭೆಗೆ ನಾನೂ ಹೋಗಿದ್ದೆ. ಅಂದು ಗಳಗನಾಥರು ತಮ್ಮ ಸಾಮಾನ್ಯ ಉಡುಗೆ-ತೊಡಿಗೆಗಳಲ್ಲಿದ್ದರು. ಅದೇ ಪಂಚಕಚ್ಚದ ಧೋತರ; ಅದೇ ಬಗಲಬಂಡಿ; ಅದೇ ಹಣೆಯ ಅಡ್ಡನಾಮ.

ತಲೆಯ ಮೇಲೆ ದೊಡ್ಡದಾದ- ಉತ್ತರ ಕರ್ನಾಟಕದವರ ರೀತಿಯಲ್ಲಿ ಸುತ್ತಿದ ರುಮಾಲು; ಮೈಮೇಲೆ ಸೂಜಿಯಂಚಿನ ಉತ್ತರೀಯ. ವೇಷ-ಭೂಷಣಗಳಲ್ಲಿ ಸ್ವಲ್ಪವೂ ಆಡಂಬರವಿಲ್ಲ. ೧೯ನೆಯ ಶತಮಾನದ ಹಿರಿಯ ಮನುಷ್ಯರಂತೆ ನನಗವರು ಕಂಡರು.

ಅಂದಿನ ತಮ್ಮ ಉಪನ್ಯಾಸದಲ್ಲಿಯೂ ಅವರು ಹೊಸ ಕಾಲದ ಮಾತುಗಳನ್ನೇನೂ ಹೇಳಲಿಲ್ಲ. ಸನಾತನ ಧರ್ಮದ ಮೇಲ್ಮೆ ಅದರ ಸಂರಕ್ಷಣೆ; ವೈದಿಕ ಆಚರಣೆಗಳ ಹಿರಿಮೆ, ಅವುಗಳ ಅನುಸರಣೆ, ಸಂಸ್ಕೃತ ಭಾಷಾ ಶಿಕ್ಷಣದ ಅವಶ್ಯಕತೆ, ಕನ್ನಡ ನುಡಿಯ ಪುನರುದ್ಧಾರ- ಮೊದಲಾದ ಇವೇ ವಿಷಯಗಳನ್ನು, ಸಾಮಾನ್ಯವಾದ ಮಾತುಗಾರಿಕೆಯಲ್ಲಿ ಹೇಳಿದರು. ಆದರೆ, ತಾವು ಹೇಳುತ್ತಿರುವ ವಿಷಯಗಳ ಬಗೆಗಿನ ಶ್ರದ್ಧೆ-ನಿಷ್ಠೆಗಳು, ಅವರ ಅಂತರಂಗ-ಬಾಹ್ಯಾಂಗವೆರಡರಲ್ಲಿಯೂ ಅಭಿವ್ಯಕ್ತವಾಗುತ್ತಲಿದ್ದವು. ಹೊಸ ಕಾಲದ ಜನರಿಂದ ಹಳೆಯ ಪರಂಪರಾಧರ್ಮಗಳೆಲ್ಲ ಉಪೇಕ್ಷಿತವಾಗುತ್ತಿರುವುವಲ್ಲಾ- ಎಂಬ ಹೃದಯದ ಕೊರಗೂ ಆಗಾಗ ಅವರ ಮಾತುಗಳಲ್ಲಿ ಹೊರಹೊಮ್ಮುತ್ತಿತ್ತು. ಸನಾತನ ಧರ್ಮದ ವಿಷಯದಲ್ಲಿ ಹದಿನಾರಾಣೆ ಅಭಿಮಾನವುಳ್ಳವರು- ದಿವಂಗತ ಗಳಗನಾಥರು! ಹೊಸ ವಿಚಾರದ ಜನರ ಮನಸ್ಸನ್ನು ಆಕರ್ಷಿಸದುದರಿಂದಲೋ ಏನೋ- ಇಷ್ಟೊಂದು ಸಾಹಿತ್ಯ ನಿರ್ಮಿತಿಯ ಪ್ರತ್ಯಕ್ಷ ಕಾರ್ಯವನ್ನು ಮಾಡಿ, ಜನಸಾಮಾನ್ಯದ ಹೃದಯದಲ್ಲಿ ಸ್ಥಿರವಾದ ಪೀಠವನ್ನು ಅವರು ಕಟ್ಟಿ ನಿಂತಿದ್ದರೂ, ಕೊನೆಯವರೆಗೂ ಅಖಿಲ ಕರ್ನಾಟಕ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯ ಪೀಠ ಅವರಿಗೆ ದೊರೆಯಲಿಲ್ಲ.



## ನವೀನ ಮಾರ್ಗ

ದಿವಂಗತ ಗಳಗನಾಥರು ವಿದ್ಯಾ ಖಾತೆಯಲ್ಲಿ ಕೆಲಸ ಮಾಡುತ್ತಿರುವಾಗ, ಹೊಸ ಪಠ್ಯಪುಸ್ತಕಗಳ ಪಾಠಗಳನ್ನು ಬರೆಯುವುದಕ್ಕಾಗಿ, ಅಧಿಕಾರಿಗಳು ಆಯ್ಕೆ ಮಾಡಿದರಂತೆ. ಆ ಕಾರ್ಯಕ್ಕಾಗಿ ಇವರು ಮುಂಬಯಿಗೆ ಹೋಗಿ ಅಲ್ಲಿ ಕೆಲವು ದಿನ ಇರಬೇಕಾಯಿತಂತೆ. ಆಗ ಇವರಿಗೆ ದಿವಂಗತ ಬಂಕಿಮಚಂದ್ರರ ಬಂಗಾಲೀ ಕಾದಂಬರಿ 'ಮೃಣಾಲಿನಿ' ಎಂಬುದರ ಮರಾಠೀ ಅನುವಾದ ಓದಲು ದೊರೆಯಿತಂತೆ. ಅದರ ಸೌಂದರ್ಯಕ್ಕೆ ಮುಗ್ಧರಾದ ರಸಿಕ ಹೃದಯದ ಗಳಗನಾಥರು ಅಲ್ಲಿಯೇ ಅದರ ಭಾಷಾಂತರ ಕಾರ್ಯವನ್ನು ಆರಂಭಿಸಿ, ಸಂಪೂರ್ಣಗೊಳಿಸಿಯೂಬಿಟ್ಟರಂತೆ. ಈ ವಿಷಯವು ನನಗೆ ಗೊತ್ತಾದುದು, ಗಳಗನಾಥರ ಸಮಕಾಲೀನರೂ ಸಹೋದ್ಯೋಗಿಗಳೂ ಆಗಿದ್ದ ದಿವಂಗತ ತ.ನಾ. ಅಮ್ಮಿನಭಾವಿ ಮಾಸ್ತರರಿಂದ. ಅದೇ ಅನುವಾದಿತ 'ಮೃಣಾಲಿನಿ'ಯು ಸದ್ಬೋಧ ಚಂದ್ರಿಕೆಯ ಪ್ರಾರಂಭದ ಎರಡು ವರ್ಷಗಳಲ್ಲಿ ಕ್ರಮವಾಗಿ ಪ್ರಕಟವಾಗುತ್ತ ಬಂದು, ಮುಂದೆ ಸ್ವತಂತ್ರ ಗ್ರಂಥರೂಪದಲ್ಲಿಯೂ ಬೆಳಕಿಗೆ ಬಂದಿತು. 'ಮೃಣಾಲಿನಿ' ಮತ್ತು ಬೇರೆ ಮರಾಠೀ ಕಾದಂಬರಿಗಳ ವಾಚನದಿಂದ, ಗಳಗನಾಥರಲ್ಲಿ ಕಾದಂಬರಿಯ ಸ್ವರೂಪದ ಬಗೆಗೆ ಹೊಸ ದೃಷ್ಟಿಯುಂಟಾದಂತೆ ತೋರುವುದು. ಏಕೆಂದರೆ 'ಪದ್ಮನಯನ' ಕಾದಂಬರಿಯನ್ನು ಬರೆಯುಮಾಡಿ ಯಶಸ್ಸನ್ನು ಪಡೆದುವಾಗಿವೆ. ಆದರೆ ದಿ. ಗಳಗನಾಥರು ಆಪಟೆಯವರ ಸಾಮಾಜಿಕ ಕಾದಂಬರಿಗಳಲ್ಲಿ ಒಂದನ್ನೂ ಅನುವಾದಕ್ಕೆ ತೆಗೆದುಕೊಳ್ಳಲಿಲ್ಲ. ಇದಕ್ಕೆ ಕಾರಣವೆಂದರೆ, ಸ್ಮೃತ್ಯುಕ್ತ ಸಾಮಾಜಿಕ ಆಚಾರ-ವಿಚಾರಗಳಲ್ಲಿ ರವೆಯಷ್ಟೂ ಮಾರ್ಪಾಡು ಆಗಕೂಡದೆನ್ನುವ ಪರಂಪರಾಭಿಮಾನಿಗಳು- ಗಳಗನಾಥರು. ಆದರೆ ಸ್ವದೇಶಾಭಿಮಾನ, ಸ್ವರಾಷ್ಟ್ರಾಭಿಮಾನ, ಸ್ವಧರ್ಮಾಭಿಮಾನ, ವೀರಪೂಜೆ, ಸದಾಚಾರ, ಆದರ್ಶನಿಷ್ಠೆ- ಇವೆಲ್ಲ ಶಾಶ್ವತ ಅಗತ್ಯಗಳೆಂದು ಇವರ ವಿಶ್ವಾಸ. ಆದುದರಿಂದಲೇ ರಜಪೂತ, ಮರಾಠಾ ಜನರ ಚಾರಿತ್ರಿಕ ಕಾದಂಬರಿಗಳನ್ನೇ ಆಯ್ದುಕೊಂಡು, ಕನ್ನಡಿಸಿ ನಾಡಿಗರ ಕೈಗೆ ಕೊಟ್ಟಿದ್ದಾರೆ.

ಗಳಗನಾಥರು ಅನುವಾದಿಸಿಕೊಟ್ಟ ಯಾವ ಐತಿಹಾಸಿಕ ಕಾದಂಬರಿಯನ್ನೇ ನೋಡಿರಿ, ಅದರಲ್ಲಿ ವಾಗಿನ ಅದ್ಭುತರಮ್ಯದ ಅಭಿರುಚಿ, ಮುಂದೆ ನವೀನ ಮಾರ್ಗವನ್ನು ಹಿಡಿದು ಹೊರಟಿದೆಯೆಂಬುದು, ಅದರ ಮುಂದಿನ ಕಾದಂಬರೀ ನಿರ್ಮಿತಿಯಿಂದ ಸ್ಪಷ್ಟವಾಗಿ ಕಂಡುಬರುವುದು.




ಕಾದಂಬರಿಯ ತಂತ್ರದ ಬಗೆಗೆ ಗಳಗನಾಥರ ದೃಷ್ಟಿಯಲ್ಲಿ ಮಾರ್ಪಾಡಾದುದು ಕಂಡರೂ, ಕಾದಂಬರಿಗಳ ಕಥಾವಸ್ತುಗಳ ಸ್ವೀಕೃತಿಯ ಬಗೆಗೆ ಅವರ ದೃಷ್ಟಿಯಲ್ಲಿ ಪರಿವರ್ತನವಾದುದು ಎಲ್ಲಿಯೂ ಕಂಡುಬರುವುದಿಲ್ಲ. ಅನುವಾದಕ್ಕಾಗಿ ಅವರು ಆಯ್ದುಕೊಂಡ ಬೇರೆ ಬೇರೆ ಮರಾಠೀ ಕಾದಂಬರಿಗಳೂ ಸ್ವತಂತ್ರವಾಗಿ ಬರೆದ ಎರಡು ಐತಿಹಾಸಿಕ ಕಾದಂಬರಿಗಳೂ ಈ ಮಾತಿಗೆ ಪ್ರತ್ಯಕ್ಷ ಪ್ರಮಾಣಗಳಾಗಿವೆ. ಹೇಗೆಂದರೆ: ಗಳಗನಾಥರು ಅನುವಾದಕ್ಕಾಗಿ ಆಯ್ದುಕೊಂಡಿರುವ ಮರಾಠೀ ಕಾದಂಬರಿಗಳಲ್ಲಿ ಹೆಚ್ಚಿನ ಸಂಖ್ಯೆಯವು ದಿವಂಗತ ಹರಿನಾರಾಯಣ ಆಪಟೆಯವರ ಕಾದಂಬರಿಗಳು. ಆಪಟೆಯವರು ರಾಷ್ಟ್ರೀಯವೃತ್ತಿ-ಸ್ವದೇಶಾಭಿಮಾನಗಳಿಂದ ಕೂಡಿದವರಾದರೂ ಸಾಮಾಜಿಕ ರೀತಿಯಲ್ಲಿ ಕಾಲೋಚಿತವಾದ ಮಾರ್ಪಾಡನ್ನು ಬಯಸುವ ಸುಧಾರಕ ವಿಚಾರದವರು. ಅವರು ಐತಿಹಾಸಿಕ ಕಾದಂಬರಿಗಳಂತೆಯೇ ಸುವಿಖ್ಯಾತವಾದ ಸಾಮಾಜಿಕ ಕಾದಂಬರಿಗಳನ್ನೂ ಬರೆದು ಹೆಸರನ್ನು ಗಳಿಸಿದ್ದಾರೆ. ಅವರ 'ಮೀ', 'ಪಣ್ ಲಕ್ಷಾತ್ ಕೋಣ್ ಘೇತೋ', 'ಆಜಕಾಲಚೀ ಗೋಷ್ಟ' ಮೊದಲಾದ ಸಾಮಾಜಿಕ ಕಾದಂಬರಿಗಳು, ಮಹಾರಾಷ್ಟ್ರದ ಜನಜೀವನದಲ್ಲಿ ನೂತನ ಕ್ರಾಂತಿಯನ್ನು

ಆದರ್ಶವಾದ, ಸ್ವಧರ್ಮನಿಷ್ಠೆ, ಸ್ವದೇಶಪ್ರೇಮ ಇವುಗಳ ಆರಾಧನೆಯೇ ಎದ್ದುಕಾಣುವಂತೆ ಚಿತ್ರಿತವಾಗಿರುವುದು. ಅನೀತಿ, ಅಧರ್ಮ, ಅನಾಚಾರಗಳ ಖಂಡನೆಯೇ ಎಲ್ಲೆಲ್ಲಿಯೂ ಕಂಡುಬರುವುದು. 'ಕಮಲಕುಮಾರಿ', 'ವೈಭವ', 'ಈಶ್ವರೀಸೂತ್ರ', 'ತತ್ವಸಾರ', 'ಕ್ಷಾತ್ರತೇಜ', 'ಧರ್ಮರಹಸ್ಯ', 'ತಿಲೋತ್ತಮೆ' ಇತ್ಯಾದಿ ಪ್ರತಿಯೊಂದು ಕಾದಂಬರಿಯ ಅನುವಾದದಲ್ಲಿಯೂ ಗಳಗನಾಥರ ಆದರ್ಶ-ಅಭಿರುಚಿಗಳು ಮೂಡಿನಿಂತು, ಇವೆಲ್ಲ ಅವರ ಸ್ವತಂತ್ರ ಕೃತಿಗಳೇನೋ ಎಂದು ಭ್ರಾಂತಿಯನ್ನು ಹುಟ್ಟಿಸುತ್ತವೆ. ಅಗಡಿಯ ಶೇಷಾಚಲ ಸದ್ಗುರುಗಳ ಏಕನಿಷ್ಠಭಕ್ತರಾದ ಗಳಗನಾಥರು, ತಮ್ಮ ಪ್ರತಿಯೊಂದು ಕಾದಂಬರಿಯಲ್ಲಿ ಒಬ್ಬ ಸದ್ಗುರುವನ್ನು ಸೃಷ್ಟಿಸಿ, ಆ ಸದ್ಗುರುವಿಗೆ ಸಮ್ಮತವೆನಿಸುವ ಮಾರ್ಗದಲ್ಲಿ ನಡೆಯುವ ಸಜ್ಜನ ಪಾತ್ರಗಳೆಲ್ಲ ಜೀವನದಲ್ಲಿ ಜಯವನ್ನು ಪಡೆಯುವುವೆಂಬುದನ್ನು ಪ್ರತ್ಯಕ್ಷವಾಗಿಯೂ, ಪರ್ಯಾಯವಾಗಿಯೂ ಬೋಧಿಸುತ್ತಾರೆ. ಇವರ ನಿರ್ಮಿತಿಯು ಜೀವನ ಚಿತ್ರದೊಂದಿಗೆ ಧರ್ಮದ ಆದರ್ಶವನ್ನೂ ವಾಚಕರಿಗೆ ಬೆರಳುಮಾಡಿ ತೋರಿಸುತ್ತವೆ. 'ರಾಜಪುತ್ರ ಜೀವನಸಂಧ್ಯಾ' ಅಥವಾ 'ಹಳದಿ ಘಾಟದ ಯುದ್ಧ' ಎಂಬ ಕಾದಂಬರಿಯ ಅನುವಾದ ಕೃತಿಯಾದ 'ಸತ್ವಸಾರ' ಎಂಬ ಕಾದಂಬರಿಯಲ್ಲಿ ಕಂಡುಬರುವ ತಪೋಧನ-ಸಾತ್ವಿಕೆಯರು, ಗಳಗನಾಥರ ಮಾನಸಪುತ್ರರೇ ಆಗಿದ್ದಾರೆ. ಅಶೋಕ, ಚಂದ್ರಗುಪ್ತ, ಪ್ರತಾಪಸಿಂಹ, ಶಿವಾಜಿ, ಅವನ ಬಲಗೈಯಂತಿರುವ ಬೇರೆ ಮರಾಠಾ ವೀರರು- ಇವರೆಲ್ಲ ಗಳಗನಾಥರ ಕೃತಿಗಳ ಆದರ್ಶನಾಯಕರು.

## ಧಾರ್ಮಿಕ ಸಾಹಿತ್ಯ

ದಿ. ಗಳಗನಾಥರ ಸನಾತನ ಧರ್ಮನಿಷ್ಠೆ, ವಯಸ್ಸಾದಂತೆ ಅವರಲ್ಲಿ ಕಾದಂಬರಿಯಂತಹ ಲೌಕಿಕ ಸಾಹಿತ್ಯನಿರ್ಮಿತಿಯ ಬಗೆಗೆ ವೈರಾಗ್ಯವನ್ನು ಹುಟ್ಟಿಸಿತೇನೋ? ಮೊದಲಿನಿಂದಲೂ ಅವರಿಗೆ ಧಾರ್ಮಿಕ ಸಾಹಿತ್ಯದ ಒಲವು ಹೆಚ್ಚು. ಎಂತಲೇ ಅವರು ಮಹಾಭಾರತವನ್ನು ಸಂಗ್ರಹಿಸಿ ಕನ್ನಡಿಸುವ ಮಹಾಕಾರ್ಯವನ್ನು ಮಾಡಿ ಮುಗಿಸಿದರು. 'ಭಾಗವತಾಮೃತ' ಎಂಬ ಹೆಸರಿನಿಂದ ಭಾಗವತ ಮಹಾಪುರಾಣವನ್ನೂ ಸಂಗ್ರಹಿಸಿ, ಅನುವಾದಿಸಿ ಭಕ್ತರಿಗೆ ಒದಗಿಸಿದರು. 'ಅಧ್ಯಾತ್ಮ ರಾಮಾಯಣ', 'ಆನಂದ ರಾಮಾಯಣ', 'ವಾಲ್ಮೀಕಿ ರಾಮಾಯಣ'ಗಳನ್ನು ಅನುವಾದಿಸುವ ಕಾರ್ಯದಲ್ಲಿಯೂ ಸಹಕಾರಿಗಳಾಗಿ ನಿಂತರು. 'ಶೈವಸುಧಾರ್ಣವ' ಎಂಬ ಹೆಸರಿನಿಂದ ಶಿವಪುರಾಣಗಳ ಕಥೆಗಳನ್ನೂ ಸಂಗ್ರಹಿಸಿ ಪ್ರಕಟಿಸಿದರು. ಇವರು ಬರೆದ 'ದಾಂಪತ್ಯ', 'ಕುಟುಂಬ', 'ಹಿಂದೂ ಸಮಾಜ ವ್ಯವಸ್ಥೆ', 'ವರ್ಣಾಶ್ರಮ ಧರ್ಮ' ಮೊದಲಾದ ಪ್ರಬಂಧ ಗ್ರಂಥಗಳು, ಸಮಾಜ ಧರ್ಮದ ವಿಷಯದಲ್ಲಿ ಇವರಿಗಿರುವ ನಿಶ್ಚಲ ಅಭಿಪ್ರಾಯಗಳನ್ನು ವ್ಯಕ್ತಗೊಳಿಸುವವು.

ನಮ್ಮ ನಾಡಿನಲ್ಲಿ ಗಳಗನಾಥರಷ್ಟು ಮಹಾಗಾತ್ರದಲ್ಲಿ ವಿವಿಧ ರೀತಿಯ ಸಾಹಿತ್ಯವನ್ನು ನಿರ್ಮಿಸಿದವರು ಕಡಿಮೆ, ಅವರಷ್ಟು ಹಣವನ್ನು ಸಂಪಾದಿಸಿದವರೂ ಕಡಿಮೆ, ಆದರೆ ಅವರು ವೈಯಕ್ತಿಕವಾಗಿ ನಡೆಸುತ್ತಿದ್ದ ಪರಂಪರಾಧರ್ಮದ ಚಟುವಟಿಕೆಗಳಿಗೆ, ಇವರು ಗಳಿಸಿದ ಧನದ ರಾಶಿಯು ಸಾಲದೆ ಹೋಗಿ ಕೊನೆಯವರೆಗೂ ಇವರು ಸಾಲದ ಭಾರವನ್ನು ಹೊತ್ತುಕೊಂಡೇ ಬಾಳಿದರು. ಸಂಗ್ರಹಿಸಿ ಇಡುವ ಲೋಭಿ ಇವರಾಗಿದ್ದರೆ, ಲಕ್ಷಾವಧಿ ಹಣವನ್ನು ಇವರು ಶೇಖರಿಸಿ ಇಡಬಹುದಾಗಿದ್ದಿತು. ಆದರೆ ಇವರು ನಿಜವಾದ 'ಅಸಂಗ್ರಹ' ವ್ರತಧಾರಿಗಳು. ಹಣ ಸಂಗ್ರಹವಾದುದು ಕಂಡುಬಂದರೆ, ಒಂದೇ ಒಂದು ದಿನದಲ್ಲಿ ಯಾವುದಾದರೂ ಧರ್ಮಾನುಷ್ಠಾನ ಕಾರ್ಯವನ್ನು ಹೂಡಿ ವೆಚ್ಚ ಮಾಡುತ್ತಿದ್ದರು. ತಮ್ಮ ಸ್ವಂತದ ವ್ಯವಸಾಯವನ್ನಾಗಿ ಇರಿಸಿಕೊಂಡ ಗ್ರಂಥ ಪ್ರಕಾಶನ ಕಾರ್ಯಕ್ಕೆ ಹಣ ಬೇಕಾದರೆ, ಮತ್ತೆ ಸಾವುಕಾರರಲ್ಲಿಗೆ ಸಾಲಕ್ಕೆ ಹೋಗುವರು. ಗಳಗನಾಥರ ಮೇಲೆ, ವ್ಯವಹಾರ ದೃಷ್ಟಿಯವರಾದ ಸಾವುಕಾರರದೂ ಎಂತಹ ನಂಬುಗೆ! ಅವರಿಗೆ ಹಣದ ಅವಶ್ಯಕತೆಯುಂಟಾಗಿ ಸಾಲ ಕೇಳಿದರೆ, ಬೇಕಾದಾಗ ಬೇಕಾದಷ್ಟು ಹಣ ದೊರೆಯುತ್ತಿತ್ತು.

ದಿ. ಗಳಗನಾಥರಿಗಿಂತ ಮೊದಲು ಹೊಸಗನ್ನಡದ ಗದ್ಯಶೈಲಿ ಇನ್ನೂ ಪ್ರಯೋಗಾವಸ್ಥೆಯಲ್ಲಿಯೆ ಇದ್ದಿತು. ದಿವಂಗತ ವೆಂಕಟರಂಗೋ ಕಟ್ಟಿಯವರನ್ನು ಬಿಟ್ಟರೆ ಗಳಗನಾಥರವರೆಗೆ ಯಾವ ಕನ್ನಡ ಲೇಖಕನೂ ಶೈಲಿಯ ವ್ಯಕ್ತಿತ್ವವನ್ನು ಪಡೆದಿರಲಿಲ್ಲ.

ಗಳಗನಾಥರು ದಿ. ಕಟ್ಟಿಯವರಿಗಿಂತ ಹೆಚ್ಚಿನ ಹದವನ್ನು ಕನ್ನಡಕ್ಕೆ ತಂದುಕೊಟ್ಟಿದ್ದಾರೆ. ವ್ಯಾಕರಣದ ನಿಯಮಗಳನ್ನು ಮೀರಿ ನಡೆದಿಲ್ಲವಾದರೂ, ದೇಶೀಯ ಮೆರುಗನ್ನು ಪರಿಶುದ್ಧ ಭಾಷಾಶೈಲಿಗೆ ಅಳವಡಿಸಿ, ಇವರು ತಮ್ಮದೇ ಆದ ಶೈಲಿಯನ್ನು ನಿರ್ಮಿಸಿಕೊಂಡಿದ್ದಾರೆ. ಸಹಜವಾದ ವಾಕ್ಯರಚನಾ ಪದ್ಧತಿ, ಸುಲಭಾರ್ಥ ಬೋಧಕವಾದ ಉಚಿತ ಶಬ್ದಗಳು, ಭಾವೋಚಿತವಾದ ಏರಿಳಿತದ ಧ್ವನಿಯ ಬಳಕೆ ! ಪಂಡಿತ-ಪಾಮರರಿಬ್ಬರ ಮನಸ್ಸನ್ನೂ ಸೆರೆ ಹಿಡಿಯುವಂತಹ ಪರಿಶುದ್ಧವೂ ಸುಲಭವೂ ಆದ ಶೈಲಿ ! ಇವರ ಹೆಚ್ಚಿನ ಕಾದಂಬರಿಗಳು ಪರಭಾಷೆಯ ಅನುವಾದಗಳಾಗಿ ಬಂದಿದ್ದರೂ, ಅನುವಾದ ಕಾರ್ಯದಲ್ಲಿ ಕನ್ನಡ ನುಡಿಯ ಮೂಲಸ್ವರೂಪವನ್ನು ಕೆಡಿಸಿಲ್ಲ. ಗಳಗನಾಥರ ತರುವಾಯದ ಅನೇಕ ಕನ್ನಡ ಲೇಖಕರು ಇವರ ಶೈಲಿಯ ಜಾಡನ್ನೇ ಹಿಡಿದು ಹೊರಟವರಾಗಿದ್ದಾರೆ. ಜನಸಾಮಾನ್ಯದಲ್ಲಿ ವಾಚನಾಭಿರುಚಿಯನ್ನು ಕುದುರಿಸಿದಂತೆ, ಇವರ ಕಾದಂಬರಿಗಳು, ಹೊಸ ಲೇಖಕರಿಗೆ ಲೇಖನಶೈಲಿಯ ರೀತಿಯನ್ನೂ ಕಲಿಸಿಕೊಟ್ಟಿವೆ. ಇವರು ತುಳಿದ ದಾರಿಯನ್ನು ಅನೇಕ ನವೀನ ಲೇಖಕರು ಹಿಡಿದು, ಕನ್ನಡ ಕಾದಂಬರಿ ಭಾಂಡಾರದ ಸಂಪತ್ತನ್ನು ಹೆಚ್ಚಿಸಿರುವರು.

ನಾನು 'ಜಯಂತಿ' ಮಾಸಪತ್ರಿಕೆಯ ಸಂಪಾದಕತ್ವದ ಹೊಣೆಯನ್ನು ಹೊತ್ತ ಮೇಲೆ, ಮೊದಲನೆಯ ವರ್ಷದ ೫-೬ ಸಂಚಿಕೆಗಳು ಬೆಳಕಿಗೆ ಬಂದು, ಜಯಂತಿಯ ಹೆಸರನ್ನೂ ಬೆಳಗಿಸಿದ್ದವು. ಆ ಸಂದರ್ಭದಲ್ಲಿ ಒಂದು ದಿನ ಗಳಗನಾಥರು ಜಯಂತಿಯ ಕಾರ್ಯಾಲಯಕ್ಕೆ ದಯಮಾಡಿಸಿದರು. ನಾನು ಗೌರವಾದರಗಳಿಂದ ಅವರನ್ನು ಬರಮಾಡಿಕೊಂಡು, ಅವರ ಹಿರಿಯತನಕ್ಕೆ ಸರಿಯಾದ ಆಸನದಲ್ಲಿ ಕುಳ್ಳಿರಿಸಿದೆ; ಪ್ರಶ್ನಾರ್ಥಕ ದೃಷ್ಟಿಗಳಿಂದ ಅವರನ್ನು ನೋಡಲುತೊಡಗಿದೆ. ಆಗ ಗಳಗನಾಥರು ತುಂಬ ಆತ್ಮೀಯಭಾವದೊಂದಿಗೆ ಮಾತನ್ನು ಆರಂಭಿಸಿದರು:

"ನಿಮ್ಮನ್ನು ಕಂಡು ಮಾತನಾಡಬೇಕೆಂದೇ ಇದೀಗ ನಿಮ್ಮ ಕಾರ್ಯಾಲಯವನ್ನು ಹುಡುಕಿಕೊಂಡು ಇಲ್ಲಿಗೆ ಬಂದಿದ್ದೇನೆ !"

"ಯಾರ ಕಡೆಯಿಂದಲಾದರೂ ಹೇಳಿ ಕಳುಹಿದ್ದರೆ, ನಾನೇ ತಮ್ಮನ್ನು ಬಂದು ಕಾಣುತ್ತಿದ್ದೆನಲ್ಲ !" ನಾನು ವಿನಯದಿಂದ ಹೇಳಿದೆ.

"ನಾನು ಯಾರ ಕಡೆಯಿಂದ ಹೇಳಿ ಕಳುಹಬೇಕು ? ಅಗತ್ಯವೆನಿಸಿದುದರಿಂದ ನಾನೇ ಬಂದುಬಿಟ್ಟೆ. ಇದರಲ್ಲಿ ತಪ್ಪೇನು ? ಅದಿರಲಿ, ನಿಮಗೊಂದು ಮಾತನ್ನು ಹೇಳಬೇಕಾಗಿದೆ. ನೋಡಿ, ನಿಮ್ಮ 'ಜಯಂತಿ'ಯ ಸಂಚಿಕೆಗಳನ್ನೆಲ್ಲ ನಾನು ನೋಡಿದ್ದೇನೆ. ಅವುಗಳಲ್ಲಿಯ ನಿಮ್ಮ ಲೇಖನಗಳನ್ನು ಓದಿದ್ದೇನೆ. ನೀವು ಬರೆಯುವ ಭಾಷಾಶೈಲಿಯಲ್ಲಿ ಒಂದು ವಿಶಿಷ್ಟ ಸಾಮರ್ಥ್ಯವಿದೆ. ಯಾವ ವಿಷಯವನ್ನಾಗಲಿ, ಅದು ಓದುಗರ ಮೇಲೆ, ತನ್ನ ಪ್ರಭಾವದಿಂದ ಚೆನ್ನಾಗಿ ಮೂಡಿಸಬಲ್ಲದು !"- ಎಂದವರು ನುಡಿಯಲು, ಹಿಗ್ಗಿದ ಧ್ವನಿಯಲ್ಲಿ ನಾನು ಹೇಳಿದೆ:

"ತಮ್ಮ ಈ ಹೊಗಳಿಕೆ ನನ್ನನ್ನು ಪುಲುಕಿತನನ್ನಾಗಿ ಮಾಡಿತು. ಆದರೆ ನನ್ನ ಭಾಷಾಶೈಲಿಯ ಗುಣಗಳಿಗೆ ತಮ್ಮ ಮೇಲುಪಂಕ್ತಿಯೇ ಕಾರಣವೆಂಬುದನ್ನು ನಾನು ಎಂದೂ ಮರೆಯುವಂತಿಲ್ಲ. ನನಗೆ ಬರೆಯುವ ಭಾಷೆಯನ್ನು ಕಲಿಸಿದ ಅಪ್ರತ್ಯಕ್ಷ ಗುರುಗಳೇ ತಾವು !"

"ನಾನಿದನ್ನು ಒಪ್ಪಲಾರೆ. ನಿಮ್ಮ ಭಾಷಾಶೈಲಿ ನಿಮ್ಮದೇ ಆಗಿದೆ. ಆದರೆ ಒಂದು ಮಾತು: ಇಂತಹ ನಿಮ್ಮ ಸುಂದರ ಶೈಲಿಯನ್ನು ಸನಾತನ ಧರ್ಮದ ಪ್ರಚಾರ-ಪ್ರಸಾರಗಳಿಗಾಗಿ ಉಪಯೋಗಿಸಿರಿ ! ಹೊಸ ಕಾಲದ ಧರ್ಮವೆಂದು ಹೇಳುತ್ತ ಹಳೆಯ ಆಚಾರ ಧರ್ಮಗಳ ಮೇಲೆ ಅಭಿಯೋಗ ಮಾಡಲು ಬಳಸಬೇಡಿರಿ. ನನ್ನ ವಿಷಯದಲ್ಲಿ ಆದರಭಾವವನ್ನು ಇರಿಸಿಕೊಂಡಿರುವ ನಿಮಗೆ ಈ ನನ್ನ ಅಭಿಪ್ರಾಯವನ್ನು ಹೇಳಲೇಬೇಕೆನಿಸಿತು; ಹೇಳಿದೆ. ನಾನು ಬಂದ ಕೆಲಸವಾಯಿತು. ಇನ್ನು ಹೊರಡುತ್ತೇನೆ !" ಎಂದು ಅವರು ಆಸನದಿಂ

> **ಹಗಲು-ರಾತ್ರಿ**
>
> ಕತ್ತಲು ಬೆಳಕಿನೊಡನೆ
> ಸರಸವಾಡುತ್ತಿರುವ
> ಸೃಷ್ಟಿಯ ಎರಡು ನೇತ್ರಗಳು
> ಹಗಲು-ರಾತ್ರಿಗಳು
>
> ● ಯು.ಬಿ. ಫಕೀರಗೌಡ

ದೆದ್ದು ಹೊರಟೇಬಿಟ್ಟರು.

ಅವರು ಅಂದು ಹೇಳಿದ ಮಾತು ನನಗೆ ಒಂದು ಬಗೆಯ ಸಂಯಮವನ್ನು ಕಲಿಸಿತು. ನಮ್ಮ ಹಳೆಯ ಧರ್ಮಗ್ರಂಥಗಳನ್ನು ಓದಬೇಕೆಂಬ ಅರಿವನ್ನು ಹುಟ್ಟಿಸಿತು. ಹೊಸಕಾಲದ ವಿಚಾರ ಪ್ರಣಾಲಿಯ ರಜೋವೃತ್ತಿಯ ದುಡುಕನ್ನು ಹಿಮ್ಮೆಟ್ಟಿಸಿತು. ಲೇಖಕರು ತ್ರಿಕಾಲ ವಿವೇಕಿಗಳಾಗಬೇಕೆಂಬುದರ ಕಡೆಗೆ ಮನಸ್ಸು ಒಲಿಯಿತು. ಆಮೇಲೆ ಧಾರವಾಡದಲ್ಲಿ ೧೯೫೦ರಲ್ಲಿ ಕೂಡಿದ ಕನ್ನಡ ಸಾಹಿತ್ಯ ಸಮ್ಮೇಳನದ ಅಧಿವೇಶನದ ಕಾಲದಲ್ಲಿಯೂ ಅವರನ್ನು ಕಂಡಿದ್ದೆ. ಅದೇ ವರ್ಷ ಕೋಳಿವಾಡದಲ್ಲಿ ಕೂಡಿದ ಕುಮಾರವ್ಯಾಸನ ಜಯಂತಿ ಸಮಾರಂಭದಲ್ಲಿಯೂ ನಾವಿಬ್ಬರೂ ಒಟ್ಟು ಸೇರಿದ್ದೆವು. ಕಂಡಾಗಲೆಲ್ಲ ಅಂದಿನ ತಮ್ಮ ಉಪದೇಶವಚನಗಳನ್ನು ಅವರು ನೆನಪು ಮಾಡದೆ ಇರುತ್ತಿರಲಿಲ್ಲ. ಕನ್ನಡಕ್ಕೆ ಗಳಗನಾಥರು ಕೊಟ್ಟ ಕಾಣಿಕೆಯಂತಹದೆಂಬುದನ್ನು ಪರ್ಯಾಯದಿಂದ ನಾನು ವಿವರಿಸಿರುವೆನೇ ಹೊರತು, ಪ್ರತ್ಯಕ್ಷ ವರದಿಯ ರೂಪದಲ್ಲಿ ನಾನಿಲ್ಲಿ ಹೇಳಿಲ್ಲ. ಇಲ್ಲಿ ವಿವರಿಸಿದ ಒಂದೊಂದು ಪ್ರಸಂಗಗಳೂ, ಗಳಗನಾಥರು ನಮಗೆ ಕೊಟ್ಟ ಕಾಣಿಕೆಯಂತಹದೆಂಬುದನ್ನು ತಿಳುಹಲು ಸಮರ್ಥವಾಗಿರುವುದೆಂದು ನನ್ನ ಎಣಿಕೆ. ಸಹೃದಯರಾದ ವಾಚಕರು ಇವುಗಳ ಹುರುಳು-ತಿರುಳುಗಳೇನೆಂಬುದನ್ನು ತಿಳಿದುಕೊಳ್ಳಬಲ್ಲರೆಂದು ನನ್ನ ನಂಬುಗೆ. ಗಳಗನಾಥರು ಈಗ ಕನ್ನಡಿಗರ ಪಿತೃಕುಲದಲ್ಲಿ ಸೇರಿದ್ದಾರೆ. ಅವರ ಸಂತಾನವಾದ ನಾವೆಲ್ಲರೂ ಅವರಿಗೆ ಸಲ್ಲಿಸಬೇಕಾದ ಶ್ರದ್ಧೆಯ ತರ್ಪಣವನ್ನು ಸಲ್ಲಿಸದೆ ಹೋದರೆ, ನಾವು ಕೃತಘ್ನರು-ಬುದ್ಧಿಗೇಡಿಗಳು-ಕರ್ತವ್ಯಚ್ಯುತರು !

---

## ಪುತ್ರವಾತ್ಸಲ್ಯ

ನಮ್ಮ ಆಶ್ರಮದ ಸಮೀಪ 'ಮಹದೇವ ಪುರ' ಗ್ರಾಮ ಇದೆ. ಇಲ್ಲಿ ಇಬ್ಬದಿಗೂ ಹಬ್ಬಿರುವ ಗುಡ್ಡಕಾಡುಗಳು. ಕಲ್ಲು ಬಂಡೆಗಳ ಗುಡ್ಡವಾದ್ದರಿಂದ ಕಾಡು ನಾಶವಾಗಿದ್ದರೂ, ಕಾಡು ಪ್ರಾಣಿಗಳು ಅವಿತಿರಲು ಬೇಕಾದ ಗುಹೆ, ಕಂದರ, ಕಣಿವೆಗಳು ಇಲ್ಲಿ ಸಾಕಷ್ಟು. ಪ್ರಕೃತಿದತ್ತವಾದ ಹುಲ್ಲೂ ದೊರೆಯುವುದರಿಂದ ಇಲ್ಲಿಯ ಜನ ದನಕರುಗಳನ್ನು ಸಾಕುವುದು ರೂಢಿ.

ಇತರ ಕಾಡು ಪ್ರಾಣಿಗಳ ಜೊತೆಗೆ ಇಲ್ಲಿ ಬಹಳ ದಿವಸದಿಂದ, ೨-೩ ಚಿರತೆಗಳೂ ಸೇರಿಕೊಂಡಿದ್ದವು. ಪ್ರತಿತಿಂಗಳೂ ಒಂದೆರಡು ಹಸುಗಳಾದರೂ ಈ ಚಿರತೆಗಳಿಗೆ ಆಹಾರವಾಗುವುದು ಇಲ್ಲಿ ಸಾಮಾನ್ಯ.

ಅಂದು ಎಂದಿನಂತೆ ದನಗಳು ಮೇಯಲು ಅಡವಿಗೆ ಹೋಗಿ ಅಲ್ಲಲ್ಲಿ ಚದುರಿದ್ದವು. ಅಲ್ಲಿಯೇ ಹೊಂಚು ಹಾಕಿ ಕಾಯುತ್ತಿದ್ದ ಚಿರತೆಯೊಂದು, ಕ್ಷಣ ಮಾತ್ರದಲ್ಲಿ ಹಾರಿಬಂದು ಒಂಟಿಯಾಗಿದ್ದ ದನ ಒಂದನ್ನು ಹಿಡಿದೇ ಬಿಟ್ಟಿತು. ಚಿರತೆ ಗಂಟಲಿಗೇ ಬಾಯಿ ಹಾಕಿದ್ದರಿಂದ ದನ ಯಾವುದೇ ಪ್ರತಿಭಟನೆ ಇಲ್ಲದೆ ಬಿದ್ದು ಬಿಟ್ಟಿತು. ದಿಕ್ಕೆಟ್ಟು ಓಡುತ್ತಿದ್ದ ಉಳಿದ ದನಗಳನ್ನು ನೋಡಿ, ಸಮೀಪವೇ ಇದ್ದ ಒಂದಿಬ್ಬರು ದನಗಾಹಿಗಳು ಓಡಿ ಬಂದು ಚಿರತೆಯನ್ನು ಓಡಿಸಿದರು. ಮರಣಾಂತಿಕ ಗಾಯವಾಗಿ ಗಂಟಲಿನಲ್ಲಿ ರಕ್ತಸುರಿಯುತ್ತಿದ್ದರೂ ಹಸು ಉಸಿರಾಡುತ್ತಿತ್ತು. ಕಣ್ಣು ತೆರೆದಿತ್ತು. ಕೂಡಲೇ ಬಂಡಿತರಿಸಿ ಊರಿಗೊಯ್ದು ಮನೆ ಮುಂದೆ ಹಸುವನ್ನು ಮಲಗಿಸಿದರು. ಅದಕ್ಕೊಂದು ಎಳೆಗರು. ಯಾರೋ ಬಿಚ್ಚಿ ಬಿಟ್ಟಿದ್ದರು. ಅದು ಕುಣಿದು ಕುಪ್ಪಳಿಸಿ ಬಂದು ತಾಯ ಹಾಲು ಕುಡಿಯಲು ಪ್ರಾರಂಭಿಸಿತು. ಹೊಟ್ಟೆತುಂಬ ಹಾಲು ಕುಡಿದ ಕರು ತಾಯಮೊಲೆಯಿಂದ ಬಾಯಿ ತೆಗೆಯಿತು. ಅದುವರೆಗೂ ಕರುವನ್ನೇ ದಿಟ್ಟಿಸಿ ನೋಡುತ್ತಿದ್ದ ಆ ಗೋವು ಗೋಣು ಚೆಲ್ಲಿತು.

● ಮ.ವಾ. ಆಚಾರ್ಯ

## ಎಂ.ಕೆ. ಇಂದಿರಾ ಹೇಳಿದ

# ಕಾಫಿಯ ಕಥೆ

('ತಗ್ಗಿನ ಮನೆ ಸೀತೆ' ಕಾದಂಬರಿಯಿಂದ)

ಸಂಗ್ರಹ: **ಜಯಸಿಂಹ ಬಿ.ಎನ್.**

"ಕೆಲದಿನ ಅದು ಮಡಿವಂತರಿಗೆ ನಿಷೇಧವಾಗಿತ್ತು. ಅದರಲ್ಲೂ ಮಡಿ ಹೆಂಗಸರು ಕುಡಿಯಲೇಬಾರದು. ಆದರೆ ಅಮಲುಹತ್ತಿಯಾಗಿತ್ತು. ಕಡೆಗೆ ಅದರ ಚಟ ಪೂರಾ ಹತ್ತಿದವರೊಬ್ಬರು ಅದಕ್ಕೆ 'ಕೈಲಾಸದ ಕಷಾಯ' ಎಂದು ಹೆಸರಿಟ್ಟು ವೇದ-ವ್ಯಾಸರಂತೆ ಅದಕ್ಕೊಂದು ಪೌರಾಣಿಕ ಕಥೆಯನ್ನು ಕಲ್ಪಿಸಿ ಹೇಳಿದರು. ಅದು ಕಲ್ಪನೆಯಾದರೂ ಸ್ವಾರಸ್ಯವೂ ಸಹಜವೂ ಆಗಿ ಕಾಣಿಸುತ್ತೆ.

" 'ಭಗೀರಥನ ಪ್ರಾರ್ಥನೆಯ ಮೇರೆಗೆ ಗಗನಾಂತರದಿಂದ ಧುಮುಕಿದ ಗಂಗೆಯನ್ನು ಪರಶಿವ ತಡೆದು ಜಟೆಯಲ್ಲಿ ಬಿಗಿದು ಕೂರಿಸಿಕೊಂಡ. ಮುಂದೆ ಗಂಗೆ ಸಾವಧಾನವಾಗಿ ಹರಿದು ಭಾಗೀರಥಿ ಎನಿಸಿಕೊಂಡಳು. ಸಗರಪುತ್ರರೇನೋ ಮುಕ್ತಿ ಪಡೆದರು. ಆದರೆ ಕೈಲಾಸದಲ್ಲಿ ಗಂಗೆಯನ್ನು ತಲೆಯಲ್ಲಿ ಹೊತ್ತ ಪರಮೇಶ್ವರನಿಗೆ ಅಸಾಧ್ಯ ನೆಗಡಿ ಪ್ರಾರಂಭವಾಯ್ತು. ಏನು ಮಾಡಿದರೂ ನೆಗಡಿ ನಿಲ್ಲಲೊಲ್ಲದು. ಶಿವನ ಜಟೆಯಿಂದ ಧುಮುಕುತ್ತಿದ್ದುದಲ್ಲದೆ ಗಂಗೆ ಆತನ ಮೂಗಿನಿಂದಲೂ ದ್ವಿಧಾರೆಯಾಗಿ ಇಳಿಯತೊಡಗಿದಳು. ತಲೆನೋವು, ಮೈನೋವು, ಜ್ವರ ಎಲ್ಲಾ ಹೊಡೆದು ಬಾರಿಸಿತು ಹರನಿಗೆ. ಮೂಗು ಒರೆಸಿಕೊಳ್ಳಲು ಅವನಲ್ಲಿ ಒಂದು ತುಂಡು ಬಟ್ಟೆಯಿಲ್ಲ. ಕಡೆಗೆ ವಿಧಿಯಿಲ್ಲದೆ ಪಾರ್ವತಿಯ ಪೀತಾಂಬರದ ಸೆರಗನ್ನೇ ಮೂಗಿಗೆ ಒತ್ತಿ ಹಿಡಿದ.

" 'ಹರನ ಕಾಯಿಲೆಯ ವಿಷಯ ತಿಳಿದು ಅಗ್ನಿದೇವ ಓಡಿ ಬಂದು ಕೈಲಾಸದಲ್ಲಿ ಧಗೆ ಎಬ್ಬಿಸಿ ಎಲ್ಲರಿಗೂ ಬೆಚ್ಚಗೆ ಮಾಡಿದ. ಊಹುಂ! ಜಗ್ಗಲಿಲ್ಲ. ಮುಂದೇನೆಂದು ದೇವಾಧಿದೇವತೆಗಳಿಗೆ ಚಿಂತೆಯಾಗಿ ಕಡೆಗೆ ದೇವವೈದ್ಯನಾದ ಧನ್ವಂತರಿಯನ್ನು ಕರೆಸಿದರು. ಅವನು ಪರಶಿವನ ನಾಡಿ ಹಿಡಿದು ನೋಡಿದ. ಶಿವನ ಮೈಯ ಜ್ವರದ ಜೊತೆಗೆ ಅಗ್ನಿಯ ಶಾಖವೂ ಸೇರಿ ಶಿವನ ಜ್ವರ ನೂರಾಹತ್ತು ಡಿಗ್ರಿಯಾಗಿತ್ತು. ಧನ್ವಂತರಿ ಇದುವರೆಗೆ ಯಾರಿಗೂ ಕೊಡದ ಒಂದು ಔಷಧಿಯನ್ನು ಈಗ ಜಗದೀಶನಿಗೆ ಕೊಡಲೇಬೇಕಾಯ್ತು. ಸಂಜೀವಿನಿ ಪರ್ವತದಿಂದ ಆ ಬೀಜವನ್ನು ತರಬೇಕು. ಅದಕ್ಕೆ ಯಾರು ಸಮರ್ಥರು ಎಂದು ಯೋಚಿಸಿ, ಕಡೆಗೆ ಆ ಕೆಲಸಕ್ಕೆ ವಾಯುಪುತ್ರನೇ ಸರಿಯೆಂದು ಭೂಲೋಕದ ಋಷ್ಯಮೂಕ ಪರ್ವತದ ಕೋಡುಗಲ್ಲಿನ ಮೇಲೆ ಕೂತಿದ್ದ ಮಾರುತಿಯನ್ನು ಕರೆತರಲಾಯ್ತು. ಪರಮೇಶ್ವರನ ಫಜೀತಿ ನೋಡಿ ಅವನಿಗೂ ಗಾಬರಿಯಾಗಿತ್ತು. ಧನ್ವಂತರಿಯ ಆಜ್ಞೆಯ ಮೇರೆಗೆ ಹನುಮಂತ ಹಾರಿದ ಸಂಜೀವಿನೀ ಪರ್ವತಕ್ಕೆ. 'ಕೆಂಪು ಸಣ್ಣ ಹಣ್ಣು, ತಿನ್ನಲು ಸಿಹಿ ಸಿಹಿ, ಒಳಗೆ ದಪ್ಪ ಬೀಜ ಇರುತ್ತೆ. ಅದನ್ನ ಜಾಗ್ರತೆ ತೆಗೆದುಕೊಂಡು ಬಾ' ಎಂದು ಹೇಳಿದ್ದ ಧನ್ವಂತರಿ. ಸರಿ, ಸಂಜೀವಿನೀ ಪರ್ವತವನ್ನು ಗರಪಾಡಿದ ಪ್ರಾಣೇಶ. ಅಲ್ಲಿ ಆ ಹಣ್ಣಿನ ಗಿಡಗಳ ವನವೇ ಇದೆ. ಮೊದಲು ತಾನು ತಿಂದು ರುಚಿ ನೋಡಿದ. ಬಹು ರುಚಿಯಾಗಿತ್ತು. ಹಸಿಬೀಜವನ್ನೇ ನುಂಗಿಬಿಟ್ಟ. ಹನುಮನ ಬಲ ನೂರ್ಮಡಿಯಾಯ್ತು.

" 'ಗಿಡಗಳನ್ನೇ ಕಿತ್ತು ಹೊರೆಕಟ್ಟಿ ಹೊತ್ತ ಹನುಮ. ಅವನು ಅಂತರಿಕ್ಷ ಮಾರ್ಗದಲ್ಲಿ ರಭಸದಿಂದ ಹಾರಿ ಬರುತ್ತಿದ್ದಾಗ ಪಕ್ವವಾದ ಕೆಲವು ಹಣ್ಣುಗಳು ಭರತಖಂಡದ ಮೇಲೆ ಅಲ್ಲಲ್ಲಿ ಉದುರಿದವು. ಕ್ರಮೇಣ ಅವು ಭೂಮಿಯಲ್ಲಿ ಸಮೃದ್ಧವಾಗಿಯೇ ಬೆಳೆದವು. ಅತ್ತ ಕೈಲಾಸದಲ್ಲಿ ಕೂಡಲೇ ಧನ್ವಂತರಿ ಒಣಗಿದ ಹಣ್ಣನ್ನು ಒಡೆದು, ಬೀಜತೆಗೆದು, ಅಗ್ನಿಗೆ ಕೊಟ್ಟ. ಅಗ್ನಿ ಹದವಾಗಿ ಹುರಿದು ಕೊಟ್ಟ.

" 'ಅದನ್ನು ಅರೆದು, ಪುಡಿಮಾಡಿ ಕಷಾಯ ಕ್ಕಿಟ್ಟಾಯಿತು. ಅದಕ್ಕೆ ಹಾಲು-ಸಕ್ಕರೆ ಬೇಕು. ಸರಿ, ಗಣಪ್ಪ, ಸುಬ್ರಹ್ಮಣ್ಯರು ಓಡಿದರು. ದೇವಲೋಕದಿಂದ ಸಕ್ಕರೆ ಬಂತು. ವೈಕುಂಠದ ಕ್ಷೀರಸಾಗರದಿಂದ ಹಾಲು ಬಂತು. ಘಂ ಎನ್ನುವ ಕಷಾಯ

ತಯಾರಾಯಿತು. ದೊಡ್ಡ ಕರಂಡದ ತುಂಬಾ ಕಷಾಯ ತುಂಬಿ ಪರಮೇಶ್ವರನಿಗೆ ಕೊಟ್ಟ ಧನ್ವಂತರಿ. ಬಿಸಿಬಿಸಿಯಾಗಿ ಬಲು ರುಚಿಯಾಗಿತ್ತು. ಉಮೆ ಶಂಕರನ ಮುಖವನ್ನೇ ನೋಡುತ್ತಿದ್ದಳು. ಆರು ಗಳಿಗೆಯಲ್ಲಿ ಹರನ ಮೂಗಿನ ಗಂಗಾ ಪ್ರವಾಹ ನಿಂತಿತು. ಮೈ ಹಗುರವಾಗಿ ಜ್ವರಬಿಟ್ಟು ಪರಮೇಶ್ವರ ಪ್ರಸನ್ನನಾದ.

" 'ಈ ಪವಾಡವನ್ನು ಕಂಡು ದೇವತೆಗಳು ವಿಸ್ಮಯಪಟ್ಟರು. ಉಳಿದ ಕಷಾಯವನ್ನು ಧನ್ವಂತರಿ ನೆರೆದವರೆಲ್ಲರಿಗೂ ಬಿಸಿಬಿಸಿಯಾಗಿ ಕೊಟ್ಟ. ಅಮೃತ ಕುಡಿದು ಕುಡಿದು ಸೀ ಬಡಿದು ಹೋದ ಬಾಯಿಗೆ ಈ ಕಷಾಯ ಅಮೃತಕ್ಕಿಂತ ರುಚಿಯಾಗಿ ಕಂಡಿತು. ಎಲ್ಲರಿಗೂ ಮೈ ಹುರುಪು ಬಂದಿತು.

" 'ನಂತರ ದೇವತೆಗಳು ಧನ್ವಂತರಿಯನ್ನು ಕೇಳಿದರು: ಆ ಬೀಜದ ಹೇಸರೇನು ? ಎಂದು. ಧನ್ವಂತರಿ ಯೋಚಿಸಿದ. ಇವರಿಗೆ ತಿಳಿದರೆ ಸಂಜೀವಿನೀ ಪರ್ವತವೇ ಖಾಲಿಯಾದೀತು- ಎಂದು ಕೊಂಡು, ಯಾವಾಗಲೂ ಕೆಲವು ಮಹತ್ವದ ಔಷಧಿಗಳ ಹೆಸರು ಹೇಳಬಾರದು. ಹೇಳಿದರೆ ಅದರ ಶಕ್ತಿ ಕಡಿಮೆಯಾಗುತ್ತದೆ. ಅಲ್ಲದೆ ನೀವೆಲ್ಲ ಕೇಳಿದರೆ- ಸಂಜೀವ ಇದನ್ನು ಕೊಟ್ಟಾನೆ ? ಬೀಜವನ್ನು ಕಪಿರಾಜ ತಂದುಕೊಟ್ಟಿದ್ದರಿಂದ ನೀವು "ಕಪಿ ಬೀಜ" ಎಂದು ಕರೆಯಿರಿ. ಇಷ್ಟು ಸಾಕು. ಇನ್ನು ಹೊರಡಿ' ಎಂದಾಗ ಎಲ್ಲರೂ ಹೊರಟರು.

" ' ಮೊದಮೊದಲು ಕಲಿಯುಗದಲ್ಲಿ ಆ ಕಪಿಬೀಜದ ಹಣ್ಣುಗಳನ್ನು ಮಂಗಗಳೇ ತಿನ್ನುತ್ತಿದ್ದವು. ಮಾರುತಿಯ ಅಂಶದಿಂದ ಹುಟ್ಟಿದ- ಅಂದರೆ ಮಂಗನ ಮೂತಿಯ ಕೆಂಪು ಆಂಗ್ಲ ಜನ ಮೊಟ್ಟಮೊದಲು ಈ ಕಪಿ ಬೀಜವನ್ನು ಕಂಡು ಹಿಡಿದರು. ಅವರಿಗೆ ಕಪಿ ಎನ್ನಲು ಬರಲಿಲ್ಲ. 'ಕಫಿ' ಎಂದರು., ಬರಬರುತ್ತಾ ಅದು ಕಾಫಿಯಾಯಿತು.....' " ●

---

## ಮಾನವೀಯತೆ

**ಒಂ**ದು ಆತ್ಮ ಹಣದ ವಿರುದ್ಧ ಕೋರ್ಟಿಗೆ ಹೋಯಿತು. ನ್ಯಾಯಾಧೀಶರು ಆತ್ಮವನ್ನು ಕೇಳಿದರು, "ಆತ್ಮವೇ ಹೇಳು... ಈ ಹಣದ ವಿರುದ್ಧ ನಿನ್ನ ಆರೋಪ ಏನು ?" ಎಂದು.

ಆತ್ಮ ಹೇಳಿತು, "ನ್ಯಾಯಾಧೀಶರೆ, ಈ ಹಣ ನಾನು ವಾಸಿಸುತ್ತಿದ್ದ ಮಾನವನ ಮಾನವೀಯತೆಯನ್ನು ಕೊಂದುಹಾಕಿದೆ."

ನ್ಯಾಯಾಲಯದಲ್ಲಿದ್ದವರೆಲ್ಲ ಕುತೂಹಲದಿಂದ ಆತ್ಮದತ್ತ ನೋಡಿದರು. ನ್ಯಾಯಾಧೀಶರು, "ಆತ್ಮವೇ, ಮಾನವೀಯತೆ ಅಂದರೆ ಏನು ?" ಎಂದರು ಆಶ್ಚರ್ಯದಿಂದ.

ಆತ್ಮ ಬೆಚ್ಚಿಬಿತ್ತು. "ಏನು ? ಮಾನವೀಯತೆ ಎಂದರೆ ನಿಮಗೆ ಗೊತ್ತೇ ಇಲ್ಲವೆ ?"

ನ್ಯಾಯಾಧೀಶರು, "ಮಾನವೀಯತೆ ಎಂಬ ಶಬ್ದವನ್ನು ಇವತ್ತೇ ನಾವು ಕೇಳುತ್ತಿರುವುದು," ಎಂದರು.

ಆತ್ಮ ಮಾನವೀಯತೆಯ ಬಗ್ಗೆ ಏನೇನೋ ಹೇಳಿತು. ಆದರೆ ಅಲ್ಲಿದ್ದವರಿಗೆ ಅದರ ಒಂದು ಮಾತೂ ಅರ್ಥವಾಗಲಿಲ್ಲ.

ಆಗ ನ್ಯಾಯಾಧೀಶರು ಈ ರೀತಿ ಆಜ್ಞೆ ಕೊಟ್ಟರು:

" 'ಮಾನವೀಯತೆಯನ್ನು ಹಣ ಕೊಂದಿದೆ' ಎಂಬ ಆತ್ಮದ ಆರೋಪದ ಬಗ್ಗೆ ವಿಚಾರಿಸುವುದಕ್ಕಿಂತ ಮೊದಲು, ಈ 'ಮಾನವೀಯತೆ' ಎಂದರೇನು ? ಮತ್ತು ಅದು ಎಲ್ಲಿ ?, ಏಕೆ ?, ಹೇಗೆ ? ಇರುತ್ತದೆ ಎಂಬುದನ್ನು ಪತ್ತೆ ಹಚ್ಚಲು ಒಂದು ಪತ್ತೆದಳವನ್ನು ರಚಿಸಲಾಗಿದೆ. 'ಮಾನವೀಯತೆ' ಎಂಬ ಜೀವಿ, ಪ್ರಾಣಿ' ಅಥವಾ ಏನೋ ಒಂದು ಇರುವುದು ಪತ್ತೆ ಆದಮೇಲೆ, ಈ ಕೇಸನ್ನು ಕೈಗೆತ್ತಿಕೊಳ್ಳಲಾಗುವದು."

● ಸುರೇಶ ವಗ್ಗಾ

# ದೊಡ್ಡ ಮನೆ

**ಜಾನಪದ ವಿದ್ವಾಂಸ ಹೆಚ್.ಎಲ್. ನಾಗೇಗೌಡರು ತಮ್ಮ 'ದೊಡ್ಡ ಮನೆ' ಕಾದಂಬರಿಯಲ್ಲಿ ಗ್ರಾಮೀಣ ಪರಿಸರದ ಒಂದು ಅವಿಭಕ್ತ ಕುಟುಂಬದ ಚಿತ್ರಣವನ್ನು ನೀಡಿದ್ದಾರೆ. ಆ ಕಾದಂಬರಿಯ ನಾಯಕ ತನ್ನ ಕುಟುಂಬ ಒಂಬತ್ತು ಪಾಲಾಗುವುದನ್ನು ತಪ್ಪಿಸುವುದಕ್ಕಾಗಿ ತನ್ನ ತಮ್ಮನಲ್ಲಿ ತೋಡಿಕೊಳ್ಳುವ ಅಳಲನ್ನು ಮನಮಿಡಿಯುವಂತೆ ಚಿತ್ರಿಸಿದ್ದಾರೆ.**

## ಅಚ್ಚಳಿಯದ ಪುಟಗಳು

ತುಸು ಮೌನ ತಾಳಿದ ಗೌಡರು ಮತ್ತೆ ಶುರುಮಾಡಿದರು. "ಕೆಂಗಣ್ಣಾ, ನಾವಿಬ್ಬರೂ ಒಂದೇ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದವರಲ್ಲ, ನಿಜ. ಆದರೆ ನನಗೆ ನೀನು ಬೇರೆ, ಪುಟ್ಟಣ್ಣ ಬೇರೆ ಅಂತ ಇಲ್ಲ. ನಂಬು ನನ್ನ ಮಾತು. ಇಲ್ಲಿಯವರೆಗೆ ಉರಿದ ದೊಡ್ಡ ಮನೆಯ ಒಂದು ಒಲೆ ಒಂಬತ್ತು ಕಡೆ ಉರಿಯಬೇಕೇ, ಕೆಂಗಣ್ಣಾ! ಯೋಚನೆ ಮಾಡು. ನೀನು ನನ್ನ ಮೇಲೆ ಬಹಳ ಅನುಮಾನಪಟ್ಟೆ. ಆಸ್ತಿಯನ್ನೆಲ್ಲಾ ಮಗನ ಹೆಸರಿಗೆ ಬರೆದು ಬಿಡುವನೆಂದು ಯಾರೋ ನಿನ್ನ ತಲೆ ಕೆಡಿಸಿದರು. ಅದು ಯಾರೆಂದು ಮೊನ್ನೆ ಮನೆಯ ಮೇಲೆ ಕೂಗಿದ ಹುಂಜ ಸಾರಿ ಹೇಳಿತು. ಅವರು ಬದುಕಲಿ. ಆದರೆ ನನ್ನ ಬದುಕಿಗೆ ಹುಳಿ ಹಿಂಡಬಾರದಾಗಿತ್ತು. ಈ ಭೂಮಿತಾಯಿಯಾಣೆ ನಾನು ನಿನಗೆ ಮೋಸಮಾಡಬೇಕೆಂದಿರಲಿಲ್ಲ. ಹೋಗಲಿಬಿಡು. ಈಗ ಪಾಲು ಪಾರೀಖತ್ತು ನಿನ್ನ ಜೇಬಿನಲ್ಲಿದೆ. ಅದನ್ನು ಏಕೆ ಹಾಗೆ ಅದುಮಿಡಿದಿರುವೆ ? ನಾನು ಕಸಿಯುತ್ತೇನೆಂದು ಹೆದರಿಕೆಯೇ ? ಖಂಡಿತ ಇಲ್ಲ. ದೊಡ್ಡ ಮನೆಯ ಈ ಗೌಡ ಎಂದೂ ಕದ್ದದ್ದಿಲ್ಲ; ಕಸಿದದ್ದಿಲ್ಲ. ಅದು ನಿನ್ನ ಬಳಿಯೇ ಇರಲಿ. ಬಿಳಿಯ ಕಾಗದದ ಮೇಲೆ ಕರಿಮಸಿಯಲ್ಲಿ ಏನೇನೋ ಬರೆದಿದ್ದಾರೆ. ಅದಲ್ಲ ಮುಖ್ಯ. ನಿನ್ನ ಮನಸ್ಸಿನಲ್ಲಿ ಏನು ಉಳಿದಿದೆ ಅದು ಮುಖ್ಯ. ದೊಡ್ಡ ಮನೆಯನ್ನು ನೀನು ಅಳಿಸಬಹುದು, ಇಲ್ಲ ಉಳಿಸಬಹುದು. ಆದರೆ ನೀನು ಉಳಿಸುವ ಯೋಚನೆ ಮಾಡು, ಕೆಂಗಣ್ಣಾ. ದೊಡ್ಡ ಮನೆಯಲ್ಲಿ ಒಂಬತ್ತು ಒಲೆಗಳು ಉರಿಯಲೇಬೇಕೇ ?..... ಯೋಚನೆ ಮಾಡಿ ನೋಡು. ದುಡುಕಿ 'ಹೌದು' ಎನ್ನಬೇಡ. ಕೋಪದಲ್ಲಿ ಕೊಯ್ದ ಮೂಗು ಶಾಂತಿಯಲ್ಲಿ ಬರುವುದಿಲ್ಲ. 'ಅಟ್ಟಮೇಲೆ ಒಲೆ ಉರಿಯಿತು, ಕೆಟ್ಟ ಮೇಲೆ ಬುದ್ಧಿ ಬಂತು' ಎಂಬ ಮಾತು ಕೇಳಿದ್ದೀಯಲ್ಲ. ಬದುಕಿ ಕೆಟ್ಟವರನ್ನು ಈ ಕಣ್ಣು ನೋಡಬಾರದು. ದೊಡ್ಡ ಮನೆ ಬದುಕಿದ ಮನೆ. ಕೆಟ್ಟರೆ ನೋಡಲಾದೀತೆ ಅದನ್ನು ! ನಾನಿರುವವರೆಗಾದರೂ, ಈ ಘಟ ಈ ಭೂಮಿಯ ಮೇಲೆ ಓಡಾಡುತ್ತಿರುವವರೆಗಾದರೂ, ಎಲ್ಲರೂ ಒಂದು ಪಂಕ್ತಿಯಲ್ಲಿ ಕುಂತು ಉಣ್ಣಬೇಕೆಂಬ ಆಸೆ. ನಿನ್ನೊಬ್ಬನಿಂದ ನಮ್ಮ ಅಪ್ಪ ಅಮ್ಮಂದಿರು ಕಟ್ಟಿದ ಮನೆ, ನಾನೂ ನೀನೂ ಬೆಳಸಿದ ಮನೆ, ನನ್ನ ಕಾಲದಲ್ಲಿ ಅಳಿಯಬಾರದು; ನಿನ್ನ ಕಾಲಕ್ಕೂ ಅಳಿಯಬಾರದು. ಒಂದೇ ಒಲೆ, ಒಂದೇ ಅಡುಗೆ, ಒಂದೇ ಊಟ-ಎಷ್ಟು ಚೆಂದ ! ಕಷ್ಟ, ದೊಡ್ಡ ಸಂಸಾರ ಎಡರದೆ ಸಾಗುವುದು. ಅದು ಗೊತ್ತು ನನಗೆ. ಆದರೆ ಚಿಕ್ಕ ಸಂಸಾರಗಳೆಲ್ಲಾ ಸುಖವೆಂದು ತಿಳಿದೆಯಾ ? ಒಂಬತ್ತು ಒಲೆ, ಒಂಬತ್ತು ಅಡುಗೆ, ಒಂಬತ್ತು ಊಟ-ಎಲ್ಲಾ ಒಂಬತ್ತು ತರ ! ದೊಡ್ಡ ಮನೆಗೆ ತಕ್ಕದಾದ

ರೀತಿಯೇ ಅದು? ಈಗ ದೊಡ್ಡ ಮನೆ ಎಂದರ ವುಂದರೂ ಹಿಂದುಮುಂದು ನೋಡುತ್ತಾರೆ. ಊರಲ್ಲಿ ನಾನಿರಲಿ ಇಲ್ಲದಿರಲಿ, 'ದೊಡ್ಡಮನೆ' ಎಂಬ ಹೆಸರಿಗೆ ಮರ್ಯಾದೆ ಕೊಡುತ್ತಾರೆ. ನಿಮ ಗೆಲ್ಲ ಒಂದು ಘನತೆ ಗೌರವ ಉಂಟು. ಆಮೇಲೆ? ಕೈಲಾಗದವನೂ ನಿಮ್ಮನ್ನು ಅಲ್ಲಾಡಿಸುತ್ತಾನೆ....!

"ಯೋಚನೆಮಾಡು, ಕೆಂಗಣ್ಣಾ, ಮುಂದೆ ನನ್ನ ಮಕ್ಕಳೂ ನಿನ್ನ ಮಕ್ಕಳೂ ಏನು ಮಾಡಿಕೊಳ್ಳು ತ್ತಾರೋ ಗೊತ್ತಿಲ್ಲ. ಆದರೆ ಈಗ ನಾವಿಬ್ಬರೂ ತಿಳಿದೂ ತಿಳಿದೂ ಮಾಡಬಾರದ್ದನ್ನು ಮಾಡು ವುದೇ? ಕಂಡೂ ಕಂಡೂ ಕೈ ಕತ್ತರಿಸಿಕೊಳ್ಳು ವುದೇ? ಹನಿಗೂಡಿ ಹಳ್ಳ, ತೆನೆಗೂಡಿ ರಾಶಿ. ಹನಿ ಹನಿಕೂಡಿ ಬರುವ ಆ ಹಳ್ಳಗಳೆರಡು ಕೂಡಿ ಈ ಕೆರೆ. ಈ ಕೆರೆ ಯಾವುದರಿಂದ? ನಾವು ನಿಂತ ಏರಿಯಿಂದ. ಈ ಏರಿಯೇ ಇಲ್ಲ ಎನ್ನು, ಆಗ ಕೆರೆಯಲ್ಲಿ? ನಾವು ಒಂಬತ್ತು ಜನ ದೊಡ್ಡಮ ನೆಯ ದೊಡ್ಡ ಕೆರೆಗೆ ದೊಡ್ಡೇರಿ ಇದ್ದಂತೆ. ಒಂದು ಕಲ್ಲು ಸಡಿಲಿದರೆ ಏರಿ ಮೊಳೆಬಿದ್ದಂತೆ. ಆಗ ಕೆರೆಯಲ್ಲಾ ಬರಿದು. ಆಮೇಲೆ ಮಕ್ಕಳುಣ್ಣುವ ಅನ್ನಕ್ಕೇನು ಗತಿ! ಅಂತೆಯೇ ದೊಡ್ಡ ಮನೆ. ಉಳಿದವರೆಲ್ಲ ನನ್ನೊಟ್ಟಿಗಿದ್ದು ನಿನೊಬ್ಬನೇ ಬೇರೆ ಯಾದರೂ ಮನೆ ಹೋದಂತೆ! ಬ್ಯಾಡ, ನನ್ನಪ್ಪಾ! ಇನ್ನಷ್ಟು ದಿನ ನೋಡು; ಆ ಮೇಲೆ ನಿನ್ನಿಷ್ಟದಂತೆ ಮಾಡು. ಅವನಿಂದಾಗಿ ಈ ಮನೆ ಪಾಲಾಯಿತೆನ್ನು ವುದು ಬೇಡ. ಇದೊಂದು ಮಾತು ನಡೆಸಿ ಕೊಂಡು...."

ಇಷ್ಟು ಹೇಳಿ ಮುಗಿಸಿದ ಕೂಡಲೇ ಗೌಡರ ಕಣ್ಣಿನಲ್ಲಿ ತುಂಬಿದ ಕೆರೆಯನ್ನು ಜಲ್ಲುಗೋಡಿ ಬೀಳಿಸುವಷ್ಟು ನೀರು! ಗಳಗಳ ಅತ್ತರು. ಕಲ್ಲಾಗಿ ನಿಂತಿದ್ದ ಕೆಂಗಣ್ಣನೂ ಕರಗಿ ಅರೆಕ್ಷಣ ಅತ್ತ. ತುಟಿ ಪಿಟಕ್ಕೆನ್ನಲಿಲ್ಲ. ಜೇಬಿನಲ್ಲಿದ್ದ ಪಾರೀಖತ್ತನ್ನು ಹೊರ ದೆಗೆದು ಅಣ್ಣನ ಕಡೆಗೆಸೆದ. ಮೂರೇ ಹೆಜ್ಜೆಯಲ್ಲಿ ಏರಿ ಇಳಿದು, ಮನೆಯ ಕಡೆ ಧಾವಿಸಿದ.

ಸಂಗ್ರಹ: **ಗುಬ್ಬಿ. ವಿ. ಸತ್ಯನಾರಾಯಣ**

---

## ಎಂಟು ಆಣೆ ಇದ್ದಿದ್ದರೆ

**ಉ**ಪಾಧ್ಯಾಯ, ಶಾಸಕ, ರಾಯಭಾರಿ, ರಾಜಕಾರಣಿ ರೈಟ್ ಆನರಬಲ್ ವಿ.ಎಸ್. ಶ್ರೀನಿವಾಸಶಾಸ್ತ್ರಿಗಳು ಬಡಕುಟುಂಬವೊಂದರಿಂದ ಬಂದ ಮೇಧಾವಿ.

ಕುಂಭಕೋಣದ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗ ಒಂದು ದಿನ ಅವರು ನಡೆದು ಬರುತ್ತಿದ್ದ ಬಯಲಿನಲ್ಲಿ ಮಳೆ ಬಿದ್ದು ನೆನೆದು ಷರಟಿಲ್ಲದೆ ತರಗತಿಗೆ ಹಾಜರಾಗಬೇಕಾಯಿತು. ಪ್ರಿನ್ಸಿಪಾಲ್ ಬಿಲ್ಡರ್ ಬೆಕ್‌ರು ಈ ತಪ್ಪಿಗಾಗಿ ಶಾಸ್ತ್ರಿಗಳಿಗೆ ಎಂಟು ಆಣೆ (ಈಗಿನ ೫೦ ಪೈಸೆ) ಜುಲ್ಮಾನೆ ವಿಧಿಸಿದರು. ಶಾಸ್ತ್ರಿಗಳು ದುಃಖಿತರಾಗಿ, "ಎಂಟು ಆಣೆ ಇದ್ದಿದ್ದರೆ ಹೊಸ ಷರಟನ್ನೇ ಕೊಳ್ಳುತ್ತಿದ್ದೆ!" ಎಂದು ಉದ್ಗರಿಸಿದರು. ಶಾಸ್ತ್ರಿಗಳ ಬಡತನಕ್ಕೆ ಮರುಗಿದ ಪ್ರಿ. ಬೆಕ್‌ರು ತಾವೇ ದಂಡದ ಹಣ ತೆತ್ತು ಶಾಸ್ತ್ರಿಗಳಿಗೆ ಹೊಸ ಷರಟು ಕೊಡಿಸಿದರು.

ನಲವತ್ತು ವರ್ಷಗಳ ನಂತರ ಪ್ರೀವಿ ಕೌನ್ಸಿಲರ್ ಆಗಿ ಲಂಡನ್ನಿಗೆ ಹೋದ ಶ್ರೀನಿವಾಸ ಶಾಸ್ತ್ರಿಗಳು ತಮ್ಮ ಗುರುಗಳನ್ನು ಭೇಟಿಯಾದರು. ಶಿಷ್ಯನ ಅಭ್ಯುದಯದಿಂದ ಆನಂದಿತರಾದ ಪ್ರಿ.ಬಿಲ್ಡರ್ ಬೆಕ್‌ರು ಶಾಸ್ತ್ರಿಗಳ ಗೌರವಾರ್ಥ ಪಾರ್ಟಿಯೊಂದನ್ನಿತ್ತರು. ಪಾರ್ಟಿಗೆ ಬಂದಿದ್ದ ತಮ್ಮ ಮಿತ್ರರಿಗೆ ಷರಟಿನ ಕರುಣಾಜನಕ ಕಥೆಯನ್ನು ಹೇಳುತ್ತಿದ್ದಂತೆಯೆ, ಶಾಸ್ತ್ರಿಗಳು ತಮ್ಮ ಕ್ಯಾರಿ ಬ್ಯಾಗಿನಿಂದ ಪ್ರಿ. ಬೆಕ್‌ರ ಬಹುಮಾನದ ಉಡುಗೊರೆಯಾದ ಆ ಷರಟನ್ನು ತೆಗೆದು ಹೆಮ್ಮೆಯಿಂದ ಪ್ರದರ್ಶಿಸಿದರು. ತಮ್ಮ ಪ್ರೀತಿಯ ಉಪಾಧ್ಯಾಯರ ಕೊಡುಗೆಯನ್ನು ಅಷ್ಟು ವರ್ಷವೂ ಭಕ್ತಿಯಿಂದ ಸಂರಕ್ಷಿಸಿದ್ದರು.

(ಸಾಧಾರ)

● **ಟಿ.ಆರ್. ವೆಂಕಟೇಶಮೂರ್ತಿ**



ಇದು ಅವರ ಜನ್ಮ ಶತಮಾನೋತ್ಸವ ವರ್ಷ

# ಅದ್ಭುತ ಔಷಧಗಳ ಶೋಧಕ




● ಡಾ. ಮೋಹನ ಕುಂಟಾರ್

ಯಲ್ಲಪ್ರಗಡ ಸುಬ್ಬರಾವ್ ಅವರ ಹೆಸರನ್ನು ಅನೇಕರು ಕೇಳಿರಲಾರರು. ಆದರೆ ವೈದ್ಯಕೀಯ ಲೋಕ ಈ ಹೆಸರನ್ನು ಮರೆಯುವಂತಿಲ್ಲ. ಸುಬ್ಬರಾವ್ ಅವರಿಂದಲೇ ನಾವಿಂದು ಸುಖವಾಗಿ ಬದುಕುತ್ತಿದ್ದೇವೆ. ಮುಂದೆಯೂ ದೀರ್ಘಕಾಲ ಬದುಕುವುದು ಸಾಧ್ಯವಾಗಿದೆ. ಇತ್ತೀಚೆಗೆ ದೇಶದಲ್ಲಿ ಪ್ಲೇಗು ಕಾಣಿಸಿಕೊಂಡಾಗ ಪ್ರತಿರೋಧಕವಾಗಿ ಟೆಟ್ರಾಸೈಕ್ಲಿನ್ ಬಳಸುವಂತೆ ಸೂಚಿಸಲಾಗಿತ್ತು. ಈ ಪ್ರತಿರೋಧಕವನ್ನು ಕಂಡು ಹಿಡಿದವರು ಯಲ್ಲಪ್ರಗಡ ಸುಬ್ಬರಾಯರು. ವೈರಸ್‌ಗಳ ಕಾರಣದಿಂದ ಬರುವ ಎದೆ, ಮೂತ್ರ ಕೋಶ ಮತ್ತು ಲೈಂಗಿಕ ಸಂಬಂಧಿ ಜ್ವರಗಳಿಗಾಗಿ ಇರುವ ಅನೇಕ ರೋಗ ಪ್ರತಿರೋಧಕಗಳಲ್ಲಿ ಟೆಟ್ರಾಸೈಕ್ಲಿನ್‌ಗಳು ಸರ್ವರೋಗ ಪರಿಹಾರಕಗಳಂತೆ ಇವೆ. ಈ ಮಾತ್ರೆಗಳನ್ನು ಅನುಭವಿ ವೈದ್ಯರೇ ಬರೆದುಕೊಡಬೇಕೆಂದೇನಿಲ್ಲ. ಏಕೆಂದರೆ ಈ ಕಾಯಿಲೆಗಳ ವಿರುದ್ಧ ಟೆಟ್ರಾಸೈಕ್ಲಿನ್ ಗುಳಿಗೆಗಳು ಒಂದೇ ರೀತಿಯ ಪರಿಣಾಮವುಳ್ಳವುಗಳಾಗಿವೆ. ಆಗಾಗ ಒಂದಷ್ಟು ಗುಳಿಗೆಗಳನ್ನು ನುಂಗಿ, ಜ್ವರವನ್ನು ಗಣಿಸದೆ ದೈನಂದಿನ ಚಟುವಟಿಕೆಯಲ್ಲಿ ನಿರತವಾಗುತ್ತ, ಎರಡು ದಿವಸಗಳಲ್ಲಿಯೇ ಸಂಪೂರ್ಣ ಗುಣಮುಖವಾದ ಅನುಭವ ಪ್ರಪಂಚದ ಲಕ್ಷಾಂತರ ಜನರಲ್ಲಿ ನಿಮಗೂ ಆಗಿರಬಹುದು.

ಆಕಸ್ಮಿಕವಾಗಿಯಾಗಲಿ ಉದ್ದೇಶರಹಿತವಾಗಿಯಾಗಲಿ ಸುಬ್ಬರಾವ್ ರೋಗಪರಿಹಾರಕವನ್ನು ಕಂಡುಹಿಡಿಯಲಿಲ್ಲ. ತನ್ನ ಇಡೀ ಹುಡುಕಾಟವನ್ನು ಕ್ರಮಬದ್ಧವಾಗಿ ಯೋಜಿಸಿದ್ದರಿಂದ ವೈಜ್ಞಾನಿಕವಾಗಿ, ಶ್ರಮಪೂರ್ವಕವಾಗಿ ನಿರ್ವಹಿಸಿದ್ದರಿಂದ ಇದು ಸಾಧ್ಯವಾಯಿತು.

ರೀನ್ ಡುಬೋಸ್‌ನು ಕಂಡುಹಿಡಿದ ಗ್ರಾಮಿಸಿಡಿನ್ ಹಾಗೂ ಅಲೆಗ್ಸಾಂಡರ್ ಫ್ಲೆಮಿಂಗ್

(ಆಧಾರ: 'ಸೈನ್ಸ್ ರಿಪೋರ್ಟರ್' ಪತ್ರಿಕೆ)

ಕಂಡುಹಿಡಿದ ಪೆನಿಸಿಲಿನ್‌ಗಳನ್ನು ರೋಗಪ್ರತಿ ರೋಧಕಗಳಲ್ಲೇ ಪ್ರಥಮ ಎಂದು ಪರಿ ಗಣಿಸಲಾಗಿತ್ತು. ಆದರೆ ವಾಸ್ತವವಾಗಿ ರೋಗ ಪ್ರತಿರೋಧಕವನ್ನು ಮೊತ್ತಮೊದಲು ಕಂಡುಹಿಡಿದವರು ನಮ್ಮ ಸುಬ್ಬರಾವ್. ಗ್ರಾಮಿಸಿಡಿನ್‌ನ ಉಪ ಪರಿಣಾಮಗಳನ್ನು ಗಮನಿಸಿ ಅದನ್ನು ಬಳಸಬಾರದೆಂದು ವೃತ್ತಿನಿರತ ವೈದ್ಯರು ನಿರ್ಧರಿಸಿದ್ದಾರೆ. ಬ್ರಿಟಿಷ್ ಜನ ಇನ್ನೂ ಪರಿಷ್ಕೃತಗೊಂಡಿಲ್ಲದಿದ್ದ ಪೆನ್ಸಿಲಿನ್‌ನ್ನು ಕೇವಲ ಪ್ರಾಯೋಗಿಕ ಅಧ್ಯಯನಕ್ಕಾಗಿ ಬಳಸುತ್ತಿದ್ದ ಕಾಲಕ್ಕಾಗಲೇ ಸುಬ್ಬರಾವ್ ಶುದ್ಧ ಪೆನಿಸಿಲಿನ್‌ನ್ನು ಕಂಡುಹಿಡಿದಿದ್ದರು. ಎಚ್. ಡಬ್ಲ್ಯು ಫ್ಲೋರೇ ವಾಣಿಜ್ಯ ಮಟ್ಟದಲ್ಲಿ ಪೆನಿಸಿಲಿನ್‌ನ್ನು ಉತ್ಪಾದಿಸಬಹುದೆಂದು ಅತಿ ಉತ್ಸಾಹದಿಂದ ಸಾರಿ ಹೇಳಿದ. ಸಂಯುಕ್ತ ಸಂಸ್ಥಾನಗಳಿಗೆ ಹೋಗಿದ್ದಾಗ ಅಲ್ಲಿ ಆಗಲೇ ಸುಬ್ಬರಾವ್ ಕಂಡುಹಿಡಿದ ಪೆನಿಸಿಲಿನ್ ಹೆಚ್ಚು ಸಮರ್ಥವಾದದ್ದೆಂಬುದನ್ನು ಸಂಶೋಧಕರು ಕಂಡುಕೊಂಡಿದ್ದರು.

ಆರೋಗ್ಯದ ಮೇಲೆ ದುಷ್ಪರಿಣಾಮಗಳನ್ನು ಉಂಟು ಮಾಡದೆ, ರೋಗದ ಮೇಲೆ ಪರಿಣಾಮವನ್ನು ಬೀರುವ, ರೋಗಪೀಡಿತ ಅಂಗಗಳಿಗೆ ಪುಷ್ಟಿಯನ್ನು ಕೊಡಬಲ್ಲ ರೋಗ ಪರಿಹಾರಕವನ್ನು ಕಂಡುಹಿಡಿಯುವುದಾಗಿ ಸುಬ್ಬರಾವ್ ಸಹೋದ್ಯೋಗಿಗಳ ಮುಂದೆ ಘೋಷಿಸಿದ್ದರು. ಬಳಿಕ ಕೋಲಂಬಿಯಾದ ಮಿಸ್ಸೇರಿ ನಗರದಲ್ಲಿ ಸುಬ್ಬರಾವ್ ಲೆಡರೆ ಲ್ಯಾಬೋರೇಟರಿಗಳಲ್ಲಿ ಸಂಶೋಧನಾನಿರತರಾಗಿದ್ದರು. ನಿರಂತರ ಪ್ರಯತ್ನದ ಫಲವಾಗಿ ಶೋಧಿಸಿದ ಚಿನ್ನದ ಬಣ್ಣದ ಪ್ರತಿರೋಧಕಗಳಿಗೆ 'ಆರೋಮೈಸಿನ್' ಎಂದು ಹೆಸರಿಸಿದರು. ಅನೇಕ ಪರಾವಲಂಬಿ ಸಾಂಕ್ರಾಮಿಕ ವೈರಸ್‌ಗಳ ಮೇಲೆ ಈ ಪ್ರತಿರೋಧಕವು ಪರಿಣಾಮಕಾರಿಯಾಗಿದೆ ಎಂಬುದನ್ನು ಸೋದಾಹರಣವಾಗಿ ತೋರಿಸಿಕೊಟ್ಟರು. ಪೆನಿಸಿಲಿನ್ ಮತ್ತು ಸ್ಟ್ರೆಪ್ಟೋಮೈಸಿನ್‌ಗಳಿಗಿಂತ ಮೂತ್ರಕೋಶ ಸಂಬಂಧವಾದ ಅಂಟುರೋಗಗಳ ವಿರುದ್ಧ 'ಆರೋಮೈಸಿನ್' ಪರಿಣಾಮಕಾರಿಯಾಗಿ ಕೆಲಸ ಮಾಡುತ್ತಿತ್ತು. ಮುಂದಿನ ಅರ್ಧಶತಮಾನದ ವೈದ್ಯಕೀಯ ವೃತ್ತಿಯಲ್ಲಿ ಪ್ರಪಂಚದಾದ್ಯಂತ ಟೆಟ್ರಾಸೈಕ್ಲಿನ್, ಏರೋಮೈಸಿನ್ ಮತ್ತು ಅವುಗಳನ್ನು ಬಳಸಿ ಉತ್ಪಾದಿಸಿದ ಇತರ ಔಷಧಿಗಳನ್ನು ನ್ಯೂಮೋನಿಯಾ ಸೇರಿದಂತೆ ಮೂತ್ರಕೋಶ, ಎದೆಯ ಸಂಬಂಧವಾದ ಸಾಮಾನ್ಯ ಅಂಟು ರೋಗಗಳ ವಿರುದ್ಧ ಬಳಸಲಾಗುತ್ತಿತ್ತು. ಸಿಫಿಲಿಸ್ ಮತ್ತು ಗೊನೊರಿಯಾ ರೋಗಿಗಳಿಗೆ ಪೆನಿಸಿಲಿನ್ ಅಲರ್ಜಿಯಾದಾಗ ದ್ವಿತೀಯ ಆಯ್ಕೆಯಾಗಿಯೂ ಏರೋಮೈಸಿನ್ ಬಳಸಲಾಗುತ್ತಿತ್ತು.

ಸುಬ್ಬರಾವ್ ತರುಣರಾಗಿದ್ದಾಗ ತಗುಲಿದ ಕಾಯಿಲೆಯೊಂದರಿಂದ ಇನ್ನೇನು ಪ್ರಾಣವನ್ನೇ ಕಳೆದುಕೊಳ್ಳುವುದರಲ್ಲಿದ್ದರು. ಆದರೆ ರೋಗದ ವಿರುದ್ಧ ಹೋರಾಡಿ ಜಯಗಳಿಸಿದರು. ಸುಬ್ಬರಾವ್‌ರ ಸೋದರರಿಬ್ಬರು ಅದೇ ಕಾಯಿಲೆಯಿಂದ ತೀರಿಕೊಂಡರು. ಕುಗ್ಗಿದ ಜೀರ್ಣಶಕ್ತಿ, ಜೀವಸತ್ವಗಳ ಕೊರತೆಯಿಂದ ಬಂದ ಟ್ರೋಪಿಕಲ್ ಸ್ಪ್ರೂ ಅವರನ್ನು ಬಲಿ ತೆಗೆದುಕೊಂಡ ದೈತ್ಯ ಕಾಯಿಲೆ. ಜೊತೆಗೆ ಅನಿಮೀಯಾ ಸಹ ಇತ್ತು. ಹಾನಿಕಾರಕವಾದ ಅನಿಮೀಯಾವನ್ನು ಗುಣಪಡಿಸುವ ಜೀವಸತ್ವಗಳನ್ನು ಯಕೃತ್ತಿನಿಂದ ಪ್ರತ್ಯೇಕಿಸುವ ಕೆಲಸವನ್ನು ಹಾರ್ವರ್ಡ್‌ನ ಸಹೋದ್ಯೋಗಿಗಳು ಅರ್ಧದಲ್ಲಿ ಕೈಬಿಟ್ಟಿದ್ದರು. ಅದನ್ನು ಸುಬ್ಬರಾವ್ ಸವಾಲೆಂಬಂತೆ ಸ್ವೀಕರಿಸಿ ಯಕೃತ್ತಿನಿಂದ ದ್ರವರೂಪದಲ್ಲಿ ಮನೋಹರವಾದ ಗುಲಾಬಿ ಬಣ್ಣದ ಜೀವಸತ್ವ ಬಿ-೧೨ನ್ನು ಪಡೆದರು. ಇದನ್ನು ವೈದ್ಯಕೀಯ ಪ್ರಯೋಗಕ್ಕೆ ಒಳಪಡಿಸುವಷ್ಟರಲ್ಲಿ ಪ್ರತಿಸ್ಪರ್ಧಿಯಾದ ಸಂಶೋಧನಾ ತಂಡವೊಂದು ಈ ಗುಲಾಬಿ ರಂಗಿನ ಜೀವಸತ್ವ ಹಾನಿಕಾರಕವಾದ ಅನಿಮೀಯಾವನ್ನು ಎದುರಿಸಬಲ್ಲದು ಎಂದು ಪ್ರಕಟಿಸಿತು.

ವಾಸ್ತವವಾಗಿ ಸ್ಪ್ರೂ ರೋಗವನ್ನು ಶಮನ ಮಾಡುವುದು ಫೋಲಿಕ್ ಆಮ್ಲವೇ ಹೊರತು ಬಿ-೧೨ ಅಲ್ಲ. ಬಿ-೧೨ನ್ನು ಕಂಡುಹಿಡಿಯುವುದಕ್ಕೆ ಐದು ವರ್ಷಗಳಿಗೆ ಮೊದಲೇ ಫೋಲಿಕ್ ಆಮ್ಲವನ್ನು ಸುಬ್ಬರಾವ್ ಯಕೃತ್ತಿನಿಂದ ಹೊರತೆಗೆದರು. ಸುಬ್ಬರಾವ್ ಅವರ ಪ್ರಯೋಗಾಲಯದ ಒಂದು ತಂಡ ಲ್ಯಾಕ್ಟಿಕ್ ಆಮ್ಲ ಸಂತತಿಗೆ ಸೇರಿದ ಬ್ಯಾಕ್ಟೀರಿಯಾಗಳನ್ನು ಮಿಶ್ರ ದ್ರಾವಣದಲ್ಲಿ ಸೇರಿಸುವುದರ ಮೂಲಕ ಹರಳು ರೂಪದ ಫೋಲಿಕ್ ಆಮ್ಲವನ್ನು ಪಡೆಯುವಲ್ಲಿ ಯಶಸ್ವಿಯಾಯಿತು.

ಆದರೆ ಈ ಸಂಸ್ಕರಣೆ ವಾಣಿಜ್ಯ ನೆಲೆಯಲ್ಲಿ ದುಬಾರಿಯಾದುದು. ಸುಬ್ಬರಾವ್ ತಂಡದ ರಾಸಾಯನ ತಜ್ಞರು ಫೋಲಿಕ್ ಆಮ್ಲದ ಉತ್ಪನ್ನಗಳನ್ನು ಎಷ್ಟೋ ರಾಸಾಯನಿಕ ಅಧ್ಯಯನಗಳ ಆರಂಭದಲ್ಲಿ ಬಳಸುತ್ತಿದ್ದುದರಿಂದ ಈಗಾಗಲೇ ಫೋಲಿಕ್ ಆಮ್ಲವನ್ನು ಕೃತಕವಾಗಿ ಪಡೆಯಲು ಸಮರ್ಥರಾಗಿದ್ದರು. ಅವರು ಬಿ-೧೨ಗಿಂತ ಮೂರು ವರ್ಷಗಳಷ್ಟು ಮೊದಲೇ ಇದನ್ನು ಕಂಡು ಹಿಡಿದಿದ್ದರು. ಫೋಲಿಕ್ ಆಮ್ಲ ಒಂದನ್ನೇ ಅಥವಾ ಬಿ-೧೨ನೊಂದಿಗೆ ಬಳಸಿದಾಗ ವ್ಯಾಪಕವಾದ ವಿವಿಧ ಪೌಷ್ಟಿಕಾಂಶಗಳ ಕೊರತೆಯ ಕಾಯಿಲೆ ಗಳಿಗೆ ಪರಿಣಾಮಕಾರಿಯಾಗಿದೆ.

ಸುಬ್ಬರಾವ್ ಅವರು ಸಹೋದ್ಯೋಗಿಗಳ ಜೊತೆ ಕ್ಯಾನ್ಸರ್ ಕೋಶಗಳ ಬೆಳವಣಿಗೆಯನ್ನು ಕುಗ್ಗಿಸುವಲ್ಲಿ ಸಮರ್ಥವಾದ ಫೋಲಿಕ್ ಆಮ್ಲ ಪ್ರತಿರೋಧಕವನ್ನು ಕಂಡುಹಿಡಿದರು. ಅವರು ಕಂಡುಹಿಡಿದ ಪ್ರತಿರೋಧಕಗಳಲ್ಲಿ ಒಂದಾದ ಅಮಿನೋಪೆಟರಿನ್ ತೀಕ್ಷ್ಣವಾದ ಲ್ಯೂಕೀಮಿಯಾ ಅಥವಾ ರಕ್ತದ ಕ್ಯಾನ್ಸರ್‌ನಿಂದ ಬಳಲುತ್ತಿರುವ ಮಕ್ಕಳನ್ನು ತಕ್ಷಣ ಚೇತರಿಸಿಕೊಳ್ಳುವಂತೆ ಮಾಡುವಲ್ಲಿ ಸಫಲವಾಯಿತು. ಈ ಉತ್ಪನ್ನಗಳಲ್ಲೊಂದಾದ ಮೆಥೊಟ್ರೆಕ್ಸೇಟ್ ಕ್ಯಾನ್ಸರ್‌ನ ವಿರುದ್ಧವಾದ ಒಂದು ಸಮರ್ಥ ಔಷಧ. ಅಲ್ಲದೆ ರಾಸಾಯನಿಕ ಚಿಕಿತ್ಸೆಯಲ್ಲಿಯೂ ಕ್ರಾಂತಿಕಾರಕ ಬದಲಾವಣೆಗೆ ಸಹಾಯಕವಾಗಿದೆ.

ರಸಾಯನ ತಜ್ಞರು ಮತ್ತು ಔಷಧಿ ತಜ್ಞರೊಂದಿಗೆ ಜತೆಗೂಡಿ ಕ್ಯಾನ್ಸರ್ ರೋಗವನ್ನು ಸಂಪೂರ್ಣ ನಿರ್ಮೂಲನ ಮಾಡುವ ಗುರಿಯನ್ನು ಅವರು ಹೊಂದಿದ್ದರು. ಕ್ಯಾನ್ಸರಿನ ವಿರುದ್ಧ ಅಮಿನೋಪ್ಟೆರಿನ್ ಪ್ರಯೋಗ ಯಶಸ್ವಿಯಾದ ವರದಿಗಳು ಬಂದ ನಂತರ ಕ್ಯಾನ್ಸರನ್ನು ಗೆದ್ದೇ ತೀರುವೆನೆಂಬ ಹೋರಾಟದಲ್ಲಿ ಸುಬ್ಬರಾವ್‌ಗೆ ಅಗಾಧವಾದ ಆಶಾಭಾವನೆ ಬೆಳೆಯಿತು. ಬಳಿಕ ಕ್ಯಾನ್ಸರ್ ಸಂಶೋಧನಾ ಸಂಸ್ಥೆಯನ್ನು ಯೋಜಿಸಿದರು. ಹತ್ತು ವರ್ಷಗಳ ಅವಕಾಶ ದೊರೆತಿದ್ದಿದ್ದರೆ ಅದರಲ್ಲಿ ಸುಬ್ಬರಾವ್ ಜಯಶಾಲಿಯಾಗುತ್ತಿದ್ದರು ಎಂದು ಅವರ ಕನಸುಗಳಲ್ಲಿ ಪಾಲುಗೊಂಡ ಸಹೋದ್ಯೋಗಿಗಳು ಹೇಳುತ್ತಿದ್ದರು. ಆದರೆ ಹಾಕಿಕೊಂಡ ಯೋಜನೆಗಳು ಆರಂಭವಾಗುವ ಮೊದಲೇ ಸುಬ್ಬರಾವ್ ತೀರಿಕೊಂಡರು. ೧೯೪೮ ಆಗಸ್ಟ್ ೮-೯ರ ನಡುವಣ ರಾತ್ರಿ ನಿದ್ದೆಯಲ್ಲಿದ್ದಾಗಲೇ ಸುಬ್ಬರಾವ್ ನಿಧನ



ಹೊಂದಿದರು. ಆಗ ಅವರಿಗೆ ಕೇವಲ ಐವತ್ಮೂರು ವರ್ಷಗಳು.

ಕೇವಲ ಹತ್ತು ವರ್ಷಗಳಲ್ಲಿ ಸುಬ್ಬರಾವ್ ಗೈದ ಸಾಧನೆ ಅಗಾಧವಾದುದು. ಒಂದು ಪ್ರತಿರೋಧಕ, ಒಂದು ವಿಟಾಮಿನ್ ಮತ್ತು ಕ್ಯಾನ್ಸರ್ ನಿರೋಧಕಗಳನ್ನು ಅವರು ಸಂಶೋಧಿಸಿದ್ದರು. ಇದರ ಜೊತೆಗೆ ಡಯಥಿಲ್ ಕಾರ್ಬಾಮೆಝೈನ್ ಅನ್ನು ಕಂಡುಹಿಡಿದರು. ಇದು ಇಂದಿಗೂ ಆನೆಕಾಲು ರೋಗದ ವಿರುದ್ಧ ಅತ್ಯಂತ ಪರಿಣಾಮ ಕಾರಿಯಾದ ಔಷಧಿಯಾಗಿದೆ. ಇಷ್ಟೇ ಅಲ್ಲದೆ ಅವರು ವಿಟಾಮಿನ್‌ನ್ನು ವಿಘಟಿಸುವಲ್ಲಿ ಬಳಕೆ ಯಲ್ಲಿದ್ದ ವಿಧಾನಗಳನ್ನು ಉತ್ತಮಪಡಿಸಲು ಬಿ ಕಾಂಪ್ಲೆಕ್ಸ್‌ನ ಘಟಕಗಳನ್ನು ಪ್ರಯೋಗಗಳ ಮೂಲಕ ನಿರೂಪಿಸಿದ್ದರು.

ಆದರೆ, 'ಅದ್ಭುತ ಔಷಧಿಯ ಗಾರುಡಿಗ', 'ಅ... ಔಷಧಗಳ ಶೋಧಕ' ಎಂಬ ಹೊಗಳಿಕೆಗೆ ಪಾತ್ರರಾದ ಈ ಬುದ್ಧಿಶಾಲಿ ಕೀರ್ತಿಶಾಲಿಯಾಗದೆ ತೆರೆಯ ಮರೆಯಲ್ಲೇ ಉಳಿದರು. ನಟರ ಪ್ರತಿಭೆ ಯನ್ನು ಹೊರಚೆಲ್ಲುವ, ಹಿನ್ನೆಲೆಯಲ್ಲಿ ನಿಂತು ಕೆಲಸ ಮಾಡುವ ನಿರ್ದೇಶಕನಂತೆ ಸುಬ್ಬರಾವ್ ತನ್ನ ಯೋಜನೆಗೆ ಸಹಾಯಕರಾಗಿ ಕೆಲಸ ಮಾಡು ವವರೇ ಮುಖ್ಯವೆಂದು ಭಾವಿಸಿದ ಕೇವಲ ಒಬ್ಬ ನಿರ್ದೇಶಕ. ಮಣ್ಣನ್ನು ವಿಶ್ಲೇಷಿಸಿ ಕೈಗೊಂಡ ಶೋಧನೆಯಲ್ಲಿ ವರ್ಣಪಟಲದ ಎಡಬಲದಲ್ಲಿ ಜ್ವರದ ಕೀಟ (fever bug) ಗಳನ್ನು ತಿನ್ನುವ ಚಿನ್ನದ ಬಣ್ಣದ ಕೀಟ (golden bug)ಗಳನ್ನು ಕಂಡುಹಿಡಿದವ ಬೆಂಜಮಿನ್ ದುಗ್ಗರ್. ಕಾಯ್ ವಾಲ್ಲರ್‌ನ ಫೋಲಿಕ್ ಆಮ್ಲ ತಯಾರಿಕೆಯಲ್ಲಿ ಕಾಯ್‌ವಾಲ್ಲರ್ ಅಸಾಂಪ್ರದಾಯಕ ರೀತಿಯಲ್ಲಿ ಯೋಚಿಸಿ ರೂಪಿಸಿದ ದಾರಿ ಬಹಳ ಅಗ್ಗದ್ದೂ ಹೌದು. ಸಿಡ್ನಿ ಫಾಬರ್‌ನು ಲ್ಯೂಕಿಮಿಯಾಕ್ಕೆ ಸಮರ್ಥವಾದ ಪ್ರತಿರೋಧಕವನ್ನು ಕಂಡುಹಿಡಿದ. ಪರೀಕ್ಷೆಗೆ ಬಂದ ನೂರಾರು ರಾಸಾಯನಿಕಗಳಲ್ಲಿ ಇದು ಮೈಲೇರಿಯಾದ ವಿರುದ್ಧ ಕ್ರಿಯಾಶೀಲವಾಗಿ ರುತ್ತದೆಂಬುದನ್ನು ರೆಜಿನಲ್ ಹೆವಿಟ್ ಗುರುತಿಸಿದ. ಆದರೆ ಇವರೆಲ್ಲರ ಹಿನ್ನೆಲೆಯಲ್ಲಿದ್ದು ಅವರನ್ನು ಸಮರ್ಥವಾಗಿ ನಿರ್ದೇಶಿಸಿದವರು ಸುಬ್ಬರಾವ್.

ಲೆಡರ್ಲೆ ಪ್ರಯೋಗಾಲಯದಲ್ಲಿ ಹಾನಿಕಾರಕ ವಾದ ಅನಿಮೀಯಾವನ್ನು ಹೋಗಲಾಡಿಸುವಲ್ಲಿ ಶಕ್ತವಾದ ಔಷಧವನ್ನು ಯಕೃತ್ತಿನಿಂದ ಸಂಸ್ಕರಿಸಿ ದ್ದರು. ಪಲ್ಲಗ್ರ (Pallagra)ದಲ್ಲಿ ನಿಕೋಟಿನಿಕ್ ಆಮ್ಲದ ಪಾತ್ರವನ್ನು ನಿರೂಪಿಸಿದ್ದರು. ಮಾನವನ ಪೌಷ್ಟಿಕಾಂಶದಲ್ಲಿ ಪಂತೋಥೆನಿಕ್ ಆಮ್ಲದ ಪಾತ್ರ ಗಳನ್ನು ಗುರುತಿಸಿದ್ದರು. ಅಕಾಡೆಮಿಕ್ ಸಮೂಹ ವನ್ನು ಬಿಡುವುದಕ್ಕೆ ಮುನ್ನ ಸುಬ್ಬರಾವ್ ಅವರು ಜೀವಸತ್ವ ಪ್ರಯೋಗಾಲಯದ ಸಂಗ್ರಹವನ್ನು ಸಮೃದ್ಧಗೊಳಿಸಿದ್ದರು. ಹಾರ್ವರ್ಡ್‌ನಲ್ಲಿ ಪದವಿ ತರಗತಿಯ ವಿದ್ಯಾರ್ಥಿಯಾಗಿದ್ದ ದಿವಸಗಳಲ್ಲಿಯೇ ಪ್ರಮುಖ ಸಾಧನೆಗಳನ್ನು ಮಾಡಿದ್ದರು. ಸೈರಸ್ ಫಿಸ್ಕೆ ಅವರ ಮಾರ್ಗದರ್ಶನದಲ್ಲಿ ರಕ್ತ ಮತ್ತು ಮೂತ್ರದಲ್ಲಿರುವ ಫೋಸ್ಫರಸ್‌ನ್ನು ಅಳೆಯುವ ವಿಧಾನವನ್ನು ನಿರೂಪಿಸಿದ್ದರು. ಮೆದು ಮೂಳೆ ರೋಗಗಳ (rickets) ಸ್ವಭಾವ ನಿರೂಪಣೆ, ಮೂತ್ರ ಜನಕಾಂಗದ ರೋಗಗಳು, ಪಾರಾ ಥೈರಾಯ್ಡ್ ಹಾರ್ಮೋನ್‌ಗಳ ಕೊರತೆ ಹಾಗೂ ಆಧಿಕ್ಯ ಮತ್ತು ಎಲುವುಗಳ ವರ್ಗೀಕರಣಗಳಲ್ಲಿ ಬಳಸಲಾಗುವ ಫಿಸ್ಕೆ-ಸುಬ್ಬರಾವ್ ವಿಧಾನವು, ಸಿಹಿಮೂತ್ರ ಕಾಯಿಲೆಯ ನಿದಾನ ಮತ್ತು ನಿಯಂತ್ರಣಗಳಲ್ಲಿ ಅತ್ಯಮೂಲ್ಯವಾದುದು.

ಫಿಸ್ಕೆಯ ಜೊತೆ ಸೇರಿ ಸಂಶೋಧನೆ ನಡೆಸಿ ಜೈವಿಕ ಕ್ರಿಯೆಗಳನ್ನು ಶೋಧಿಸುವಲ್ಲಿ ಸಹಾಯಕ ವಾಗುವ, ಮಾನವನ ಚಟುವಟಿಕೆಗಳಿಗೆ ಬೇಕಾದ ಸ್ನಾಯುಗಳ ಬಲವರ್ಧನೆಗೆ ಮೂಲ ಕಾರಣ ಗಳಾದಂತಹ ಫೋಸ್ಫೋಕ್ರಿಯೇಟಿವ್ ಮತ್ತು ಎ.ಟಿ.ಪಿ. (adenosine triphospte)ಯನ್ನು ಸುಬ್ಬರಾವ್ ಕಂಡುಹಿಡಿದರು.

ಆಂಧ್ರದ ಸಮುದ್ರ ತೀರದ ಹಿನ್ನೀರು ಪ್ರದೇಶ ದಿಂದ ಸುಬ್ಬರಾವ್ ಹಾರ್ವರ್ಡ್ ತಲುಪಿದ್ದೇ ಒಂದು ರೋಚಕವಾದ ಕತೆ. ಒಂದು ಶತಮಾನಕ್ಕೆ ಹಿಂದೆ ಗೋದಾವರಿ ನದಿ ಮುಖಜ ಭೂಮಿಯಲ್ಲಿ ನಿಯೋಗಿ ಬ್ರಾಹ್ಮಣ ಕುಟುಂಬದಲ್ಲಿ ಹುಟ್ಟಿದ ಈ ಹುಡುಗ ಸೀಮಿತ ಅವಕಾಶಗಳಿದ್ದ ಮನೆಯಿಂದ ಓಡಿಹೋದ. ವಾರಾಣಸಿಯಲ್ಲಿ ತೀರ್ಥಯಾತ್ರಿಕ ರಿಗೆ ಹಣ್ಣುಗಳನ್ನು ಮಾರಿ ಹಣ ಗಳಿಸಲು ಹೊರ ಟಿದ್ದವನನ್ನು ಮಧ್ಯೆ ತಾಯಿ ವೆಂಕಮ್ಮ ಕರೆತಂದು

ಮರಳಿ ಶಾಲೆಗೆ ಸೇರಿಸಿದಳು. ಅದಾಗಲೇ ಮೂರನೆ ಬಾರಿ ಮೆಟ್ರಿಕ್ಯುಲೇಶನ್‌ಗೆ ಕುಳಿತಿದ್ದ ಹುಡುಗನಿಗೆ ಮದ್ರಾಸಿನಲ್ಲಿ ಪರೀಕ್ಷೆ ಕಟ್ಟಲು ತಾಯಿ ವೆಂಕಮ್ಮ ತನ್ನ ಚಿನ್ನದ ಆಭರಣಗಳನ್ನು ಮಾರಿದಳು. ಅವರಿವರಿಂದ ಹಣದ ನೆರವನ್ನು ಪಡೆದು ಕಾಲೇಜು ವಿದ್ಯಾಭ್ಯಾಸದ ಖರ್ಚನ್ನು ಭರಿಸಿದಳು.

ಸುತ್ತಲಿನ ಸಂಗತಿಗಳಿಂದ ಸುಬ್ಬರಾವ್‌ಗೆ ಅದ್ವೈತ ತತ್ವಶಾಸ್ತ್ರದಲ್ಲಿದ್ದ ನಂಬಿಕೆ ಸಡಿಲವಾಯಿತು. ಜ್ಞಾನವೆಂಬುದು ಮನುಷ್ಯ ಮತ್ತು ದೇವರ ಸಂಬಂಧವನ್ನು ತಿಳಿಯಲು ಇರುವ ಸಾಧನವೆಂದು ಅವರು ಭಾವಿಸಿದ್ದರು. ಮನುಷ್ಯನ ಅನೇಕ ರೋಗಗಳನ್ನು ಗುಣಪಡಿಸುವ ಔಷಧಗಳನ್ನು ಕಂಡುಹಿಡಿಯುವುದೇ ಅವರ ಧ್ಯೇಯವಾಯಿತು. ಅವರು ಸ್ಪ್ರೂ ರೋಗದಿಂದ ಬಳಲುತ್ತಿದ್ದಾಗ ಇಂಗ್ಲಿಷ್ ಔಷಧಗಳ ಬಳಕೆ ನಿಷ್ಪ್ರಯೋಜಕವಾಯಿತು. ಆಯುರ್ವೇದ ಕಾಲೇಜಿನ ಪ್ರಾಂಶುಪಾಲ ಅಚಂತ ಲಕ್ಷ್ಮೀಪತಿಯವರು ಆಯುರ್ವೇದೀಯ ಔಷಧ ಪ್ರಯೋಗಿಸಿ ರಕ್ಷಿಸಿದರು. ಪದವೀಧರರಾದ ಸುಬ್ಬರಾವ್, ಬಳಿಕ ಅಲ್ಲೇ ನೆಲೆನಿಂತು ಕಾಲೇಜಿನ ಉಪಪ್ರಾಂಶುಪಾಲ ಮತ್ತು ಅದೇ ಕಾಲೇಜಿನ ಪತ್ರಿಕೆಯೊಂದರ ಸಂಪಾದಕರಾಗಿದ್ದಾಗ ಅನೇಕಾಲು ರೋಗಕ್ಕೆ ಆಯುರ್ವೇದೀಯ ಔಷಧಗಳ ಪ್ರಾಯೋಗಿಕ ಚಿಕಿತ್ಸೆ ನಡೆಸಿದರು. ಅಲ್ಲದೆ ಇದುವರೆಗಿನ ಎಲ್ಲ ಚಿಕಿತ್ಸಾ ವಿಧಾನಗಳನ್ನು ಪ್ರಯೋಗಿಸಿ ಗಿಡಮೂಲಿಕೆಗಳ ಪಟ್ಟಿಯನ್ನೊಳಗೊಂಡ ಒಂದು ಸಂಹಿತೆಯನ್ನೂ ತಯಾರಿಸಿಕೊಟ್ಟರು.

ವೈದ್ಯಕೀಯ ವೃತ್ತಿಯಲ್ಲಿ ಇಷ್ಟೆಲ್ಲ ಪ್ರಗತಿಯನ್ನು ಸಾಧಿಸುತ್ತಿರುವಾಗಲೂ ಅವರನ್ನು ನಿರಾಸೆ ಕಾಡುತ್ತಿತ್ತು. ಮನುಷ್ಯ ಪ್ರಯತ್ನದಿಂದ ಆಯುಷ್ಯವನ್ನು ಸ್ವಲ್ಪ ಹೆಚ್ಚಿಸಬಹುದು. ಆದರೆ, ಸಾವನ್ನು ಗೆಲ್ಲುವುದು ಸಾಧ್ಯವಿಲ್ಲ ಎಂಬ ಅಸಂತೃಪ್ತಿ ಅವರನ್ನು ಧರ್ಮದತ್ತ ಹಿಂತಿರುಗುವಂತೆ ಮಾಡಿತು. 'ಪ್ರಾರ್ಥನೆ ಮಾಡುವುದನ್ನು ಹೊರತುಪಡಿಸಿದ ಯಾವುದೇ ಕ್ರಿಯೆಗಳೂ ಪರಿಪೂರ್ಣವಲ್ಲ' ಎಂದು ಹೇಳುತ್ತಿದ್ದ ಮಹಾತ್ಮಾ ಗಾಂಧಿಯನ್ನು ಅನುಸರಿಸಲು ಸುಬ್ಬರಾವ್ ಪ್ರಯತ್ನಿಸುತ್ತಿದ್ದರು.

ಜಾಗತಿಕ ಯುದ್ಧದ ನಂತರದಲ್ಲಿ ಭಾರತೀಯರು ಅಮೆರಿಕದ ಪೌರತ್ವವನ್ನು ಪಡೆಯಲು ಅರ್ಹರೆಂದು ಪರಿಗಣಿಸಲಾಯಿತು. ಆದರೆ ಸುಬ್ಬರಾವ್ ಭಾರತದ ಪೌರತ್ವವನ್ನು ಸಂಪೂರ್ಣ ತ್ಯಜಿಸಲು ಇಚ್ಛಿಸಲಿಲ್ಲ. ಆ ಕಾರಣವಾಗಿ ಅವರು ಅಮೆರಿಕದ ಪೌರತ್ವವನ್ನು ಸ್ವೀಕರಿಸಲಿಲ್ಲ.

೧೯೯೫ರ ಜನವರಿ ೧೨ರಂದು ಸುಬ್ಬರಾವ್‌ರ ಜನ್ಮ ಶತಮಾನೋತ್ಸವ ಆರಂಭವಾಗಿದೆ. ಮಾನವನ ಆರೋಗ್ಯಕ್ಕಾಗಿ ಹೋರಾಡುವ ಅವಕಾಶಕ್ಕಾಗಿ ನಗರಗಳಲ್ಲಿ, ಹಳ್ಳಿಗಳಲ್ಲಿ ಕಾದಿರುವ ಅನೇಕ ಪ್ರತಿಭೆಗಳನ್ನು ಪ್ರೋತ್ಸಾಹಿಸುವ ಸಲುವಾಗಿ ವೈದ್ಯಕೀಯ ಸಂಶೋಧನ ಸಂಸ್ಥೆಯನ್ನು ಸ್ಥಾಪಿಸುವುದರ ಮೂಲಕ ಭಾರತವು ಈ ಸಂದರ್ಭವನ್ನು ಗುರುತಿಸಿದರೆ ಹೆಚ್ಚು ಸಾರ್ಥಕವಾದೀತು. ●

---

## ಭದ್ರತೆ !

ಪತ್ರಿಕೆಯೊಂದು ರಾಷ್ಟ್ರನಾಯಕರೊಬ್ಬರು ಮಾಡಿದ ಭಾಷಣದ ವರದಿಯನ್ನು ಹೀಗೆ ಅಚ್ಚು ಮಾಡಿತ್ತು:

"ನಿನ್ನೆ ರಾಷ್ಟ್ರದ ನಾಯಕರು ಒಂದು ಭಾರಿ ಸಾರ್ವಜನಿಕ ಸಭೆಯನ್ನುದ್ದೇಶಿಸಿ ಮಾತನಾಡಿದರು. ಜನರು ಭಾರೀ ಶಾಂತವಾಗಿದ್ದರು. ಅವರು ತಮ್ಮ ಉಸಿರನ್ನು ಎಷ್ಟು ಶಾಂತವಾಗಿ, ಸೂಕ್ಷ್ಮವಾಗಿ ಬಿಟ್ಟಿದ್ದರೆಂದರೆ... ಐವತ್ತು ಜನ ಸತ್ತೇ ಹೋಗಿದ್ದರು. ಅಷ್ಟು ಬಿಗಿಯಾಗಿತ್ತು ಭದ್ರತೆ !"

● ಸುರೇಶ ವರ್ಗಾ

# ನಮ್ಮ ಊರಿನ ಪುಣ್ಯಜೀವಿಗಳು

## ವಿದ್ಯಾರ್ಥಿ ವತ್ಸಲ

ವಿಜಾಪುರದ ಪಿ.ಡಿ.ಜೆ. ಹೈಸ್ಕೂಲಿನಲ್ಲಿ ನಾನು ಶಿಕ್ಷಕನಾಗಿ ಸೇರಿ ಐದಾರು ವರ್ಷ ಕಳೆದ ಮೇಲೆ ಕಲಬುರ್ಗಿಯಿಂದ ಬಂದ ಶ್ರೀ.ಸ. ಕುಲಕರ್ಣಿಯವರೆಂಬೊಬ್ಬರು ನನ್ನ ಸಹೋದ್ಯೋಗಿಯಾದರು. ನೋಡಲು ಸೀದಾಸಾದಾ ವ್ಯಕ್ತಿ. ಅವರಿವರ ಗೊಡವೆಗೆ ಹೋಗದ ಸ್ವಭಾವ.

ಕೆಲವೇ ದಿನಗಳಲ್ಲಿ ಶ್ರೀ.ಸ. ಕುಲಕರ್ಣಿಯವರು ವಿಜಾಪುರದವರೇ ಆಗಿಹೋದರು. ವಿದ್ಯಾರ್ಥಿಗಳಿಗಷ್ಟೇ ಅಲ್ಲ, ಅವರ ಪಾಲಕರಿಗೂ ಊರ ಜನಕ್ಕೂ ಅಕ್ಕರೆಯ, ಆದರದ ಮಾಸ್ತರಾದರು. ವಿಜಾಪುರದಿಂದ ನಿವೃತ್ತರಾಗಿ ಹೋಗುವವರೆಗೂ ವಿದ್ಯಾರ್ಥಿಗಳಲ್ಲಿ ಶಾಲೆ ಮತ್ತು ಸಮಾಜದ ಚಟುವಟಿಕೆಗಳ ಕುರಿತು ಹೊಸತೊಂದು ದೃಷ್ಟಿಕೋನವನ್ನು ಬೆಳೆಸಿದವರು ಕುಲಕರ್ಣಿ.

ಮಧ್ಯಾಹ್ನದ ಬಿಡುವಿನ ವೇಳೆಯಲ್ಲಿ ವಿದ್ಯಾರ್ಥಿಗಳನ್ನು ಕೂಡಿಸಿಕೊಂಡು 'ಗೀತಾಪಠಣ'ಕ್ಕೆ ಶುರುಮಾಡುವಲ್ಲಿಂದ ಹಿಡಿದು ಹಬ್ಬ-ಉತ್ಸವಗಳಲ್ಲಿ ಆಯಾ ಸಂದರ್ಭದ ಸಡಗರ-ಸೊಬಗು-ಶೋಭೆ ಹಾಗೂ ಮಹತ್ವವನ್ನು ಹೆಚ್ಚಿಸಲು ಅವರು ಕೈಗೊಂಡ ಕ್ರಮಗಳು ಇಂದಿಗೂ ಅನುಕರಣೀಯ.

ಮನೆಪಾಠ ಮಾಡಿಕೊಂಡು ಬರದ ವಿದ್ಯಾರ್ಥಿಗಳಿಗೆ ಕುಲಕರ್ಣಿಯವರು ಶಿಕ್ಷೆ ಕೊಡುತ್ತಿದ್ದ ರೀತಿಯೂ ವಿಶಿಷ್ಟವೆ. ಶಾಲೆಬಿಟ್ಟ ಮೇಲೆ ಅಂಥ ಹುಡುಗರನ್ನೆಲ್ಲ ಒಂದೆಡೆ ಕೂಡಿಹಾಕಿ, ಎಷ್ಟೊತ್ತಾದರೂ ಸರಿ, ತಾವೂ ಅವರೊಂದಿಗಿದ್ದು ಅವರ ಮನೆಪಾಠದ ಕೆಲಸ ಪೂರೈಸಿದ ಮೇಲೆಯೇ ಸಮಾಧಾನಗೊಳ್ಳುವರು. ಹಾಗೆಂದು ಅವರೆಂದೂ ವಿದ್ಯಾರ್ಥಿಗಳ ಮೇಲೆ ಹರಿಹಾಯಲಿಲ್ಲ. ಅವರ ಪ್ರೀತಿಯ ಮಾತುಗಳೇ ಎಲ್ಲ ಕೆಲಸವನ್ನೂ ಮಾಡಿಸಿಬಿಡಲು ಸಮರ್ಥವಾಗಿರುತ್ತಿದ್ದವು. ಶಾಲೆಯ ಕೊನೆಯ ಗಂಟೆಯಾದ ಕೂಡಲೇ ಒಮ್ಮೆಯೂ ಅವರು ಮನೆಗೆ ಹೊರಟದ್ದನ್ನು ನಾನು ಕಂಡಿಲ್ಲ. ಪ್ರತಿ ರವಿವಾರ ಎರಡು-ಮೂರು ವರ್ಗಗಳ ವಿದ್ಯಾರ್ಥಿಗಳನ್ನು ಒಂದೆಡೆ ಕಲೆಹಾಕಿ ಸೂರ್ಯನಮಸ್ಕಾರಗಳೇ ಮೊದಲಾದ ಯೋಗಾಭ್ಯಾಸ ಹಾಗೂ ಚರ್ಚೆ ಮುಂತಾದವುಗಳನ್ನು ಮಾಡಿಸುತ್ತಿದ್ದುದು ಅವರ ಇನ್ನೊಂದು ಕಾರ್ಯಕ್ರಮ. ಆಗೀಗ ಒಬ್ಬಿಬ್ಬ ಪಾಲಕರನ್ನೂ ಆಮಂತ್ರಿಸಿ ಅಂದಿನ ಅತಿಥಿಯನ್ನಾಗಿ ಮಾಡುತ್ತಿದ್ದರು. ಇದೊಂದು ರೀತಿಯಲ್ಲಿ ಪಾಲಕರಿಗೆ ತಮ್ಮ ಮಕ್ಕಳು ಹೇಗೆ ಬೆಳೆಯುತ್ತಿದ್ದಾರೆಂಬುದನ್ನು ಸ್ವತಃ ನೋಡಲು ಅವಕಾಶ. ಕ್ರಮೇಣ ಇದರಲ್ಲೇ ಮತ್ತೊಂದು ಅಂಶವನ್ನೂ ಸೇರಿಸಿದರು- 'ಸಹಭೋಜನ.' ವಿದ್ಯಾರ್ಥಿಗಳೆಲ್ಲ ಮನೆಯಿಂದ ಬುತ್ತಿಕಟ್ಟಿಕೊಂಡು ಬರುವ ಏರ್ಪಾಟು. ಆಗ ಶಾಲೆಯ ಇತರ ಶಿಕ್ಷಕರಲ್ಲಿ ತಲಾ ಒಂದಿಬ್ಬರನ್ನು ಆಮಂತ್ರಿಸತೊಡಗಿದರು. ಆದರೆ ಹಾಗೆ ಆಮಂತ್ರಿಸಲ್ಪಟ್ಟ ಶಿಕ್ಷಕರಿಗಾಗಿ ಬುತ್ತಿಯನ್ನು ಸ್ವತಃ ಕುಲಕರ್ಣಿಯವರೇ ತರುತ್ತಿದ್ದರು.

ಗಜಾನನೋತ್ಸವದ ಮೆರವಣಿಗೆಯಲ್ಲಿ ಸುಮ್ಮನೆ ಪಟಾಕಿ ಹಾರಿಸುತ್ತ, ಹರಟೆ ಹೊಡೆಯುತ್ತ ಸಾಗುವುದರ ಬದಲು ಅಲ್ಲಿ ಭಕ್ತಿಗೀತೆಗಳನ್ನು ಹಾಡಿಕೊಂಡು ಹೋದರೆ ಹೇಗೆಂಬ ವಿಚಾರ ಬಂದದ್ದೇ ತಡ ಮರುವರ್ಷದ ಉತ್ಸವದ ಹೊತ್ತಿಗೆ ಒಂದು ತಂಡವನ್ನೇ ಸಿದ್ಧಗೊಳಿಸಿದರು. ಇಂಪಾಗಿ, ಲಯಬದ್ಧವಾಗಿ, ಉಚ್ಚಾರಶುದ್ಧವಾಗಿ ಹಾಡಬಲ್ಲ ಹುಡುಗರ ಗುಂಪು ಅದು.

ಹೋಳಿ ಹುಣ್ಣಿಮೆಯಲ್ಲೂ ಅಷ್ಟೆ. ರಂಗಿನಲ್ಲಿ ಮುಳುಗಿ, ಅತಿರೇಕಕ್ಕೆಡೆ ಮಾಡಿಕೊಡುವಂಥ ಆಚರಣೆಯನ್ನು ಬಿಟ್ಟುಕೊಟ್ಟು ರಂಗಪಂಚಮಿಯ ರಂಗನ್ನು ಹಾಡು-ಕತೆ-ಸವಿಯೂಟಗಳೊಂದಿಗೆ ಆಚರಿಸಲು ಅವರು ಹುಡುಗರನ್ನು ಹುರಿದುಂಬಿಸಿದರು.

ಅವರು ನಿವೃತ್ತರಾದದ್ದು ಮಾರ್ಚ್ ತಿಂಗಳ

ಕೊನೆಗೆ. ಆದರೆ ಯಾವುದೇ ಪ್ರತಿಫಲಾಪೇಕ್ಷೆಯಿಲ್ಲದೆ ಆ ವರ್ಷದ ಉತ್ತರ ಪತ್ರಿಕೆಗಳನ್ನು ಪರಿಶೀಲಿಸುವಲ್ಲಿ, ಫಲಿತಾಂಶ ಪಟ್ಟಿಯನ್ನು ಸಿದ್ಧಗೊಳಿಸುವಲ್ಲಿ ಶ್ರಮಿಸಿದರು. ನಿವೃತ್ತರಾದ ಸಂದರ್ಭದಲ್ಲಿ ಅವರನ್ನು ವಿದ್ಯಾರ್ಥಿಗಳೆಲ್ಲ ಸೇರಿ ಸನ್ಮಾನಿಸಲು ನಿರ್ಧರಿಸಿದಾಗ ಕುಲಕರ್ಣಿಯವರು "ಓ.ಡಿ.ಡಿ. ಹೈಸ್ಕೂಲಿನ ಎಲ್ಲ ನಿವೃತ್ತ ಶಿಕ್ಷಕರೂ ಸನ್ಮಾನಗೊಳ್ಳುವುದಾದರೆ ಮಾತ್ರ ನಾನು ಸನ್ಮಾನ ಸ್ವೀಕರಿಸುವೆ," ಎಂದುಬಿಟ್ಟರು. ಆ ಸಮಾರಂಭ ಎಲ್ಲ ನಿವೃತ್ತ ಶಿಕ್ಷಕರ ಸಮ್ಮೇಳನದಂತಾದದ್ದು ನನಗಿನ್ನೂ ನೆನಪಿದೆ.

ನಿವೃತ್ತಿಯ ನಂತರ ಸೊಲ್ಲಾಪುರಕ್ಕೆ ತಮ್ಮ ಮಕ್ಕಳ ಬಳಿ ಹೋಗಿ ನೆಲೆಸಿದ ಶ್ರೀನಿವಾಸ ಸಖಾರಾಮ ಕುಲಕರ್ಣಿ ಮಾಸ್ತರರು ಅಲ್ಲಿಯೂ ಓಣಿಯ ಹುಡುಗರನ್ನು ಕೂಡಿಸಿಕೊಂಡು ಗೀತಾ ಪಠಣಗಳೇ ಮೊದಲಾದ ಚಟುವಟಿಕೆಗಳಲ್ಲಿ ತೊಡಗಿದರು. ಈಗ ೮೩ರ ವಯಸ್ಸಿನಲ್ಲೂ ಅವರು ಆ ಕಾರ್ಯಕದಲ್ಲಿ ಮುಂದುವರಿದಿದ್ದಾರೆಂಬುದು ಅಭಿಮಾನಾಸ್ಪದ ಸಂಗತಿ.

● ಆರ್.ಜಿ. ದೇಸಾಯಿ

---

# ದೊಡ್ಡ ದೇಸಾಯರು

ಧಾರವಾಡ ಜಿಲ್ಲೆ ಹಾನಗಲ್ಲ ತಾಲೂಕಿನ ಜನರಿಗೆಲ್ಲ "ದೊಡ್ಡ ದೇಸಾಯರು" ಎಂದೇ ಪ್ರಸಿದ್ಧರಾಗಿದ್ದವರು ಕಲ್ಲಾಪುರದ ದಿ. ಗುರುರಾವ ನರಸಿಂಗರಾವ ದೇಸಾಯಿ. ಅವರ ದೊಡ್ಡ ಗುಣಗಳನ್ನು ಕಂಡೋ ಏನೋ ಜನರೆಲ್ಲ ಇವರಿಗೆ "ದೊಡ್ಡ ದೇಸಾಯ್ರು" ಎಂದೇ ಕರೆಯುತ್ತಿದ್ದರು.

ಅಕ್ಕಿಆಲೂರಿನ 'ಶ್ರೀ ನರಸಿಂಗರಾವ ದೇಸಾಯಿ ಜ್ಯೂನಿಯರ್ ಕಾಲೇಜು' ಇವರ ದಾನದ ಫಲವಾಗಿ ತಲೆಯೆತ್ತಿದೆ. ಧಾರವಾಡದ ಜನತಾ ಶಿಕ್ಷಣ ಸಮಿತಿ, ಹುಬ್ಬಳ್ಳಿಯ ಮಹಿಳಾ ವಿದ್ಯಾಪೀಠಗಳಿಗೂ ದೇಸಾಯಿಯವರು ದೇಣಿಗೆ ಕೊಟ್ಟಿರುವರು. ಅವರೊಬ್ಬ ಹಿರಿಯ ಶಿಕ್ಷಣ ಪ್ರೇಮಿ. ಅನೇಕ ಶಿಕ್ಷಣ ಸಂಸ್ಥೆಗಳಿಗೆ ಲಕ್ಷಾಂತರ ರೂಪಾಯಿ ಬೆಲೆಬಾಳುವ ಭೂಮಿಯನ್ನು ದಾನವನ್ನಾಗಿ ನೀಡಿದ್ದಾರೆ.

ಹಾನಗಲ್ಲ ತಾಲೂಕಿನಲ್ಲಿ ದೇಸಾಯಿಯವರು ಆದರ್ಶ ವ್ಯಕ್ತಿಗಳಾಗಿದ್ದರು. ೧೯೪೭ರಿಂದ ೧೯೫೧ರವರೆಗೆ ಮುಂಬಯಿ ಪ್ರಾಂತದ ಕೌನ್ಸಿಲ್ ಸದಸ್ಯರಾಗಿ ಹಾಗೂ ೧೯೬೨ರಿಂದ ೧೯೬೭ರವರೆಗೆ ಕರ್ನಾಟಕ ವಿಧಾನಸಭೆಯ ಸದಸ್ಯರಾಗಿಯೂ ಅವರು ಸೇವೆ ಸಲ್ಲಿಸಿದ್ದಾರೆ.

ದೇಸಾಯರು ಹಾನಗಲ್ಲ ತಾಲೂಕಿನಲ್ಲಿ 'ಕಿರೀಟವಿಲ್ಲದ ದೊರೆ' ಆಗಿದ್ದರು ಎಂದು ಹೇಳಿದರೆ ತಪ್ಪಾಗಲಾರದು. ಅನೇಕ ಗ್ರಾಮೀಣ ಪ್ರತಿಭಾವಂತ ವಿದ್ಯಾರ್ಥಿಗಳನ್ನು ಧಾರವಾಡದ ತಮ್ಮ ಮನೆಯಲ್ಲಿಯೇ ಇಟ್ಟುಕೊಂಡು ಅವರಿಗೆಲ್ಲ ಮುಂದಿನ ವಿದ್ಯಾಭ್ಯಾಸಕ್ಕೆ ಅನುವು ಮಾಡಿಕೊಟ್ಟದ್ದು ಗ್ರಾಮೀಣ ವಿದ್ಯಾರ್ಥಿಗಳ ಬಗ್ಗೆ ಅವರಿಗಿರುವ ಅನುಕಂಪವನ್ನು ತೋರಿಸುತ್ತದೆ. ಅಸಹಾಯಕರಿಗೆ ಅವರೊಬ್ಬ ಆಸರೆಯಂತಿದ್ದರು. ಪ್ರಾಮಾಣಿಕತೆ, ನಿಷ್ಪಕ್ಷಪಾತ ಧೋರಣೆಯಿಂದಾಗಿ ಇಡೀ ಹಾನಗಲ್ಲ ತಾಲೂಕಿನಲ್ಲಿ ಅವರ ಮಾತಿಗೊಂದು ಬೆಲೆಯಿತ್ತು. ಅವರ ನಿರ್ಣಯವೇ ಕೊನೆಯದಾಗಿರುತ್ತಿತ್ತು. ನಿರಾಡಂಬರ ಜೀವನ ಸಾಗಿಸಿದ ದೇಸಾಯಿಯವರು ಶಿಕ್ಷಣ ಕ್ಷೇತ್ರದಲ್ಲಿ ಗೈದ ಸೇವೆ ಶ್ಲಾಘನೀಯ. ಅವರ ಔದಾರ್ಯ ಅಪೂರ್ವ.



● ನಿರ್ಮಲಾ ಕುಲಕರ್ಣಿ

# ಕ್ರಿಕೆಟ್ [illegible]

• ಅಮೋಘವರ್ಷ

## ಅಂದಿನ ಆಟ ! ಇಂದಿನ ನೋಟ !

ಪಂದ್ಯ: ವೆಸ್ಟ್ ಇಂಡೀಸ್-ಪಾಕಿಸ್ತಾನ
ಮೂರನೇ ಟೆಸ್ಟ್ ೧೯೫೭-೫೮
ಸ್ಥಳ: ಸಬೀನಾ ಪಾರ್ಕ್, ಕಿಂಗ್‌ಸ್ಟನ್
ದಿನಾಂಕ: ಫೆಬ್ರುವರಿ ೨೬, ೨೭, ೨೮,
ಮಾರ್ಚ್ ೧, ೩, ೪.

೧೯೫೭ಕ್ಕೂ ಮುಂಚೆ 'ಟೆಸ್ಟ್ ಕ್ರಿಕೆಟ್‌ನಲ್ಲಿ ಅತ್ಯಧಿಕ ವೈಯಕ್ತಿಕ ಮೊತ್ತವನ್ನು ಕೂಡಿಹಾಕಿದ ಬ್ಯಾಟ್ಸ್‌ಮನ್ ಯಾರು' ಎಂದು ಇಂಗ್ಲಂಡಿನ ಯಾವುದೇ ಶಾಲಾ ವಿದ್ಯಾರ್ಥಿಯನ್ನು ನೀವು ಕೇಳಿದ್ದರೂ 'ಲೆನ್ ಹಟನ್' ಎಂಬ ಉತ್ತರ ಗುಂಡಿನಂತೆ ಬರುತ್ತಿತ್ತು. ಯಾರ್ಕ್‌ಶೈರ್‌ನ ಪ್ರಾರಂಭಿಕ ಆಟಗಾರನಾಗಿದ್ದ ಲೆನ್ ಹಟನ್ ೧೯೩೮ರಲ್ಲಿ ಆಸ್ಟ್ರೇಲಿಯ ವಿರುದ್ಧ ೩೬೪ ರನ್ ಪೇರಿಸಿ ಇಂಗ್ಲೆಂಡಿನ ಕ್ರಿಕೆಟ್ ಪ್ರೇಮಿಗಳ ಹೃದಯದಲ್ಲಿ ಚಿರಸ್ಥಾನವನ್ನು ಪಡೆದುಕೊಂಡಿದ್ದ.

ನಂತರ ಏನಾಯಿತು ?

ಎಲ್ಲ ದಾಖಲೆ ಪುಸ್ತಕಗಳನ್ನು ಮತ್ತೊಮ್ಮೆ ತಿದ್ದಿ ಬರೆಯಬೇಕಾಯಿತು. ಬರ್ಬಾಡೋಸ್‌ನ ೨೧ರ ಹರೆಯದ ಆಲ್‌ರೌಂಡರ್ ಆಟಗಾರ ಗಾರ್‌ಫೀಲ್ಡ್ ಆಬ್ರನ್ ಸೋಬರ್ಸ್‌ನ (ಅವನ ಎತ್ತರ ಈ ಹೆಸರಿನಷ್ಟೇ ಉದ್ದ) ಕ್ರೀಡಾ ನೈಪುಣ್ಯ ಹಟನ್‌ನ ದಾಖಲೆಯನ್ನು ಬದಿಗೊತ್ತಿತು. ಆ ಮೂಲಕ ಸಬೀನಾ ಪಾರ್ಕ್ ಮೈದಾನದ ಹೆಸರು ಮತ್ತಷ್ಟು ಉಜ್ವಲಗೊಂಡಿತು.

### ಮೈದಾನದಲ್ಲಿ

ಭಾರತದೊಂದಿಗಿನ ಪಂದ್ಯದಲ್ಲಿ ಟೆಸ್ಟ್ ಜೀವ

ನಕ್ಕೆ ಪದಾರ್ಪಣ ಮಾಡಿದ್ದ ವ್ಯಾಪಕ ಅನುಭವ ಶಾಲಿ ಆಟಗಾರ, ಪಾಕಿಸ್ತಾನ ತಂಡದ ನಾಯಕ ಅಬ್ದುಲ್ ಕರ್ದಾರ್ ಟಾಸ್ ಗೆದ್ದು ಬ್ಯಾಟಿಂಗನ್ನೇ ಬಯಸಿದ.

ವೆಸ್ಟ್ ಇಂಡೀಸ್‌ನ ವೇಗದ ಬೌಲರ್ ರಾಯ್ ಗಿಲ್‌ಕ್ರಿಸ್ಟ್ ಎಸೆದ ಚೆಂಡನ್ನು ಪಾಕಿಸ್ತಾನದ ಇನ್ನಿಂಗ್ಸ್ ಪ್ರಾರಂಭಿಸಿದ ಹನೀಫ್ ಮಹಮ್ಮದ್ ಎದುರಿಸಲೆತ್ನಿಸಿ ನಾಯಕ ಹಾಗೂ ವಿಕೆಟ್‌ಕೀಪರ್ ಗೆರ್ರಿ ಅಲೆಕ್ಸಾಂಡರ್‌ಗೆ ಕ್ಯಾಚ್ ನೀಡುವುದರೊಂದಿಗೆ ಮೊದಲ ಬಲಿಪಶುವಾದ. ಆಗ ಅವನು ಗಳಿಸಿದ್ದು ಕೇವಲ ಮೂರೇ ಓಟ. ಹನೀಫ್ ಪೆವಿಲಿಯನ್ ಕಡೆ ನಡೆಯಲುಪಕ್ರಮಿಸಿದಂತೆಯೇ ವಿಂಡೀಸ್ ಆಟಗಾರರು ಮತ್ತು ಪ್ರೇಕ್ಷಕರು ಕೇಕೆ ಹಾಕಿದರು. ಮೊದಲ ಟೆಸ್ಟ್‌ನಲ್ಲಿ ಒಂದೇ ಕೈಯಿಂದ ಆಡಿ ಗತ್ತುಗಾರಿಕೆ ಪ್ರದರ್ಶಿಸಿದ್ದ ಹನೀಫ್, ಪಾಕಿಸ್ತಾನ ಫಾಲೋಆನ್ ಸಂಕಟದಲ್ಲಿದ್ದಾಗ ಪಂದ್ಯವನ್ನು ರಕ್ಷಿಸಿದ್ದ ಎರಡನೆ ಇನ್ನಿಂಗ್ಸ್‌ನಲ್ಲಿ ಹಟನ್‌ನ ದಾಖಲೆ (೩೬೪)ಯನ್ನು ಮುರಿಯುವ ಲಕ್ಷಣಗಳನ್ನು ತೋರ್ಪಡಿಸಿ ವೈಯಕ್ತಿಕ ಸ್ಕೋರು ೩೩೭ ಆಗಿದ್ದಾಗ ಅಲೆಕ್ಸಾಂಡರ್ ಹಿಡಿದ ಕ್ಯಾಚಿನಿಂದಾಗಿ ಅವಕಾಶ ವಂಚಿತನಾಗಿದ್ದ. ಅಂಥ ಆಟಗಾರ ಔಟಾದಾಗ ವಿರೋಧಿ ಪಂಗಡದವರಿಗೆ ಸಂತೋಷವಾಗದಿರುತ್ತದೆಯೆ ?

ಹನೀಫ್‌ನೊಂದಿಗೆ ಪಾಲುದಾರನಾಗಿ ಕ್ರೀಸ್ ಬಳಿ ಬಂದಿದ್ದ ಇಮ್ತಿಯಾಜ್ ಅಹ್ಮದ್ ೧೨೨ ಓಟ ಗಳಿಸಿ ಪಾಕಿಸ್ತಾನದ ಇನ್ನಿಂಗ್ಸ್ ಮೊತ್ತ ಗೌರವಯುತ ೩೨೮. ತಲುಪಲು ನೆರವಾದ. ಆತನನ್ನು ಬಿಟ್ಟರೆ ವಾಲಿಸ್ ಮಥಾಯೀಸ್‌ನದೇ ಅಧಿಕ ಸ್ಕೋರು (೭೭).

ವೆಸ್ಟ್ ಇಂಡೀಸ್ ತಂಡದಲ್ಲಿ ಮಿಂಚಿದ ಯಶಸ್ವೀ ಬೌಲರ್ ಎಂದರೆ ಎರಿಕ್ ಅಟ್ಕಿನ್ಸನ್. ಪಂದ್ಯದ ಎರಡನೆ ದಿನ ಆತ ೨೧ ಓವರುಗಳಲ್ಲಿ ೪೨ ಓಟ ನೀಡಿ ಐದು ವಿಕೆಟ್‌ಗಳನ್ನು ಉರುಳಿಸಿದ.

ಬೌಲ್ ಮಾಡುವಾಗ, ಚೆಂಡನ್ನು ಹಿಂಬಾಲಿಸುವಾಗ ಮುಖ ಕಿವುಚಿಕೊಳ್ಳುತ್ತಿದ್ದ ಆಟಗಾರರ ಸಂಖ್ಯೆ ಪಾಕ್ ತಂಡದಲ್ಲಿ ಹೆಚ್ಚಾಗಿತ್ತು. ನಾಯಕ ಕರ್ದಾರ್ ಮೊದಲ ಓವರ್‌ನಲ್ಲಿ ತೊಡೆಯನ್ನು ಉಳುಕಿಸಿಕೊಂಡಿದ್ದ. ಹದಿನಾರು ವರ್ಷದ, ಎಡಗೈನ ನಿಧಾನಿ ಬೌಲರ್ ನಸೀಮ್-ಉಲ್-ಘನಿ ಕ್ಷೇತ್ರ ರಕ್ಷಣೆಯಲ್ಲಿ ಹೆಬ್ಬೆಟ್ಟನ್ನು ಮುರಿದುಕೊಂಡಿದ್ದ. ಆದ್ದರಿಂದ ವೆಸ್ಟ್ ಇಂಡೀಜಿಗರಿಗೆ ಬೌಲಿಂಗ್ ರುಚಿ ತೋರಿಸಲು ಫಜಲ್ ಮಹಮೂದ್ ಮತ್ತು ಖಾನ್ ಮೊಹಮ್ಮದ್ ಅವರು ಮಾತ್ರ ದೈಹಿಕವಾಗಿ ಶಕ್ತರಾಗಿದ್ದರು.

# ಪಾಕಿಸ್ತಾನದ ಗಾಯಗಳಿಗೆ ಉಪ್ಪು ಸವರಿದ ಸೋಬರ್ಸ್

ವೆಸ್ಟ್ ಇಂಡೀಸ್ ೮೭ ಓಟಗಳಿಗೆ ಮೊದಲ ವಿಕೆಟ್ ಕಳೆದುಕೊಂಡಾಗ ಕೊನ್ರಾಡ್ ಹಂಟ್ ಮತ್ತು ಗಾರ್‌ಫೀಲ್ಡ್ ಸೋಬರ್ಸ್ ಜೊತೆಗೂಡಿದರು. ಆ ಜೊತೆ ಬೇರ್ಪಟ್ಟಾಗ ಸ್ಕೋರ್ ಬೋರ್ಡ್ ೫೩೩ನ್ನು ತೋರಿಸುತ್ತಿತ್ತು. ಅವರ ವಿಕೆಟ್ ಜೊತೆಯಾಟದ ೪೪೬ ಓಟಗಳು ಯಾವುದೇ ಟೆಸ್ಟ್ ಪಂದ್ಯದ ಎರಡನೆ ಅತ್ಯಧಿಕ ಸ್ಕೋರು ಆಗಿದೆ. ಟೆಸ್ಟ್ ಕ್ರಿಕೆಟ್‌ನಲ್ಲಿ ಇಡೀ ದಿನ ಆಡಿದ ಶ್ರೇಯವೂ ಅವರ ಹೆಸರಿನಲ್ಲಿದೆ.

ಹಂಟ್ ಮತ್ತು ಸೋಬರ್ಸ್‌ರ ಜೊತೆಯನ್ನು ಬೇರ್ಪಡಿಸಲು ಪಾಕಿಸ್ತಾನ ಒಂಬತ್ತು ಬೌಲರ್‌ಗಳ

ಮೂಲಕ ಯತ್ನಿಸಿ ತಕ್ಕ ಶಾಸ್ತಿ ಅನುಭವಿಸಿತು. ೨೬೦ ಓಟ ಗಳಿಸಿದ್ದ ಹಂಟ್ ಇನ್ನೊಂದು ಓಟ ಕದಿಯಲು ಹೋಗಿ ಔಟಾಗಿರದಿದ್ದರೆ ಪಾಕಿಸ್ತಾನ ಇನ್ನೂ ಎಷ್ಟು ತಿಣುಕಾಡಬೇಕಾಗುತ್ತಿತ್ತೋ! ಫಜಲ್ ಮಹಮೂದ್ ಮತ್ತು ಖಾನ್ ಮೊಹಮ್ಮದ್ ಅವರ ಎಸೆತಗಳನ್ನು ವಿಂಡೀಸ್ ದಾಂಡಿಗರು ಮೈದಾನದ ತುಂಬೆಲ್ಲ ಸೂರೆಗೈದರು. ಫಜಲ್ ೮೫.೨ ಓವರುಗಳಲ್ಲಿ ೨೪೭ ಓಟ ನೀಡಿ ಎರಡು ವಿಕೆಟ್ ಬೀಳಿಸುವಷ್ಟರಲ್ಲಿ ಸುಸ್ತಾಗಿಬಿಟ್ಟ. ಖಾನ್ ೫೪ ಓವರ್ ಬೌಲ್ ಮಾಡಿ ೨೫೯ರ ಮೊತ್ತಕ್ಕೆ ಕಾರಣನಾದರೂ ಯಾವುದೇ ಪ್ರತಿಫಲ ದೊರೆಯಲಿಲ್ಲ.

ಎವರ್ಟನ್ ವೀಕ್ಸ್ ಮತ್ತು ಕ್ಲೈಡ್ ವಾಲ್ಕಾಟ್ ಅವರ ಬೆಂಬಲದೊಂದಿಗೆ ಮನಮೋಹಕ ಆಟ ಮುಂದುವರೆಸಿದ ಸೋಬರ್ಸ್, ಕ್ಷೇತ್ರ ರಕ್ಷಕರನ್ನು ಮೈದಾನದ ಮೂಲೆಮೂಲೆಗೂ ಅಟ್ಟಾಡಿಸಿದ. ಅವನ ಎಡಗೈ ಹೊಡೆತದ ಶೈಲಿ ಸುಧಾರಿಸಿದ್ದು ಎಲ್ಲರ ಲಕ್ಷ್ಯಕ್ಕೂ ಬರುವಂತಿತ್ತು.

ಸೋಬರ್ಸ್ ಕ್ರೀಸ್ ಬಳಿ ಬಂದು ನಿಂತು ಹತ್ತು ತಾಸು ಹದಿನಾಲ್ಕು ನಿಮಿಷ ಆಟವಾಡಿದಾಗ ಆತ ಇಪ್ಪತ್ತು ವರ್ಷಗಳ ಹಿಂದೆ ಲೆನ್ ಹಟನ್ ಮಾಡಿದ್ದ ದಾಖಲೆಯನ್ನು ಸರಿಗಟ್ಟಿದ. ದಾಖಲೆಯ ೩೬೪ ಓಟ ಗಳಿಸಲು ಹಟನ್ ತೆಗೆದುಕೊಂಡಿದ್ದ ಸಮಯಕ್ಕಿಂತ ಮೂರು ತಾಸು ಮೂರು ನಿಮಿಷ ಮೊದಲೇ ಸೋಬರ್ಸ್ ಅದನ್ನು ತಲುಪಿದ.

ಸೋಬರ್ಸ್ ಮತ್ತೊಂದು ಓಟ ಮಾಡಿದಾಗ ಪ್ರೇಕ್ಷಕರ ಗ್ಯಾಲರಿ ಹರ್ಷದ ಕೂಗಿನೊಂದಿಗೆ ತುಂಬಿ ಹೋಯಿತು. ಸೋಬರ್ಸ್ ಹೊಸ ದಾಖಲೆ ಮಾಡಿದ್ದು ಅವರ ಸಂತೋಷಕ್ಕೆ ಒಂದು ಕಾರಣವಾದರೆ, ತಂಡದ ಮೊತ್ತ ೭೯೦ ಆಗಿದ್ದು ಇನ್ನೊಂದು ಕಾರಣ. ಟೆಸ್ಟ್ ಕ್ರಿಕೆಟ್‌ನಲ್ಲಿ ಮೂರನೆ ಅತ್ಯಧಿಕ ಸ್ಕೋರು ಮಾಡಿದ ಹೆಮ್ಮೆಯ ಪುಲಕವನ್ನು ವಿಂಡೀಸ್ ಆಟಗಾರರು ಅನುಭವಿಸಿದರು. ನಾಯಕ ಅಲೆಕ್ಸಾಂಡರ್ ಡಿಕ್ಲೇರ್ ಘೋಷಿಸಿಕೊಂಡಾಗ ಕ್ರಿಕೆಟ್ ಅಭಿಮಾನಿಗಳು ಮೈದಾನಕ್ಕೆ ನುಗ್ಗಿ ಸೋಬರ್ಸ್‌ನನ್ನು ಟ್ರೋಫಿಯಂತೆ ಎತ್ತಿ ಕುಣಿ'ಕುಣಿ'ದಾಡಿದರು. ಇಂಥ ಗಲಾಟೆಯಲ್ಲಿ ಅಧ್ವಾನವಾದ ಮೈದಾನವನ್ನು ದುರಸ್ತಿ ಮಾಡಲು ಒಂದು ತಾಸು ಹಿಡಿಯಿತು. ಈ ಮೊದಲು ಎಷ್ಟೋ ಪಂದ್ಯಗಳಲ್ಲಿ ಪಾಲ್ಗೊಂಡಿದ್ದರೂ ಸೋಬರ್ಸ್ ಒಂದು ಶತಕವನ್ನೂ ಹೊಡೆದಿರಲಿಲ್ಲ ಎಂಬುದು ಇಲ್ಲಿ ಗಮನಾರ್ಹ.

ಪಂದ್ಯವನ್ನು ಉಳಿಸಿಕೊಳ್ಳಬೇಕಾದರೆ ಮೊದಲ ಇನ್ನಿಂಗ್ಸ್‌ನ ಬಾಕಿ ೪೬೨ ಓಟಗಳನ್ನು ಪೂರೈಸಬೇಕಾಗಿದ್ದ ಪಾಕಿಸ್ತಾನ ಇನ್ನಿಲ್ಲದಂಥ ಒತ್ತಡಕ್ಕೆ ಸಿಲುಕಿಕೊಂಡಿತು. ಗಾಯಗೊಂಡಿದ್ದ ಮಹಮೂದ್ ಹುಸೇನ್ ಮತ್ತು ನಸೀಮ್-ಉಲ್-ಘನಿ ಅವರು ಆಟದಲ್ಲಿ ಪಾಲ್ಗೊಳ್ಳಲು ನಿರಾಕರಿಸಿದಾಗ ಪಾಕ್ ಸ್ಥಿತಿ ಮತ್ತಷ್ಟು ದಿಗಡಾಯಿಸಿತಲ್ಲದೆ, ವಿಂಡೀಸ್ ಮೊತ್ತ ಅವರಿಗೆ ಮತ್ತಷ್ಟು ದೊಡ್ಡದಾಗಿ ಕಾಣತೊಡಗಿತು.

ಮೊದಲ ಇನ್ನಿಂಗ್ಸ್‌ನಲ್ಲಿ ಶತಕ (೧೨೨) ಬಾರಿಸಿ ಪಾಕಿಸ್ತಾನದ ಪಾಲಿಗೆ ಹೀರೋ ಆಗಿದ್ದ ಇಮ್ತಿಯಾಜ್ ಅಹ್ಮದ್ ಒಂದೂ ಓಟ ಗಳಿಸದೆ ಔಟಾಗಿ ತಂಡದಲ್ಲಿ ಗಲಿಬಿಲಿ ಮೂಡಿಸಿದ. ಆಗ ಇಡೀ ತಂಡದ ಜವಾಬ್ದಾರಿ ಹನೀಫ್ ಮೊಹಮ್ಮದ್ (ಒಂದು ವರ್ಷದ ಬಳಿಕ ಕರಾಚಿ ಪರವಾಗಿ ಆಡಿ ೪೯೯ ಮೊತ್ತ ಪೇರಿಸುವುದರೊಂದಿಗೆ ವಿಶ್ವದಾಖಲೆ ಮಾಡಿದ) ಗಿಲ್‌ಕ್ರಿಸ್ಟ್ ಎಸೆದ ಚೆಂಡನ್ನು ತಪ್ಪಾಗಿ ಅರ್ಥೈಸಿಕೊಂಡು ಔಟಾದಾಗ ಆತನ ಹೆಸರಿನಲ್ಲಿ ೧೩ ಓಟಗಳು ಮಾತ್ರ ಜಮಾ ಆಗಿದ್ದವು. ಪ್ರಾರಂಭಿಕ ಆಟಗಾರರಿಬ್ಬರೂ ೨೦ಕ್ಕೆ ವಿಕೆಟ್ ಒಪ್ಪಿಸಿದಾಗ ಯಾರು ಗೆಲ್ಲುತ್ತಾರೆಂಬ ಪ್ರಶ್ನೆಯೇ ಇರಲಿಲ್ಲ. ಆದರೆ ಯಾವಾಗ ಗೆಲುವು ಎಂಬುದು ನಿರ್ಧಾರವಾಗಬೇಕಿತ್ತು.

ಐದನೆ ವಿಕೆಟ್‌ಗೆ ಜೊತೆಗೂಡಿದ ನಾಯಕ ಕರ್ದಾರ್ (೫೭) ಮತ್ತು ವಾಝಿರ್ ಮೊಹಮ್ಮದ್ (ಖ್ಯಾತ ಮೊಹಮ್ಮದ್ ಸೋದರರಲ್ಲಿ ಹಿರಿಯವ) ಅವರು ೧೦೬ ಓಟ ಗಳಿಸಿ ಪಾಕಿಸ್ತಾನ ಪಾಳೆಯದಲ್ಲಿ ತುಸು ತಂಗಾಳಿ ತಂದರು. ಮನಮೋಹಕ ಹೊಡೆತಗಳ ಮೂಲಕ- ಅಂಥ ಒತ್ತಡದ ಸಂದರ್ಭದಲ್ಲೂ- ವೈಯಕ್ತಿಕವಾಗಿ ೧೦೬ ರನ್ ಮಾಡಿದ ವಾಝಿರ್ ಎರಿಕ್ ಅಟ್ಕಿನ್ಸನ್‌ಗೆ ಬಲಿಯಾದಾಗ ಪಾಕಿಸ್ತಾನದ ಆಟ ಹೆಚ್ಚು ಕಡಿಮೆ ಮುಗಿದೇ ಹೋಯಿತು. ಕೊನೆಯ ಮೂರು ಹುದ್ದರಿಗಳು ಕೇವಲ ಮೂರು ಓಟಕ್ಕೆ ಬಿದ್ದವು. ಕೊನೆಯ ದಿನದ

ಆಟ ೪೦ ನಿಮಿಷಗಳಲ್ಲಿ ೨೮೮ರ ಒಟ್ಟು ಮೊತ್ತ ದೊಂದಿಗೆ ಮುಕ್ತಾಯವಾದಾಗ ವೆಸ್ಟ್‌ಇಂಡೀಸ್ ಒಂದು ಇನ್ನಿಂಗ್ಸ್ ಹಾಗೂ ೧೭೪ ಓಟಗಳೊಂದಿಗೆ ಪಾಕಿಸ್ತಾನವನ್ನು ಪರಾಭವಗೊಳಿಸಿತ್ತು.

ಎಡಗೈನ ಒಂದು ಬೆರಳನ್ನು ಮುರಿದುಕೊಂಡಿದ್ದರೂ ಚಿಕಿತ್ಸೆಯನ್ನು ನಿರಾಕರಿಸಿ ಎಡಗೈನಿಂದಲೇ ೩೭ ಓವರ್ ಬೌಲ್ ಮಾಡಿ ೭೪ ರನ್ ಗಳಿಸಿದ ಅಪರೂಪದ ಎಡಗೈ ಬ್ಯಾಟ್ಸ್‌ಮನ್ ಹಾಗೂ ನಾಯಕ ಕರ್ದಾರ್‌ನ ಶ್ರಮ ವ್ಯರ್ಥವಾಯಿತು.

"ನಾನು ೩೦೦ ಓಟಗಳ ಗಡಿ ದಾಟುವವರೆಗೆ ಲೆನ್ ಹಟನ್ ಹೆಸರಿನಲ್ಲಿ ಒಂದು ದಾಖಲೆ ಇದೆ ಎಂಬುದೇ ನನಗೆ ಗೊತ್ತಿರಲಿಲ್ಲ. ಇದುವರೆಗೆ ನಾನು ಒಂದು ಸೆಂಚುರಿಯನ್ನೂ ಹೊಡೆದಿಲ್ಲ ಎಂಬುದು ನಿಮಗೆ ಗೊತ್ತೇ ಇದೆ. ಅಂದಮೇಲೆ ಹಟನ್‌ನ ಮಹಾ ಮೊತ್ತದ ಕಲ್ಪನೆ ನನ್ನ ಮನಸ್ಸಿನಲ್ಲಿ ಹೇಗೆ ಪ್ರವೇಶಿಸೀತು? ದಾಖಲೆ ಕಣ್ಣಳತೆಯಲ್ಲಿದೆ ಎಂದಾಗ ತಂಡದ ನಾಯಕ ಗೆರ್ರಿ ಅಲೆಕ್ಸಾಂಡರ್ ಮತ್ತು ಸಹ ಆಟಗಾರರು ನನ್ನನ್ನು ಎಂದಿಲ್ಲದ ರೀತಿಯಲ್ಲಿ ಪ್ರೋತ್ಸಾಹಿಸಿದರು. ಓಟಗಳನ್ನು ಎಣಿಸುವುದನ್ನು ಇತರರಿಗೆ ಬಿಟ್ಟುಕೊಟ್ಟು ನನ್ನೊಳಗೆ ನಾನೇ ಖುಷಿಪಟ್ಟೆ. ಪಾಕಿಸ್ತಾನ ತಂಡದ ದುರ್ಬಲ ದಾಳಿಯಿಂದಾಗಿಯೇ ಅದೃಷ್ಟವಂತನಾದೆ ಎಂಬುದನ್ನು ಎಲ್ಲರಿಗಿಂತ ಮೊದಲು ನಾನು ಒಪ್ಪಿಕೊಳ್ಳುವೆ. ನನ್ನ ಯಶಸ್ಸನ್ನು ಕೊನ್ರಾಡ್ ಹಂಟ್ ಜೊತೆ ಹಂಚಿಕೊಳ್ಳಬಯಸುತ್ತೇನೆ. ಅವನು ಅತ್ಯಮೋಘವಾಗಿ ಬ್ಯಾಟ್ ಮಾಡಿದ. ರನ್‌ಔಟ್ ಆಗಿರದಿದ್ದರೆ ದಾಖಲೆಯನ್ನು ಆತನೇ ಮುರಿಯುತ್ತಿದ್ದ. ಯಾಕೆಂದರೆ ಆತನ ವೇಗ ಎಕ್ಸ್‌ಪ್ರೆಸ್ ರೈಲಿನಂತಿತ್ತು," ಇಷ್ಟು ಹೇಳುವಾಗ ಸೋಬರ್ಸ್ ಸಂತಸದಿಂದ ತಡಬಡಿಸಿದ.

"ಸೆಂಚುರಿ ಮೇಲೆ ಸೆಂಚುರಿ ಬಾರಿಸುವ ತಾಕತ್ತು, ಕೌಶಲ ಗ್ಯಾರಿಯಲ್ಲಿ ಯಾವಾಗಲೂ ಇತ್ತು. ಆದರೆ ಆತನ ಹರೆಯದ ದಿನಗಳಲ್ಲಿ ಅವನಿಗಿದ್ದ ಒಂದೇ ಒಂದು ಕೊರತೆ ಎಂದರೆ- ಏಕಾಗ್ರತೆಯದು. ಅದು ಈ ಪಂದ್ಯದಲ್ಲಿ ಅವನಿಗೆ ಒಲಿಯಿತು," ಎನ್ನುವಾಗ ಗೆರ್ರಿ ಅಲೆಕ್ಸಾಂಡರ್‌ಗೆ ಸೋಬರ್ಸ್‌ನಷ್ಟೇ ಖುಷಿಯಾಗಿತ್ತು.

"ಸೋಬರ್ಸ್ ಮತ್ತು ಹಂಟ್‌ರನ್ನು ನಿರ್ಬಂಧಿಸಬಲ್ಲಂಥ ಬೌಲಿಂಗ್ ಶಕ್ತಿಯನ್ನು ನಾವು ಹೊಂದಿರಲಿಲ್ಲ. ಇದ್ದವರಲ್ಲಿ ನನ್ನನ್ನು ಸೇರಿ- ಗಾಯಾಳುಗಳೇ ಹೆಚ್ಚು. ನಮಗೆ ಸೋಲುಂಟಾದರೂ ನಾನು ಸೋಬರ್ಸ್‌ನನ್ನು ಅಭಿನಂದಿಸಲೇಬೇಕು. ಆತನ ಬ್ಯಾಟಿಂಗ್ ಅಮೋಘ," ಎಂದು ನುಡಿದ ಪಾಕ್ ನಾಯಕ ಅಬ್ದುಲ್ ಕರ್ದಾರ್.

---

## ಅಪೂರ್ವ ಬದಲಿ ಹೃದಯ

ಮಗಳ ಹೃದಯವನ್ನೇ ಬದಲಿಯಾಗಿ ತಂದೆಗೆ ಅಳವಡಿಸಿದ್ದ ಅಪೂರ್ವ ಸುದ್ದಿ ಮನಕಲಕುವಂತಹದ್ದು. ರಾಯಲ್ ಓಕ್‌ನ ಬರ್ಕಲಿ ಎಂಬಲ್ಲಿ ಸೂಪರ್ ಎಂಬ ವ್ಯಕ್ತಿ ಆಗಾಗ ಹೃದಯನೋವಿನಿಂದ ಸಂಕಟಪಡುತ್ತಿದ್ದನಂತೆ. ಬದಲಿ ಹೃದಯವನ್ನು ಅಳವಡಿಸಿದರೆ ಮಾತ್ರ ಆತ ಬದುಕಬಲ್ಲ ಎಂದು ಡಾಕ್ಟರ್ ತಿಳಿಸಿದರು.

ಅದೊಂದು ದಿನ ಆತನ ೨೨ ವರ್ಷದ ಮಗಳು ಅಪಘಾತದಲ್ಲಿ ಸತ್ತಳು. ಕೂಡಲೆ ಆಕೆಯ ಹೃದಯವನ್ನು ತಂದು ತಂದೆಗೆ ಜೋಡಿಸಲಾಯಿತು. "ನನ್ನ ಮಗಳು ಸತ್ತ ದುಃಖ ಒಂದು ಕಡೆ ಇದೆಯಾದರೂ, ಅವಳು ನನ್ನೊಂದಿಗಿದ್ದಾಳೆ, ಅವಳ ಹೃದಯ ನನ್ನಲ್ಲಿದೆ ಎಂಬುದೇ ಸಂತೋಷದ ವಿಚಾರವಾಗಿದೆ," ಎನ್ನುತ್ತಾನಂತೆ ತಂದೆ ಸೂಪರ್. "ಒಂದೇ ಮನೆತನದವರಿಗೆ ಅದರಲ್ಲೂ ತಂದೆಗೆ ಮಗಳ ಹೃದಯವನ್ನು ಬದಲಿಯಾಗಿ ಅಳವಡಿಸಿದ್ದು ಪ್ರಪಂಚದಲ್ಲೇ ಇದು ಪ್ರಥಮ," ಎನ್ನುತ್ತಾರೆ ಡಾಕ್ಟರ್. "ನನ್ನ ತಂಗಿ ಸ್ವರ್ಗದಲ್ಲಿ ಸಂತೋಷದಿಂದಿರುತ್ತಾಳೆ. ಅವಳನ್ನು ನನ್ನ ತಂದೆಯೊಂದಿಗೆ ಕಾಣುತ್ತಿದ್ದೇನೆ," ಎನ್ನುತ್ತಾನಂತೆ ಆಕೆಯ ಅಣ್ಣ.

ಸಂಗ್ರಹ: **ನಾರಾಯಣ ರೈ.ಕುಕ್ಕುವಳ್ಳಿ**

# ತಾರಾಲಯ ಎಂದರೇನು?

• ಶೈಲಜಾ

**ಆಕಾಶದ ವಿಸ್ಮಯಗಳನ್ನು ತಾರಾಲಯವು ಒಳಾಂಗಣಕ್ಕೆ ತರಬಲ್ಲದು. ಹೊರಗೆ ಮಳೆ ಇರಲಿ; ಬಿಸಿಲಿರಲಿ; ತಾರಾಲಯದ ಬಾನಿನಲ್ಲಿ ಮಾತ್ರ ಎಂದೆಂದೂ ತಾರೆಗಳು ಮಿನುಗುತ್ತಲೇ ಇರುತ್ತವೆ.**

"ಧೂಮಕೇತು ಗ್ರಹವನ್ನು ಅಪ್ಪಳಿಸುತ್ತಿದೆ..."

"ಸೂರ್ಯ ಧನು ರಾಶಿಯಲ್ಲಿದ್ದಾನೆ..."

"ದೆಹಲಿಯಿಂದ ೧೯೮೭ರ ಸೂಪರ್‌ನೋವಾವನ್ನು ನೋಡಲು ಸಾಧ್ಯವಾಗಲಿಲ್ಲ...."

ಇಂಥ ಅನೇಕ ವಿಷಯಗಳನ್ನು ಕೇಳಿದಾಗ ಪ್ರತಿಯೊಬ್ಬನಲ್ಲೂ ಅಡಗಿರುವ ಕುತೂಹಲ ಪ್ರವೃತ್ತಿ ಜಾಗೃತವಾಗುತ್ತದೆ. ಅವುಗಳನ್ನು ಅರ್ಥ ಮಾಡಿಕೊಳ್ಳಬೇಕೆಂಬ ಉತ್ಸಾಹ ಮೂಡುತ್ತದೆ.

ನೂರಾರು ಶತಮಾನಗಳಷ್ಟು ಹಿಂದೆಯೇ ಮಾನವನ ಬುದ್ಧಿಮತ್ತೆಗೆ ಸವಾಲೆಸೆದ ಖಗೋಳ, ತನ್ನ ರಹಸ್ಯವನ್ನು ನಿಧಾನವಾಗಿ ಬಿಟ್ಟುಕೊಡುತ್ತಿದೆ. ಭೂಮಿ ಸುತ್ತುತ್ತಿದೆ ಎಂಬ ಅಂಶ ಮನದಟ್ಟಾಗಲು ಅನೇಕ ಶತಮಾನಗಳ ಜಿಜ್ಞಾಸೆ ನಡೆಯಿತಲ್ಲವೆ? ಈ ಮೊದಲನೆಯ ಅಡಚಣೆ ದಾಟಿದೊಡನೆಯೇ ಸೌರಮಂಡಲಗಳ ಕಾಯಗಳ ಚಲನೆ, ನಕ್ಷತ್ರಗಳ ದೈನಂದಿನ ಚಲನೆಯ ಒಗಟು ಪರಿಹಾರವಾಯಿತು.

ಸೌರಮಂಡಲದ ಸಣ್ಣ ಮಾದರಿಯೊಂದನ್ನು ರಚಿಸಿ, ಖಗೋಳವನ್ನು ಸ್ಫುಟವಾಗಿ ವಿವರಿಸಿ ತಿಳಿಸಬೇಕೆನ್ನುವ ಕಲ್ಪನೆ ನೂರೈವತ್ತು ವರ್ಷಗಳಷ್ಟು ಹಿಂದೆಯೇ ಮೂಡಿಬಂತು. ನೆದರ್‌ಲ್ಯಾಂಡ್ಸ್‌ನ ಸಣ್ಣ ಹಳ್ಳಿಯೊಂದರಲ್ಲಿ ಶಿಕ್ಷಕನೊಬ್ಬ ತನ್ನ ಮನೆಯೊಳಗೆ ತಾರಸಿಯ ಒಳಭಾಗದಲ್ಲಿ ನಕ್ಷತ್ರಗಳನ್ನು ಅಂಟಿಸಿ, ಕೋಣೆಯ ಮಧ್ಯದಲ್ಲಿ ಸೌರಮಂಡಲದ ಪ್ರತಿರೂಪವನ್ನು ಇಟ್ಟು, ಖಗೋಳದ ಕಲ್ಪನೆಯನ್ನು ವಿವರಿಸಲು ಮೊದಲ ಬಾರಿಗೆ ಯತ್ನಿಸಿದ. ಈ ಉಪಾಯದ ಕುರಿತು ಆಲೋಚನೆಗಳು ವಿವಿಧ ದಿಕ್ಕಿನಲ್ಲಿ ಮುಂದುವರೆದು ನಕ್ಷತ್ರಗಳ ಸ್ಥಾನವನ್ನು ಎಷ್ಟು ನೈಜವಾಗಿ ಮತ್ತು ನಿಖರವಾಗಿ ಮೂಡಿಸಬಹುದು ಎಂಬುದರ ಬಗ್ಗೆ ಪ್ರಯತ್ನಗಳು ನಡೆದವು.

ಕಳೆದ ಶತಮಾನದಲ್ಲಿ ಛಾಯಾಗ್ರಹಣದ ಆವಿಷ್ಕಾರವಾದಂತೆ ಈ ದಿಕ್ಕಿನಲ್ಲಿ ಪ್ರಗತಿ ಉಂಟಾಯಿತು. ಸಣ್ಣ ಸಣ್ಣ ಪ್ರೊಜೆಕ್ಟರ್‌ಗಳ ಸಹಾಯದಿಂದ ಆಕಾಶದ ಕೆಲವು ಭಾಗಗಳನ್ನು ಗೋಡೆಯಲ್ಲಿ ಬಿಂಬಿಸುವ ಪ್ರಯತ್ನ ನಡೆಯಿತು. ಇಂಥ ಅನೇಕ ಪ್ರೊಜೆಕ್ಟರ್‌ಗಳನ್ನು ಒಟ್ಟುಗೂಡಿಸಿ, ಇಡೀ ಖಗೋಳವನ್ನು ಗೋಳಾಕಾರದ ಪರದೆಯ ಮೇಲೆ ಮೂಡಿಸಿ ಆಕಾಶವನ್ನು ಯಥಾವತ್ತಾಗಿ (ಒಳಾಂಗಣದಲ್ಲಿ) ತೋರಿಸುವ ಮೊದಲ ಯಂತ್ರ ೧೯೨೩ರಷ್ಟು ಹಿಂದೆಯೇ ಸಜ್ಜಾಯಿತು. ದೂರದರ್ಶಕದಂತಹ ಉಪಕರಣಗಳನ್ನು ತಯಾರಿಸುವುದರಲ್ಲಿ ಅಪ್ರತಿಮ ಎನಿಸಿಕೊಂಡಿರುವ (ಪೂರ್ವ) ಜರ್ಮನಿಯ ಯೇನಾದ ಕಾರ್ಲ್ ತ್ಸೈಸ್ ಸಂಸ್ಥೆ ಈ ವಿಶೇಷ ಪ್ರೊಜೆಕ್ಟರನ್ನು ನಿರ್ಮಿಸಿ, ಮೊದಲ ಪ್ರದರ್ಶನ ನೀಡಿತು.

ಅಂದಿನಿಂದ ಇಂದಿನವರೆಗೆ ಪ್ರೊಜೆಕ್ಟರ್ ಬೆಳೆದುಬಂದ ಬಗೆ ಅದ್ಭುತವಾಗಿದೆ. ಖಗೋಳ

ವಿಜ್ಞಾನದ ಎಲ್ಲ ಪರಿಕಲ್ಪನೆಗಳನ್ನು ಅಳವಡಿಸುವ ಯತ್ನ ಯಶಸ್ವಿಯಾಗಿದೆ. ಹಾಗಾಗಿ ಗ್ರಹಗಳು ನಕ್ಷತ್ರಗಳ ನಡುವೆ ಹೇಗೆ ಕಾಣುತ್ತವೆ, ದಿನೇ ದಿನೇ ಅವುಗಳ ಚಲನೆ ಹೇಗೆ ಗೋಚರವಾಗುತ್ತದೆ, ಸೂರ್ಯನ ಚಲನೆಯನ್ನು ಗುರುತಿಸುವುದು ಹೇಗೆ ಚಂದ್ರನ ಕಲೆಗಳು ಮತ್ತು ಚಲನೆ ಇಂತಹ ಎಲ್ಲ ಅಂಶಗಳನ್ನೂ ಅಳವಡಿಸಲಾಗಿದೆ. ಅಲ್ಲದೆ ಭೂಮಿಯ ಮೇಲಿನ ಬೇರೆ ಬೇರೆ ಅಕ್ಷಾಂಶಗಳಿಂದ ಆಕಾಶವನ್ನು ನೋಡುವಾಗ ಕಂಡುಬರುವ ವ್ಯತ್ಯಾಸವನ್ನು ವಿವರಿಸಲು ಪ್ರೊಜೆಕ್ಟರಿನ ಅಕ್ಷವನ್ನು ತಿರುಗಿಸಲು ಸಾಧ್ಯವಾಗುವ ಏರ್ಪಾಟೂ ಸೇರಿಕೊಂಡಿತು. ಹಾಗಾಗಿ ಈ ದಿನ ಬೆಂಗಳೂರಿನಲ್ಲೇ ಕುಳಿತು ಮಾರ್ಚ್ ತಿಂಗಳಿನ ಯಾವುದೇ ದಿನ ಭೂಗೋಳದ ಯಾವುದೋ ಮೂಲೆಯಿಂದ ಆಕಾಶ ಹೇಗೆ ಕಾಣುತ್ತದೆ ಎಂದು ನೋಡಬಹುದು.

ಇಂತಹ ಪ್ರೊಜೆಕ್ಟರಿನಿಂದ ಆಕಾಶದ ಬಗ್ಗೆ ತಿಳಿವಳಿಕೆ ಮೂಡಿಸುವುದು ಸುಲಭ ಎಂಬ ಅರಿವು ಉಂಟಾದೊಡನೆಯೇ, ಇದಕ್ಕೆ ಬೇಡಿಕೆ ಹೆಚ್ಚಾಯಿತು. ತತ್ಪರಿಣಾಮವಾಗಿ ಇಂದು ಭಾರತವೂ ಸೇರಿದಂತೆ ಎಲ್ಲ ದೇಶದ ಪ್ರಮುಖ ನಗರಗಳಲ್ಲಿ ತಾರಾಲಯಗಳಿವೆ. ಅನೇಕ ಶಾಲೆಗಳಲ್ಲಿ "ತಾರಾಲಯಕ್ಕೆ ಭೇಟಿ" ಎಂಬುದು ಪಠ್ಯಕ್ರಮದಲ್ಲಿ ಸೇರಿಹೋಗಿದೆ. ೧೯೬೨ರಲ್ಲಿ ಕಲ್ಕತ್ತಾದಲ್ಲಿ ಪ್ರಾರಂಭವಾದದ್ದು ಭಾರತದ ಮೊದಲನೆಯ ತಾರಾಲಯ.

ಬೆಂಗಳೂರು ನಗರಪಾಲಿಕೆ ೧೯೮೯ರಲ್ಲಿ (ದಿ.ನೆಹರೂ ಅವರ ಜನ್ಮಶತಾಬ್ದಿ ವರ್ಷ) ಹಸಿರು ಉದ್ಯಾನಗಳ ನಡುವೆ 'ಜವಾಹರಲಾಲ್ ನೆಹರೂ ತಾರಾಲಯ'ವನ್ನು ಆರಂಭಿಸಿತು. ಈಗ 'ಬೆಂಗಳೂರು ಅಸೋಸಿಯೇಶನ್ ಫಾರ್ ಸೈನ್ಸ್ ಎಜ್ಯುಕೇಶನ್' (BASE) ವತಿಯಿಂದ ಪ್ರದರ್ಶನಗಳು ತಯಾರಾಗುತ್ತಿವೆ. ಬೆಂಗಳೂರಿನ ನಾಗರಿಕರು ಮಾತ್ರವಲ್ಲದೆ ಹೊರಗಿನಿಂದಲೂ ಪ್ರತಿನಿತ್ಯ ಜನ ಬಂದು ಆನಂದಿಸುತ್ತಿದ್ದಾರೆ. ಇಲ್ಲಿಯ "ಸ್ಪೇಸ್‌ಮಾಸ್ಟರ್" ಎಂಬುದು ಆಧುನಿಕ ತಂತ್ರಜ್ಞಾನವನ್ನು ಅಳವಡಿಸಬಲ್ಲ ಪ್ರೊಜೆಕ್ಟರ್. ವಿಶೇಷ ಪರಿಣಾಮಗಳನ್ನು ಯಶಸ್ವಿಯಾಗಿ ತೋರಿಸುವುದರಿಂದ ಗುಣಮಟ್ಟ ಉತ್ತಮವಾಗಿದೆ.

ಖಗೋಳದ ಬಗ್ಗೆ ಮಕ್ಕಳಿಂದ ಹಿಡಿದು ಮುದುಕರವರೆಗೂ ಎಲ್ಲರಲ್ಲೂ ಇರುವ ಕುತೂಹಲ, ತಿಳಿಯಬೇಕೆನ್ನುವ ಜಿಜ್ಞಾಸೆಯನ್ನು ತಣಿಸುವ ಸಾಧನ ತಾರಾಲಯ. ಹಿಂದಿನ ಜನರು ಆಕಾಶದ ವೈಶಿಷ್ಟ್ಯಗಳನ್ನು ಬರಿಗಣ್ಣಿಂದ ನೋಡಿ ತಿಳಿದಿದ್ದರು.

## ಪ್ರದರ್ಶನ ಹೇಗೆ ?

ಉಜ್ವಲವಾದ ವಿದ್ಯುತ್ ದೀಪದ ಮುಂಭಾಗದಲ್ಲಿ ಸೂಕ್ಷ್ಮಾತಿ ರಂಧ್ರಗಳುಳ್ಳ ಲೋಹದ ಒಂದು ಪಟ್ಟಿ ಇರುತ್ತದೆ. ಈ ಪಟ್ಟಿಯಲ್ಲಿರುವ ರಂಧ್ರಗಳನ್ನು ಸಹಜವಾದ ಆಕಾಶದಲ್ಲಿ ಗೋಚರಿಸುವ ನಕ್ಷತ್ರಗಳ ಸ್ಥಾನಗಳಿಗೆ ಅನುಗುಣವಾಗಿ ರಚಿಸಲಾಗಿರುತ್ತದೆ.

ವಿದ್ಯುತ್ ದೀಪದ ಬೆಳಕು ಈ ರಂಧ್ರಗಳ ಮೂಲಕ ಹಾಯ್ದಾಗ ತಾರಾಲಯದ ಗೋಳದಲ್ಲಿ ಪ್ರತಿಫಲಿಸಿ, ನಕ್ಷತ್ರ ಸಮುಚ್ಚಯಗಳಿಂದೊಡಗೂಡಿದ ಕೃತಕ ಆಕಾಶ ನಿರ್ಮಾಣವಾಗುತ್ತದೆ.

ನಕ್ಷತ್ರ, ಗ್ರಹ, ಉಪಗ್ರಹ ಮುಂತಾದ ಆಕಾಶಕಾಯಗಳ ಚಲನೆಯನ್ನು ಪ್ರತಿಬಿಂಬಿಸಲು ತಾರಾಲಯದ ಉಪಕರಣದಲ್ಲಿ ವಿವಿಧ ಬಗೆಯ ಯಾಂತ್ರೀಕೃತ ಚಾಲನೆಯನ್ನು ಅಳವಡಿಸಲಾಗುತ್ತದೆ.

ತಾರೆಗಳ ಉದಯ-ಅಸ್ತಮಾನಗಳನ್ನು ನಿಯಂತ್ರಿಸಲು ಡಯುನರಲ್ ಚಲನೆ, ಗ್ರಹ-ನಕ್ಷತ್ರಗಳ ವಾರ್ಷಿಕ ಚಲನೆಯನ್ನು ಮೂಡಿಸಲು ಆನ್ಯುಯಲ್ ಚಲನೆ, ಭೂಮಿಯ ಯಾವುದೇ ಭಾಗದಿಂದ ನಕ್ಷತ್ರಗಳನ್ನು ವೀಕ್ಷಿಸಲು ಪೋಲಾರ್ ಚಲನೆ-ಈ ಎಲ್ಲ ತಾಂತ್ರಿಕತೆಯನ್ನು ಕ್ರಮಬದ್ಧವಾಗಿ ಒಟ್ಟುಗೂಡಿಸಿದಾಗ ಸಿದ್ಧವಾಗುವ ಉಪಕರಣವೇ ರಂಜನೆ ಹಾಗೂ ಬೋಧನೆ ನೀಡುವ ಪ್ಲಾನೆಟೇರಿಯಂ ಪ್ರೊಜೆಕ್ಟರ್.



# ಜವಹರಲಾಲ್ ನೆಹರೂ ತಾರಾಲಯ

ಬೆಂಗಳೂರು ಮಹಾನಗರಪಾಲಿಕೆಯಿಂದ ನಿರ್ಮಿತವಾದ ಜವಹರ್‌ಲಾಲ್ ನೆಹರೂ ತಾರಾಲಯವು, ನೆಹರೂ ಜನ್ಮ ಶತಾಬ್ದಿಯ ವರ್ಷವಾದ ೧೯೮೯ರ ನವೆಂಬರ್ ೧೪ ರಂದು ಉದ್ಘಾಟಿಸಲ್ಪಟ್ಟಿತು. ವಿಜ್ಞಾನ ಹಾಗೂ ಖಗೋಳ ಶಾಸ್ತ್ರವನ್ನು ವಿದ್ಯಾರ್ಥಿಗಳಿಗೂ ಜನಸಾಮಾನ್ಯರಿಗೂ ತಲುಪಿಸುವ ಉದ್ದೇಶ ಹೊಂದಿರುವ ತಾರಾಲಯ ಈ ಸಂಸ್ಥೆ ಈ ದಿಸೆಯಲ್ಲಿ ಈಗಾಗಲೇ ಸಾಕಷ್ಟು

ಈಗ ಆ ಅವಕಾಶ ಕಡಿಮೆಯಾಗುತ್ತಿದೆ. ಆದ್ದರಿಂದ ಸಾವಿರಾರು ವರ್ಷಗಳ ಹಿಂದೆ ಸಾಮಾನ್ಯನೊಬ್ಬನಿಗೆ, "ಚಂದ್ರನ ಆಕಾರದಲ್ಲಿ ದಿನದಿನಕ್ಕೆ ಏಕೆ ವ್ಯತ್ಯಾಸವಾಗುತ್ತದೆ?" ಎಂದು ಕಾಡಿದ ಪ್ರಶ್ನೆ ಇಂದು ಸಹ ಕಾಡಬಲ್ಲದು. ಇದರ ವಿವರಣೆಯನ್ನು ಕೊಡಲು ಮಾದರಿಯೊಂದು ಅವಶ್ಯಕ. ಹಾಗೆಯೇ "ಸೂರ್ಯ ಈಗ ತುಲಾ ರಾಶಿಯಲ್ಲಿದ್ದಾನೆ: ಆಮೇಲೆ ಧನು ರಾಶಿಗೆ ಸರಿಯುತ್ತಾನೆ." ಎಂದು ವಿವರಿಸ ಹೊರಟಾಗ, ಜನರಿಗೆ ಎತ್ತಿನ ಗಾಡಿಗಿಂತ ನಿಧಾನವಾಗಿ ಚಲಿಸುತ್ತಿರುವ ರೈಲೊಂದು ತುಲಾ ಎಂಬ ಸ್ಟೇಶನ್ನಿನಿಂದ ಧನು ಎಂಬ ಸ್ಟೇಶನ್ ತಲುಪಲು ಒಂದು ತಿಂಗಳು ತೆಗೆದುಕೊಳ್ಳುವುದೆಂಬ ಕಲ್ಪನೆ ಬರಬಹುದು. ಭೂಮಿಯ ದೈನಂದಿನ ಚಲನೆ, ವಾರ್ಷಿಕ ಚಲನೆ ಈ ಎರಡೂ ಅಂಶಗಳನ್ನು ವಿವರಿಸಲು ತಾರಾಲಯ ಸಹಾಯಮಾಡುತ್ತದೆ. ಸೂರ್ಯನ ಹಿನ್ನೆಲೆಯಲ್ಲಿ ಅತ್ಯಂತ ದೂರದಲ್ಲಿರುವ ನಕ್ಷತ್ರಗಳು ಕಾಲ್ಪನಿಕ ಚಿತ್ರವೇ ತುಲಾ ರಾಶಿ ಎಂದು ವಿವರಿಸಿ ತೋರಿಸಿದಾಗ, ಸೂರ್ಯನ ಪ್ರಕಾಶಮಾನವಾದ ಹಗಲಿನಲ್ಲಿ ಅದರ ಹಿಂದಿರುವ ನಕ್ಷತ್ರಗಳು ಹೇಗೆ ಕಾಣಲು ಸಾಧ್ಯ? ಸೂರ್ಯ ತುಲಾ ರಾಶಿಯಲ್ಲೇ ಇದ್ದಾನೆ ಎಂದು ಖಚಿತಪಡಿಸಿಕೊಳ್ಳುವುದು

ಕಾರ್ಯ ಚಟುವಟಿಕೆ ಹಮ್ಮಿಕೊಂಡಿದೆ. ತಾರಾಲಯದಲ್ಲಿ ಪ್ರತಿದಿನ ವಿಶೇಷ ಶಾಲಾ ಕಾರ್ಯಕ್ರಮ ಹಾಗೂ ಸಾರ್ವಜನಿಕ ಪ್ರದರ್ಶನಗಳಲ್ಲದೇ, ಆಗಾಗ್ಗೆ ನುರಿತ ತಜ್ಞರಿಂದ ಖಗೋಳ ಶಾಸ್ತ್ರಕ್ಕೆ ಸಂಬಂಧಿಸಿದಂತೆ, ವಿದ್ಯಾರ್ಥಿಗಳಿಗಾಗಿ ವಿಶೇಷ ತರಗತಿ ನಡೆಸಲಾಗುತ್ತಿದೆ. ತಾರಾಲಯ ಪ್ರದರ್ಶನವನ್ನು ಸಂಪೂರ್ಣವಾಗಿ ಸ್ಥಳೀಯ ಪ್ರತಿಭಾವಂತರನ್ನು ಕಲೆಹಾಕಿ ನಿರ್ಮಾಣ ಮಾಡಲಾಗಿದ್ದು, ಸಕಲರಿಂದಲೂ ಪ್ರಶಂಸೆ ಗಳಿಸಿದೆ.

'ವಿಶ್ವದ ಸ್ವರೂಪ'ವನ್ನು ಕುರಿತಂತೆ, ಪ್ರಖ್ಯಾತ ಸ್ಥಳೀಯ ಕಲಾವಿದರು ವಿಭಿನ್ನ ಮಾಧ್ಯಮದಲ್ಲಿ ರೂಪಿಸಿರುವ ಕಲಾಕೃತಿಗಳ ಪ್ರದರ್ಶನ ಆವರಣದಲ್ಲಿದೆ. ಅಂತೆಯೇ ಅತ್ಯಂತ ಅಪರೂಪ ಹಾಗೂ ವಿಶಿಷ್ಟವಾದ ಖಗೋಳ ಶಾಸ್ತ್ರಕ್ಕೆ ಸಂಬಂಧಿಸಿದ ಸ್ಥಿರ ಚಿತ್ರ, ಮಾಹಿತಿ ಫಲಕ ಹಾಗೂ ಬೃಹತ್ ಗಾತ್ರದ ಆಕಾಶಕಾಯಗಳ ಚಿತ್ರಗಳೆಲ್ಲಾ ವಿಜ್ಞಾನ ಪ್ರದರ್ಶನದಲ್ಲಿವೆ. ತಾರಾಲಯದ ಹೃದಯದಂತಿರುವ 'ಸ್ಕೈ ಥಿಯೇಟರ್'ನಲ್ಲಿ ಜರ್ಮನಿಯ ಮೆಸರ್ಸ್ ಕಾರ್ಲ್ ಝೈಸ್‌ರವರ 'ಸ್ಪೇಸ್ ಮಾಸ್ಟರ್' ಪ್ರದರ್ಶನ ಉಪಕರಣ ಸ್ಥಾಪಿಸಲಾಗಿದೆ. ಅದಕ್ಕೆ ಪೂರಕವಾಗಿ ಇತರ ವಿಶೇಷ ಪ್ರದರ್ಶನ ಉಪಕರಣಗಳನ್ನು ತಾರಾಲಯದ ತಂತ್ರಜ್ಞರೇ ನಿರ್ಮಿಸಿದ್ದಾರೆ. ೧೫ ಮೀಟರ್ ವ್ಯಾಸದ ಗೋಳಾಕಾರದ 'ಸ್ಕೈ ಥಿಯೇಟರ್'ನಲ್ಲಿ ಒಮ್ಮೆಗೇ ೨೨೫ ಮಂದಿ ಕುಳಿತು ಪ್ರದರ್ಶನ ವೀಕ್ಷಿಸುವ ಅವಕಾಶವಿದೆ. ತಾರಾಲಯದಲ್ಲಿ ೬ ಇಂಚು ವ್ಯಾಸದ 'ಕೋಡೆ ರಿಫ್ರಾಕ್ಟರ್ ದೂರದರ್ಶಕ' ಮುಖೇನ ಖಗೋಳ ಕಾಯವೀಕ್ಷಣಾ ಸೌಲಭ್ಯ ಕೂಡ ಇದೆ.

ಹೊಸ ದಿಲ್ಲಿ, ಪೋರ್‌ಬಂದರ, ಪುಣೆ, ವಿಜಯವಾಡ, ಕಲ್ಕತ್ತ, ಮದರಾಸು, ಲೂಧಿಯಾನ, ಭುವನೇಶ್ವರ, ಜಯಪುರ, ಸೂರತ್, ಸೇಲಂ, ಹೈದ್ರಾಬಾದ್, ಮುಜಾಫರ್‌ಪುರ, ಪಟ್ನಾ, ಕಲ್ಲಿಕೋಟೆ, ಲಕ್ನೋ, ಬರೋಡ, ಮುಂಬಯಿ, ಪುಟ್ಟಪರ್ತಿ, ವಾರಂಗಲ್, ಅಲಹಾಬಾದ್, ಶ್ರೀನಗರ, ತಿರುವನಂತಪುರ- ಈ ನಗರಗಳಲ್ಲೂ ತಾರಾಲಯಗಳು ಸ್ಥಾಪನೆಯಾಗಿವೆ.

---

ಮಾಹಿತಿ: ಬೆಂಗಳೂರು ತಾರಾಲಯ ಪರಿಚಯ ಪುಸ್ತಿಕೆಯಿಂದ

---

ಹೇಗೆ?- ಈ ಬಗೆಯ ಪ್ರಶ್ನೆಗಳೇಳುತ್ತವೆ. ತಾರಾಲಯದಲ್ಲಿ ಸೂರ್ಯೋದಯ ಮತ್ತು ಸೂರ್ಯಾಸ್ತಗಳಲ್ಲಿ ನಕ್ಷತ್ರಗಳು ಕಾಣುವ ಬಗೆಯನ್ನು ವಿವರಿಸಿ ಈ ಪ್ರಶ್ನೆಗಳಿಗೆ ಉತ್ತರಿಸಬಹುದು.

ಈ ಬಗೆಯ ಶಿಕ್ಷಣಕ್ಕೆ ಶತಮಾನಗಳ ಹಿಂದೆ ತಾರಾಲಯಗಳ ಆವಶ್ಯಕತೆ ಇರಲಿಲ್ಲ. ಆಕಾಶವನ್ನು ಬರಿಗಣ್ಣಿನಲ್ಲಿ ವೀಕ್ಷಿಸಿ, ದಿನದಿನಕ್ಕೆ ಉಂಟಾಗುವ ವ್ಯತ್ಯಾಸಗಳನ್ನು ಗ್ರಹಿಸಿ ಆಳವಾಗಿ ಆಲೋಚಿಸಿ, ತಿಳಿದುಕೊಂಡಿರಲಿಲ್ಲವೆ? ಇಂದು ಅದೇ ರೀತಿ ಆಕಾಶವನ್ನು ವೀಕ್ಷಿಸಲು ಬಯಸುವವರಿಗೆ ಕೆಲವು ಹವ್ಯಾಸಿ ವೀಕ್ಷಕ ಸಂಸ್ಥೆಗಳು ಮಾರ್ಗದರ್ಶಿಗಳಾಗಿವೆ. ಪುಸ್ತಕಗಳನ್ನು ಓದಿ ಇದನ್ನು ಜೀರ್ಣಿಸಿಕೊಳ್ಳುವುದು ಕಷ್ಟದ ಕೆಲಸ. ಉದಾಹರಣೆಗೆ ಧ್ರುವ ನಕ್ಷತ್ರ ಯಾವುದು ಎಂದು ತಿಳಿಯಬೇಕಾಗಿದೆ. ಪುಸ್ತಕದಲ್ಲಿ "ಸಪ್ತರ್ಷಿ ಮಂಡಲವೆಂಬ ನಕ್ಷತ್ರಗಳನ್ನು ಗುರುತಿಸಿ ಮೊದಲೆರಡು ನಕ್ಷತ್ರಗಳು ಮಾಡುವ ಸರಳ ರೇಖೆಯನ್ನು ಹಾಗೆಯೇ ಮುಂದುವರಿಸುವ ಕಲ್ಪನೆ ಮಾಡಿಕೊಳ್ಳಿ. ಧ್ರುವ ನಕ್ಷತ್ರ ಅದೇ ರೇಖೆಯ ಮೇಲಿರುತ್ತದೆ" ಎಂಬ ವಿವರಣೆ ಇರುತ್ತದೆ. ಜನವರಿಯ ಸಂಜೆಯಲ್ಲೊಂದು ದಿನ ತಾವು ಈ ಮಹಾತ್ಕಾರ್ಯವನ್ನು ಸಾಧಿಸ ಹೊರಟಿರುವಿರಾದರೆ....

ಸಪ್ತರ್ಷಿಯ ಕಾಣುವುದಿಲ್ಲವಲ್ಲ? ಆದ್ದರಿಂದ ಮೊದಲು ಸಪ್ತರ್ಷಿ ಸಪ್ತರ್ಷಿಯೇ ಕಾಣುತ್ತಿದೆಯೆ? ಎಂದು ಹುಡುಕಿದ ನಂತರವೇ ಅದು ಜನೆವರಿಯಲ್ಲಿ ಏಕೆ ಕಾಣಲಿಲ್ಲ ಎಂಬ ಪ್ರಶ್ನೆ ಏಳುತ್ತದೆಯಲ್ಲವೆ? ಇಂಗ್ಲಿಷ್ ಪುಸ್ತಕಗಳಲ್ಲಿ ಇದರ ಬಗ್ಗೆ ವಿವರಣೆ ಸಿಗುವುದಿಲ್ಲ. ಉತ್ತರ ಅಮೆರಿಕ ಮತ್ತು ಯೂರೋಪುಗಳಿಂದ ಈ ಸಪ್ತರ್ಷಿಯನ್ನು ವರ್ಷವಿಡೀ ನೋಡಬಹುದು. ಅವರಿಗೆ ಇದು ಸಮಸ್ಯೆಯೇ ಅಲ್ಲ. ಆದೇಕೆ? ಈ ಪ್ರಶ್ನೆಗೂ ತಾರಾಲಯದಲ್ಲಿ ಉತ್ತರ ದೊರಕುವದು.

ಹೀಗೆ ಹನ್ನೆರಡು ರಾಶಿಗಳನ್ನು ವಿವರಿಸುವುದು ತಾರಾಲಯದಲ್ಲಿ ಸುಲಭದ ಕೆಲಸ. ಮೇಷ ರಾಶಿ ಟಗರಿನಂತೆ ಕಾಣದೆ ದೋಣಿಯಂತೆಯೂ ಕಾಣಬಹುದು ಎಂಬಂತಹ ವಿಷಯಗಳನ್ನು ವಿವರಿಸಿದಾಗ, ಈ ಹನ್ನೆರಡು ಹೆಸರುಗಳು ಕೇವಲ ಭ್ರಮೆಯನ್ನುಂಟು ಮಾಡುವಂತಹವು ಎಂದು ಮನದಟ್ಟಾದಾಗ ಅನೇಕರಿಗೆ ತಮ್ಮ ತಮ್ಮ ರಾಶಿಗಳ ಬಗ್ಗೆ ಇರುವ ಅಭಿಮಾನ ಅಥವಾ ಜಿಗುಪ್ಸೆ ಮಾಯವಾಗಬಹುದು!

ತಾರಾಲಯದ ಪ್ರದರ್ಶನಗಳು ಕೇವಲ ಶಿಕ್ಷಣವನ್ನೇ ಗುರಿಯಾಗಿಟ್ಟುಕೊಂಡಲ್ಲಿ ಜನಸಾಮಾನ್ಯರಿಗೆ ತಿಳಿವಳಿಕೆ ಕೊಡುವ ಉದ್ದೇಶ ಈಡೇರುವುದಿಲ್ಲ. ಆದ್ದರಿಂದ ಶಾಲಾ ಮಕ್ಕಳಿಗೆ, ಶಿಕ್ಷಕರಿಗೆ ಬೇರೆ ಬೇರೆ ಹಂತದಲ್ಲಿ ಶಿಕ್ಷಣ ಒದಗಿಸುವುದರ ಜೊತೆಗೆ, ಜನಸಾಮಾನ್ಯರಿಗೆ ತಿಳಿವಳಿಕೆ ನೀಡುವಂತಹ ಪ್ರದರ್ಶನವನ್ನು ತೋರಿಸಬೇಕಾಗುತ್ತದೆ. ಹಾಗಾಗಿ ಈ ಪ್ರದರ್ಶನಗಳು ಯಾವುದಾದರೂ ಒಂದು ನಿರ್ದಿಷ್ಟ ವಸ್ತುವಿನ ಮೇಲೆ ಕೇಂದ್ರೀಕೃತವಾಗಿರುತ್ತವೆ. ಪ್ರಸ್ತುತ ಚಾಲ್ತಿಯಲ್ಲಿ ಇರುವುದು- "ಅನ್ಯಲೋಕಗಳು: ಅನ್ಯಜೀವಿಗಳು" ಎಂಬುದು. ಭೂಮಿಯಿಂದಾಚೆಗೆ ಜೀವರಾಶಿ ಇರಬಹುದೆ? ಎಂಬ ಪ್ರಶ್ನೆಗೆ ಉತ್ತರ ಹುಡುಕಲು ಹೊರಟು, ವಿಶ್ವದ ಉಗಮ, ನಕ್ಷತ್ರಗಳ ಹುಟ್ಟು-ಸಾವು, ಗ್ರಹಗಳ ಮೇಲಿನ ವೈಪರೀತ್ಯ ಈ ಎಲ್ಲ ಅಂಶಗಳನ್ನು ಮನದಟ್ಟು ಮಾಡಿಕೊಡಲಾಗುತ್ತದೆ. ಇದನ್ನು ವೀಕ್ಷಿಸುವವರ ಬೌದ್ಧಿಕ ಮಟ್ಟ ಬೇರೆ ಬೇರೆ. ಕಲಾವಿದನೊಬ್ಬ ಕಲ್ಪನೆಯ ಸಾಕಾರವನ್ನು ಮೆಚ್ಚಿದರೆ, ವಿಜ್ಞಾನಿ ಸಿದ್ಧಾಂತದ ವಿವರಣೆಯನ್ನು ಪ್ರಶಂಸಿಸಬಹುದು. ಮಗುವೊಂದು "ದೀಪಾವಳಿ" ಎಂದು ಭಾವಿಸಬಹುದು. ೪೫ ನಿಮಿಷಗಳ ಕಾಲ ವೀಕ್ಷಕರನ್ನು ಹಿಡಿದಿಡುವ ಈ ಪ್ರದರ್ಶನದಲ್ಲಿ ಮನರಂಜನೆ ಮತ್ತು ತಿಳಿಹಾಸ್ಯಕ್ಕೂ ಅವಕಾಶ ಮಾಡಿಕೊಡಬೇಕಾಗುವದು.

ಗ್ರಾಮೀಣ ಪ್ರದೇಶಗಳಲ್ಲಿ ತಾರಾಲಯಗಳ ಬಗ್ಗೆ ಹೆಚ್ಚು ತಿಳಿವಳಿಕೆ ಇಲ್ಲ. ಶಿಕ್ಷಕರು ಈ ಬಗ್ಗೆ ಸ್ವತಃ ತಿಳಿದುಕೊಂಡು ಮಕ್ಕಳಿಗೆ ತಿಳಿಯಪಡಿಸಿದಲ್ಲಿ ಅವರ ಖಗೋಳ ವೀಕ್ಷಣೆಯ ಕುತೂಹಲವನ್ನು ಜಾಗೃತಗೊಳಿಸಿದಂತಾಗುತ್ತದೆ. ಆಕಾಶ ವೀಕ್ಷಣೆ ಯಾವ ಹಂತದಲ್ಲೂ ಪಠ್ಯಕ್ರಮದಲ್ಲಿ ಸೇರಿಲ್ಲ. ಹಾಗಾಗಿ ಈ ಬಗೆಗಿನ ತಿಳಿವಳಿಕೆಗೆ ತಾರಾಲಯವೊಂದೇ ಸಾಧನವಾಗಿ ಉಳಿಯುತ್ತದೆ. ವಿದ್ಯುದ್ದೀಪಗಳ ಪ್ರಭೆಯಿಂದ ಮಂಕಾಗಿ ಕಾಣುವ ಆಕಾಶ ತನ್ನ ಆಕರ್ಷಣೆಯನ್ನು ಕಳೆದುಕೊಳ್ಳುತ್ತಿದೆ. ಜೊತೆಗೆ ಸಿನಿಮಾ, ಟಿ.ವಿ. ಚಾನೆಲ್ ಮುಂತಾದವುಗಳತ್ತ ಸೂಜಿಗಲ್ಲಿನ ಸೆಳೆತ. ಹೀಗಾಗಿ ತಲೆಯೆತ್ತಿ ಆಕಾಶವನ್ನು ನೋಡಲು ವಿವೇಕ ಮತ್ತು ವ್ಯವಧಾನಗಳೆರಡರ ಕೊರತೆ ಉಂಟಾಗಿದೆ. ಆಗಾಗ್ಗೆ ವಿದ್ಯುಚ್ಛಕ್ತಿ ಮಂಡಳಿಯವರು ಆಕಾಶ ವೀಕ್ಷಣೆಗೆ ಅವಕಾಶ ಮಾಡಿಕೊಡುತ್ತಿರುವುದು ('ಪವರ್ ಕಟ್' ಎಂಬ ಹೆಸರಿನಲ್ಲಿ) ಒಂದೇ ಒಂದು ಅಪವಾದ. ಅಂತಹ ರಾತ್ರಿಯ ಶುಭ್ರ ಆಕಾಶದಲ್ಲಿ ಹೊಳೆಯುವ ನಕ್ಷತ್ರಗಳನ್ನು ಕಂಡ ಮಗುವೊಂದು, "ಎಷ್ಟೊಂದು ನಕ್ಷತ್ರ ಬಂದಿವೆ ಇವತ್ತು!" ಎಂದು ಉದ್ಗಾರ ತೆಗೆದರೆ ಮತ್ತೊಂದು ಮಗು, "ಆ ದಿನ ತಾರಾಲಯದಲ್ಲಿ ತೋರಿಸಿದ್ದ ಆಕಾಶ ಹೀಗೇ ಇತ್ತು," ಎಂದು ಹೇಳಿದರೆ ಆಶ್ಚರ್ಯವೇನಿದೆ?

---

ಬುದ್ಧಿ ಏನನ್ನು ಬೇಕಾದರೂ ಮಾಡುತ್ತದೆ- ನಾಯಿಯನ್ನು ಸಿಂಹವಾಗಿ ತೋರಿಸುತ್ತದೆ; ಸಿಂಹವನ್ನು ಇನ್ನೆಂಥದೋ ಪ್ರಾಣಿ ಎಂದು ತೋರಿಸುತ್ತದೆ.

– ಕುವೆಂಪು ('ವಿಚಾರ ಕ್ರಾಂತಿಗೆ ಆಹ್ವಾನ'ದಲ್ಲಿ)



# ಜ್ಞಾನನಿಧಿ

## ವಿದ್ಯಾರ್ಥಿ ಅಂಕಣ

### ಬೈಬಲ್ಲಿನ ಬಗ್ಗೆ ನಿಮಗೆಷ್ಟು ಗೊತ್ತು?

ಬೈಬಲ್ಲಿನಲ್ಲಿ ಎರಡು ಭಾಗ: ಒಂದು ಹಳೆ ಒಡಂಬಡಿಕೆ; ಮತ್ತೊಂದು ಹೊಸ ಒಡಂಬಡಿಕೆ.

ಹಳೆ ಒಡಂಬಡಿಕೆ ೩೯ ಪುಸ್ತಕಗಳನ್ನೂ, ೯೨೯ ಅಧ್ಯಾಯಗಳನ್ನೂ, ೨೩,೨೧೪ ಚರಣಗಳನ್ನೂ, ೫೯೨,೨೫೩ ಶಬ್ದಗಳನ್ನೂ ೨,೭೩೮,೧೦೦ ಅಕ್ಷರಗಳನ್ನೂ ಒಳಗೊಂಡಿದೆ.

ಹೊಸ ಒಡಂಬಡಿಕೆ ೨೭ ಪುಸ್ತಕಗಳನ್ನೂ, ೨೬೦ ಅಧ್ಯಾಯಗಳನ್ನೂ, ೭,೯೬೭ ಚರಣಗಳನ್ನೂ ೧೩೨,೨೫೨ ಶಬ್ದಗಳನ್ನೂ, ೯,೩೩,೩೮೦ ಅಕ್ಷರಗಳನ್ನೂ ಒಳಗೊಂಡಿದೆ.

ಹಳೆ ಒಡಂಬಡಿಕೆಯಲ್ಲಿ 'ಪ್ರಭು' ಎಂಬ ಶಬ್ದ ೧೮೫೩ ಸಲ ಬಂದಿದೆಯಾದರೆ 'ಮತ್ತು' ಎನ್ನುವುದು ೩೫,೫೪೩ ಸಲ ಬಂದಿದೆ. ಸನ್ಮಾನ್ಯ (reverend) ಎಂಬ ಶಬ್ದವನ್ನು ಒಂದು ಸಲ ಮಾತ್ರ ಪ್ರಯೋಗಿಸಲಾಗಿದೆ.

ಹಳೆ ಒಡಂಬಡಿಕೆಯಲ್ಲಿನ ಅತಿ ಚಿಕ್ಕ ಶ್ಲೋಕ 'ಕ್ರಾನಿಕಲ್ಸ್' ೨೫ರಲ್ಲಿದ್ದರೆ ಹೊಸ ಒಡಂಬಡಿಕೆಯ ಅತಿ ಚಿಕ್ಕ ಶ್ಲೋಕ ಜಾನ್ xi, ೩೫ರಲ್ಲಿ ಇದೆ.

ಇಷ್ಟೆಲ್ಲ ಲೆಕ್ಕಹಾಕಿದವರು ಯಾರು ಗೊತ್ತೆ? ಆತ ಸ್ಪೇನಿನ ಆಧಿಪತ್ಯಕ್ಕೆ ಉತ್ತರಾಧಿಕಾರಿಯೇ ಆಗಬೇಕಿದ್ದ ಪ್ರಿನ್ಸ್ ಆಫ್ ಗ್ರೆನಡಾ. ಕಾರಣಾಂತರದಿಂದ ಪಟ್ಟಕ್ಕೆ ಬರುವುದು ತಪ್ಪಿಹೋದದ್ದಲ್ಲದೆ ೩೩ ವರ್ಷಗಳ ಸ್ನಾತ ಸೆರೆಮನೆಯಲ್ಲಿ ಕಳೆಯಬೇಕಾಗಿ ಬಂತು. ಈ ೩೩ ವರ್ಷಗಳಲ್ಲಿ ಅವನು ಮಾಡಿದ ಕೆಲಸವೆಂದರೆ ಇದೇ.

● 'ವಾಗ್ದೇವಿ'

### ವಿಚಿತ್ರಗಳು !

೧. ಜಪಾನಿನ ಕಿಯೋಟೋದಲ್ಲಿ ಒಂದು ಅದ್ಭುತವಾದ ಮಂದಿರವಿದೆ. ೩೮೯ ಅಡಿ ಉದ್ದ ಮತ್ತು ೫೭ ಅಡಿ ಅಗಲವಿದೆ, ಆ ದೇವಸ್ಥಾನ. ಜಪಾನಿನ ಜನರ ಅಧಿದೇವತೆ ಕೈನ್ನಾದ ೨೨.೨೨೨ ವಿಗ್ರಹಗಳು ಆ ದೇವಾಲಯದಲ್ಲಿವೆ. ಒಂದೇ ದೇವರ ಅಷ್ಟೊಂದು ಮೂರ್ತಿಗಳಿರುವ ದೇವಾಲಯ ಜಗತ್ತಿನಲ್ಲಿ ಅದೊಂದೇ !

೨. "ಈ ಈ" ಎಂಬ ಉಚ್ಚಾರಣೆಗೆ ಚೀನಾ ಭಾಷೆಯಲ್ಲಿ ೧೯೩ ಬೇರೆ ಬೇರೆ ಅರ್ಥಗಳಿವೆ.

೩. ಚೇಲ್‌ಸಿಮಿಚ್‌ದಲ್ಲಿ ನೂರು ಜನರು ಕೂಡಿಕೊಂಡು ಒಂದು ದೊಡ್ಡಮನೆಯನ್ನು ೧೯೫೯ರಲ್ಲಿ ಮೂರು ನಿಮಿಷ ಒಂಬತ್ತು ಸೆಕೆಂಡುಗಳಲ್ಲಿ ಬಣ್ಣ ಬಳಿದರು !

೪. ಸಹರಾ ಮರುಭೂಮಿಯ ಗ್ಯಾತ್ ನಗರದಲ್ಲಿ ಕಟ್ಟಿರುವ ಯಾ ಮನೆಗೂ ಛಾವಣಿಯ ಇರುವುದಿಲ್ಲ.

● ಸಿದ್ದು ಎಸ್. ಪೂಜಾರಿ



# ಔಷಧಗಳು ಹೇಗೆ ಕೆಲಸ ಮಾಡುತ್ತವೆ ?

## ಭಾಗ-೧

ನಮ್ಮ ಶರೀರ ಒಂದಲ್ಲ, ಎರಡಲ್ಲ ಸಾವಿರಾರು ರಾಸಾಯನಿಕಗಳಿಂದ ಮಾಡಲ್ಪಟ್ಟಿದೆ. ಒಂದೊಂದು ರಾಸಾಯನಿಕಕ್ಕೂ ಒಂದೊಂದು ಕೆಲಸ. ಯಾವುದೊಂದು ರಾಸಾಯನಿಕ ಸರಿಯಾಗಿ ಕೆಲಸ ಮಾಡದಿದ್ದರೆ ಡಾಕ್ಟರರು ಇನ್ನಷ್ಟು ರಾಸಾಯನಿಕಗಳನ್ನು ಕೊಟ್ಟು ಅವು ಸರಿಯಾಗಿ ಕೆಲಸ ಮಾಡುವಂತೆ ಮಾಡುತ್ತಾರೆ. ಆಗ ಅನಾರೋಗ್ಯ ತಂತಾನೆ ಹೊರಟುಹೋಗುತ್ತದೆ.

ರೋಗವನ್ನು ನಿದಾನಿಸುವಲ್ಲಿ ಪಾಶ್ಚಾತ್ಯರಲ್ಲಿ ಗ್ರೀಕರೇ ಹೆಚ್ಚು ಹಳಬರು. ಆದರೆ ಅವರಿಗಿಂತ ಮೆಸೋಪೊಟೇಮಿಯದ ಜನ (ಈಗಿನ ತುರ್ಕಸ್ಥಾನದ ಒಂದು ಭಾಗ) ಇನ್ನಷ್ಟು ಹಳಬರು. ಎರಡು ಸಾವಿರ ವರ್ಷಗಳಷ್ಟು ಹಿಂದೆಯೆ ೨೫೦ ಸಸ್ಯಗಳನ್ನು ರೋಗ ನಿದಾನಕ್ಕಾಗಿ ಬಳಸುತ್ತಿದ್ದರವರು. ಆದರೆ ನಮ್ಮ ದೇಶದ ಆಯುರ್ವೇದ ಇದಕ್ಕಿಂತ ಹಳೆಯದು. ಮೆಸೋಪೊಟೇಮಿಯದ ಜನ ಔಷಧೀಯ ಗುಣಗಳುಳ್ಳ ೨೫೦ ಸಸ್ಯಗಳನ್ನು ಕಂಡುಹಿಡಿದಿದ್ದರೆ ನಮ್ಮ ದೇಶದ ಆಯು

ರ್ವೇದ ಪಂಡಿತರು ಕಂಡುಹಿಡಿದ ಇಂತಹ ಸಸ್ಯಗಳ ಸಂಖ್ಯೆ ಸಾವಿರಕ್ಕೂ ಹೆಚ್ಚು!

ಆಯುರ್ವೇದ ಪಂಡಿತರಿಗೆ ಧನ್ವಂತರಿ ಹೇಗೋ ಹಾಗೆ ಪಾಶ್ಚಾತ್ಯರಿಗೆ ಹಿಪ್ಪೋಕ್ರೆಟಿಸ್. ಸುಮಾರು ೨೫೦೦ ವರ್ಷಗಳ ಹಿಂದೆ ಜೀವಿಸಿದ್ದ ಆತ ನೋವು ನಿವಾರಣೆಗಾಗಿ ವಿಲ್ಲೋ ಮರದ ತೊಗಟೆಯ ಕಷಾಯವನ್ನು ವಿಧಿಸುತ್ತಿದ್ದ. ತೊಗಟೆಯಲ್ಲಿನ ಸ್ಯಾಲಿಸಿಲಿಕ್ ಆಮ್ಲ ನೋವನ್ನು ನಿವಾರಿಸುತ್ತಿದ್ದರೂ ಹೊಟ್ಟೆಯಲ್ಲಿ ಉರಿಯನ್ನುಂಟುಮಾಡುತ್ತಿತ್ತು. ೧೮೯೫ರಲ್ಲಿ ಫೆಲಿಕ್ಸ್ ಹಾಫ್‌ಮನ್ ಎಂಬ ಜರ್ಮನ್ ವೈದ್ಯ ಡಾಂಬರಿನಿಂದ ಸ್ಯಾಲಿಸಿಲಿಕ್ ಆಮ್ಲವನ್ನು ತೆಗೆಯುವ ವಿಧಾನವನ್ನು ಕಂಡುಹಿಡಿದ. ವಿಲ್ಲೋ ಮರದ ಸ್ಯಾಲಿಸಿಲಿಕ್ ಆಮ್ಲವೂ ಡಾಂಬರಿನಿಂದ ತೆಗೆದ ಸ್ಯಾಲಿಸಿಲಿಕ್ ಆಮ್ಲವೂ ರಾಸಾಯನಿಕವಾಗಿ ಒಂದೇ, ಆದರೂ ಡಾಂಬರಿನಿಂದ ತೆಗೆದ ಸ್ಯಾಲಿಸಿಲಿಕ್ ಆಮ್ಲಕ್ಕೆ ಅಷ್ಟು ತೀವ್ರವಾದ ಉಪಪರಿಣಾಮಗಳಿಲ್ಲ. ಇಂದು ಜಗತ್ತಿನಾದ್ಯಂತ ಪ್ರತಿವರ್ಷ ೧೦,೦೦೦ ಕೋಟಿ ಸ್ಯಾಲಿಸಿಲಿಕ್ ಆಮ್ಲ (ಅರ್ಥಾತ್ ಆಸ್ಪಿರಿನ್) ಬೆರೆತ ಮಾತ್ರೆಗಳು ಖರ್ಚಾಗುತ್ತವೆಯೆಂದರೆ ನಂಬುತ್ತೀರಾ? ಯಾವುದಕ್ಕೂ ಮಿತಿಯಿರಬೇಕು.

ಹೃದ್ರೋಗಗಳಿಗೆ ಬಳಸಲಾಗುವ ಡಿಜಿಟಾಲಿಸ್‌ನ ಕತೆಯೂ ಹಾಗೆಯೆ. ಸುಮಾರು ಇನ್ನೂರು ವರ್ಷಗಳ ಹಿಂದೆ ಪಶ್ಚಿಮದ ದೇಶಗಳಲ್ಲಿ ಉದ್ದವಾದ ಕೆಂಬಣ್ಣದ ಹೂಬಿಡುವ ಫಾಕ್ಸ್‌ಗ್ಲೋವ್ ಸಸ್ಯದ ಎಲೆಗಳ ಕಷಾಯವನ್ನು ಹೃದ್ರೋಗಿಗಳಿಗೆ ನೀಡಲಾಗುತ್ತಿತ್ತು. ಈಗ ಅಂತಹ ರೋಗಗಳಿಗೆ ಡಾಕ್ಟರರು

● 'ಎಂ. ದೀಪಾ'



## ಜ್ಞಾನನಿಧಿ

ನೀಡುವ ಡಿಜಿಟಾಲಿಸ್ ಈ ಫಾಕ್ಸ್‌ಗ್ಲೋವ್ ಎಲೆಗಳಿಂದಲೆ ತೆಗೆದದ್ದು.

ಹೊಸ ಔಷಧಗಳು ಹೇಗೆ ಪೇಟೆಗೆ ಬರುತ್ತವೆಯೆನ್ನುವುದನ್ನು ತಿಳಿದುಕೊಳ್ಳುವುದೂ ಆಸಕ್ತಿಕರ. ವಿಜ್ಞಾನಿಗಳು ಯಾವಾಗಲೂ ಸಂಶೋಧನೆಗಳಲ್ಲಿ ನಿರತರಾಗಿರುತ್ತಾರೆ. ಅವರು ಕಂಡು ಹಿಡಿದ ಔಷಧ ಸಸ್ಯಮೂಲದ್ದಾಗಿರಲೂಬಹುದು ಅಥವಾ ಅದನ್ನವರು ಹೊಸದಾಗಿ ಪ್ರಯೋಗಶಾಲೆಯಲ್ಲಿ ತಯಾರಿಸಿರಲೂಬಹುದು. ನಿರ್ದಿಷ್ಟ ವ್ಯಾಧಿಯನ್ನು ಶಮನಗೊಳಿಸಬಲ್ಲ ಶಕ್ತಿ ಇದೆಯೆಂದು ಖಚಿತವಾದ ಸುಮಾರು ಮೂವತ್ತು ಔಷಧಗಳನ್ನು ಈ ವಿಜ್ಞಾನಿಗಳು ಆಯ್ದುಕೊಂಡು ಅವು ನಿರಪಾಯಕರವಾಗಿದ್ದರೂ ದೇಹದಲ್ಲಿ ಸೇರಿಕೊಂಡ ನಂತರ ರಾಸಾಯನಿಕವಾಗಿ ವಿಘಟಿತಗೊಂಡು ದೇಹಕ್ಕೆ ಮಾರಕವಾಗುವ ಹಾಗೆ ವರ್ತಿಸುತ್ತವೆಯೆ ? ಎನ್ನುವುದನ್ನು ಪ್ರಯೋಗಪಶುಗಳಿಗೆ ನೀಡಿ ಪರೀಕ್ಷಿಸುತ್ತಾರೆ. ಪರಿಣಾಮ ಒಮ್ಮೆಲೆ ತಿಳಿದುಬರುವುದಿಲ್ಲ. ಖಚಿತವಾದ ಪರಿಣಾಮ ತಿಳಿದುಬರಲು ಹೆಚ್ಚು ಕಡಿಮೆ ಮೂರು ವರ್ಷಗಳೇ ಬೇಕು.

ಈ ಪರೀಕ್ಷೆಯಲ್ಲಿ ನಿರಪಾಯಕರವೆಂದು ಸಿದ್ಧವಾದ ಔಷಧಗಳನ್ನು ಆಯ್ದುಕೊಂಡು ಮಾನವರ ಮೇಲೆ ಪ್ರಯೋಗಿಸಲಾಗುತ್ತದೆ. ಅದಕ್ಕಾಗಿ ಆರೋಗ್ಯವಂತರಾದ ಸ್ವಯಂಸೇವಕರನ್ನು ಆಯ್ದುಕೊಂಡು, ಔಷಧದ ಬಗೆಗೆ ಸರಿಯಾದ ತಿಳುವಳಿಕೆ ಮಾಡಿಕೊಟ್ಟು ಅವರು ಒಪ್ಪಿದ ನಂತರವೇ ಔಷಧಗಳನ್ನು ಕೊಡುತ್ತಾರೆ. ಆ ಔಷಧಗಳು ಶರೀರದಲ್ಲಿ ಎಲ್ಲೆಲ್ಲಿ, ಯಾವ ಯಾವ ಪ್ರಮಾಣದಲ್ಲಿ ಚಲಿಸುತ್ತವೆಂಬುದನ್ನು ಗೈಗರ್ ಕೌಂಟರ್ ಎಂಬ ಸಾಧನದ ಸಹಾಯದಿಂದ ಪರಿಶೀಲಿಸಲು ಔಷಧಗಳನ್ನು ಸ್ವಲ್ಪ ವಿಕಿರಣಯುಕ್ತಗೊಳಿಸಿದ ನಂತರವೇ ಸ್ವಯಂಸೇವಕರಿಗೆ ಕೊಡುವುದು ವಾಡಿಕೆ.

ಇದಾದ ನಂತರ- ಅಂದರೆ ಪರೀಕ್ಷೆ ಪ್ರಾರಂಭವಾದ ಎಂಟು ವರ್ಷಗಳ ನಂತರ- ಔಷಧಿಯ ಪರೀಕ್ಷೆ ಕೊನೆಯ ಹಂತ ತಲಪುತ್ತದೆ. ಎರಡನೆಯ ಹಂತದ ಪರೀಕ್ಷೆಯಲ್ಲಿ ಅತ್ಯಲ್ಪ ಉಪಪರಿಣಾಮವುಳ್ಳದ್ದೆಂದು ಕಂಡು ಬಂದ ಔಷಧವನ್ನು ಮಾತ್ರ ಈ ಪರೀಕ್ಷೆಗೆ ಆಯ್ದುಕೊಳ್ಳಲಾಗಿರುತ್ತದೆ.

ಸ್ವಯಂಸೇವಕರು ಔಷಧದ ಬಗೆಗೆ ಪೂರ್ವಾಗ್ರಹದೂಷಿತರೂ ಆಗಿರಬಹುದಾದ್ದರಿಂದ ಆ ಸಾಧ್ಯತೆಯನ್ನು ತಳ್ಳಿಹಾಕಲು ಸ್ವಯಂಸೇವಕರನ್ನು ಎರಡು ಗುಂಪುಗಳಾಗಿ ವಿಂಗಡಿಸಿ ಒಂದು ಗುಂಪಿಗೆ ನಿಜವಾದ ಮಾತ್ರೆಗಳನ್ನೂ ಇನ್ನೊಂದು ಗುಂಪಿಗೆ ನಿಜವಾದ ಔಷಧದಂತೆ ಕಾಣುವ, ಆದರೆ ಔಷಧದ ಗುಣ ಎಳ್ಳಷ್ಟೂ ಇಲ್ಲದ ಮಾತ್ರೆಗಳನ್ನೂ ಕೊಟ್ಟು ಪರೀಕ್ಷಿಸಲಾಗುತ್ತದೆ. ಇಂಥಾ ಮಾತ್ರೆಗಳಿಗೆ ವೈದ್ಯಕೀಯದಲ್ಲಿ ಮಿಥ್ಯಾಮಾತ್ರೆಗಳು (Placebo) ಎಂದು ಹೆಸರು. ಈ ಪರೀಕ್ಷೆಯಲ್ಲಿಯೂ ತೇರ್ಗಡೆಯಾದರೆ ಮಾತ್ರ ಆ ಔಷಧವನ್ನು ಪೇಟೆಗೆ ಬಿಡುಗಡೆ ಮಾಡಲಾಗುತ್ತದೆ. ಇಷ್ಟಾದರೂ ಯಾವ ಔಷಧವೂ ಉಪಪರಿಣಾಮವಿಲ್ಲದೆ ಇರುವುದಿಲ್ಲ ಎನ್ನುವುದನ್ನು ಮರೆಯುವಂತಿಲ್ಲ.

ಹಾಗಾದರೆ ಔಷಧಗಳು ಶರೀರದಲ್ಲಿ ಹೇಗೆ

### ನೀಲಿ ಪಾಚಿ

ಶುಕ್ರ ಗ್ರಹ ಮನುಷ್ಯ ವಾಸಯೋಗ್ಯವಾಗಲು ನೀಲಿ ಪಾಚಿ (ಬ್ಲೂ ಆಲ್ಗೇ)ಯನ್ನು ಶುಕ್ರದ ವಾತಾವರಣಕ್ಕೆ ಹಾಯಿಸಬೇಕು. ಏಕೆಂದರೆ, ಈ ನೀಲಿ ಪಾಚಿ ಶುಕ್ರದ ಮೇಲ್ಮೈಯ ಅತ್ಯುಗ್ರ ಶಾಖವನ್ನು (೪೭೦ ಡಿಗ್ರಿ ಸೆಂಟಿಗ್ರೇಡ್) ತಾಳಿಕೊಂಡು ವೇಗವಾಗಿ ವೃದ್ಧಿಸುತ್ತ ಆಮ್ಲಜನಕವನ್ನು ದೊಡ್ಡ ಪ್ರಮಾಣದಲ್ಲಿ ಉತ್ಪಾದಿಸುತ್ತದೆ. ಪರಿಣಾಮ ಮಳೆ ಸುರಿದು, ಶಾಖ ಕುಗ್ಗಿ, ನೆಲ ಫಲವತ್ತಾಗಿ ಶುಕ್ರ ಗ್ರಹ ವಾಸಯೋಗ್ಯವಾಗುತ್ತದೆಂದು ವಿಜ್ಞಾನಿ ಡಾ. ಕಾರ್ಲ್‌ಸಗಾನ್ ಪ್ರತಿಪಾದಿಸಿದ್ದಾರೆ.

ಸಂಗ್ರಹ: **ಕೆ. ಗಣೇಶ**

ಕೆಲಸ ಮಾಡುತ್ತವೆ? ಶರೀರದ ಪ್ರತಿಯೊಂದು ಜೀವಕಣದಲ್ಲಿಯೂ ಗ್ರಾಹಕಕೇಂದ್ರಗಳಿವೆ. ಈ ಔಷಧಗಳು ಆ ಗ್ರಾಹಕ ಕೇಂದ್ರಗಳೊಡನೆ ಪ್ರತಿಕ್ರಿಯಿಸಿ ಇಚ್ಛಿತ ಪರಿಣಾಮವನ್ನುಂಟುಮಾಡುತ್ತವೆಂದು ಔಷಧಶಾಸ್ತ್ರಜ್ಞರ ಅಂಬೋಣ.

ಒಂದು ರೀತಿಯಲ್ಲಿ ನಮ್ಮ ಶರೀರವೇ ರಾಸಾಯನಿಕಗಳ ಒಂದು ಕಾರಖಾನೆ. ಬೇರೆ ಬೇರೆ ಕಡೆಗಳಲ್ಲಿ ಸದಾ ಬೇರೆ ಬೇರೆ ರಾಸಾಯನಿಕಗಳು ತಯಾರಾಗುತ್ತಲೇ ಇರುತ್ತವೆ. ಉದಾಹರಣೆಗೆ ಅಡ್ರೆನಾಲಿನ್ನನ್ನೇ ತೆಗೆದುಕೊಳ್ಳಿ. ಹೆಚ್ಚು ಶ್ರಮದ ಕೆಲಸ ಮಾಡಿದಾಗ ಅಥವಾ ಮಾನಸಿಕ ಒತ್ತಡ ಹೆಚ್ಚಿದಾಗ ಶರೀರದಲ್ಲಿ ಅಧಿಕ ಪ್ರಮಾಣದಲ್ಲಿ ಅಡ್ರೆನಾಲಿನ್ ಉತ್ಪಾದನೆಗೊಳ್ಳುತ್ತದೆ. ಉತ್ಪಾದನೆ ಹೆಚ್ಚಿದ್ದರಿಂದ ಹೃದಯ ಹೆಚ್ಚು ವೇಗವಾಗಿ ಬಡಿದುಕೊಳ್ಳಲಾರಂಭಿಸುತ್ತದೆ.

ಆದರೆ ಅಡ್ರೆನಾಲಿನ್ನನ್ನು ಉತ್ಪಾದಿಸುವ ಶರೀರ ಮಾಂಸಪೇಶಿಗಳನ್ನು, ಸ್ನಾಯುಗಳನ್ನು ತಣಿಸುವ ಸಾಲ್ಬುಟಾಮೋಲನ್ನೂ ಉತ್ಪಾದಿಸುತ್ತದೆ. ಇದು ಒತ್ತಡ ಹೆಚ್ಚಿದಾಗ ಪುಪ್ಪುಸದ ಮಾಂಸಪೇಶಿಗಳತ್ತ ನುಗ್ಗಿ ಜೀವಕಣಗಳ ಗ್ರಾಹಕ ಕೇಂದ್ರಗಳಲ್ಲಿ ಸಂಗ್ರಹಗೊಂಡ ಅಡ್ರೆನಾಲಿನ್ನಿನೊಡನೆ ಪ್ರಕ್ರಿಯಿಸುವ ಮೂಲಕ ಪುಪ್ಪುಸಕ್ಕೆ ಒಂದಿಷ್ಟು ವಿಶ್ರಾಂತಿಯನ್ನು ಒದಗಿಸುತ್ತದೆ. ಇದೇ ಕಾಲಕ್ಕೆ, ಹೃದಯದ ಮಾಂಸಪೇಶಿಗಳಲ್ಲಿ ಅಡ್ರೆನಾಲಿನ್ ಉತ್ಪತ್ತಿಗೊಳ್ಳುವ ಮೊದಲ ಉತ್ಪಾದನೆಗೊಂಡ ಪ್ರೊಪ್ರಾನೊಮೋಲ್ ಅಡ್ರೆನಾಲಿನ್ ಗ್ರಾಹಕ ಕೇಂದ್ರಗಳನ್ನು ತಲಪುವುದನ್ನು ತಡೆಯುತ್ತದೆ. ಇಲ್ಲವಾದರೆ ಹೃದಯ ಅತಿ ಜೋರಾಗಿ ಬಡೆದುಕೊಳ್ಳತೊಡಗಿ ಅದು ಒಡೆದೇ ಹೋಗುತ್ತಿತ್ತೋ ಏನೋ!

(ಮುಂದುವರೆಯುವುದು)

## ವಿಷದ ಕಪ್ಪೆಗಳು

ಹಾವಿನ ಬಾಯಲ್ಲಿ ಬಿದ್ದು ಆಹಾರವಾಗುವ ಕಪ್ಪೆಯಲ್ಲೂ ವಿಷವಿದೆ ಎಂದರೆ ನಂಬುವುದೇ ಕಷ್ಟ ಅಲ್ಲವೆ? ಇದು ಸತ್ಯ. ಆದರೆ ಎಲ್ಲಾ ಕಪ್ಪೆಗಳೂ ವಿಷಜಂತುಗಳಲ್ಲ.

ತೆಂಕಣ ಅಮೇರಿಕಾದಲ್ಲಿ ಗೋಗೋಯ್ ಎಂಬ ಜಾತಿಯ ಕಪ್ಪೆ ಹೊಳೆಯುವ ಬಣ್ಣ ಬಣ್ಣದ ಪಟ್ಟೆಗಳಿಂದ ಅತಿ ಸುಂದರ ಜೀವಿ. ಆದರೆ ಅಷ್ಟೇ ವಿಷಕಾರಿ. ಈ ಕಪ್ಪೆಯ ದೇಹದಿಂದ ಹೊರತೆಗೆದ ಒಂದು ಗ್ರಾಂ ನಂಜಿನಿಂದ ಒಂದು ಸಾವಿರ ಜನರನ್ನು ಕೊಲ್ಲಬಹುದು.

ಅಮೆಜಾನ್ ಕಾಡು ಪ್ರದೇಶದಲ್ಲಿ ಈ ಕಪ್ಪೆಗಳ ಇನ್ನೊಂದು ಜಾತಿ ಕಂಡು ಬರುತ್ತದೆ. ಇವನ್ನು ನಂಜಂಬು ಕಪ್ಪೆಗಳೆಂದು ಕರೆಯುತ್ತಾರೆ. ಬುಡಕಟ್ಟು ಜನಾಂಗದವರು ಉದ್ದವಾದ ಸೂಜಿ ಚುಚ್ಚಿ ಈ ಕಪ್ಪೆಯನ್ನು ಬೆಂಕಿಯ ಮೇಲೆ ಹಿಡಿಯುತ್ತಾರೆ. ಆಗ ಕಪ್ಪೆ ವಿಷ ಕಕ್ಕುತ್ತದೆ. ಆ ಬಿಳಿ ದ್ರವದಲ್ಲಿ ಬಾಣದ ತುದಿಗಳನ್ನು ಅದ್ದುತ್ತಾರೆ. ಒಂದು ಕಪ್ಪೆಯ ವಿಷದಲ್ಲಿ ೫೦ ಅಂಬುಗಳನ್ನು ನೆನೆಸಬಹುದು. ಮನುಷ್ಯ ದೇಹದ ಯಾವುದೇ ಭಾಗಕ್ಕೆ ಈ ವಿಷ ಸೋಕಿದರೂ ಸಾಕು, ಆ ಭಾಗ ಕೆಲಸ ಮಾಡುವುದು ನಿಲ್ಲುತ್ತದೆ.

ಸಂಗ್ರಹ: ಗಣೇಶ ಪಿ. ನಾಡೋರ

# ಜ್ಞಾನನಿಧಿ

## ೨೦ ಪ್ರಶ್ನೆಗಳು ?

೧. 'ಝುಂಡಾ ಊಂಚಾ ರಹೇ ಹಮಾರಾ' ಎಂಬ ಗೀತೆ ಸ್ವಾತಂತ್ರ್ಯ ಚಳವಳಿಯ ಕಾಲಕ್ಕೆ ತುಂಬ ಪ್ರಸಿದ್ಧವಾಗಿತ್ತು. ಆ ಗೀತೆಯನ್ನು ರಚಿಸಿದ ಕವಿ ಯಾರು ?

೨. ಚಲನಚಿತ್ರವೊಂದಕ್ಕೆ ನೀಡುವ ಶ್ರೇಷ್ಠ ಪ್ರಶಸ್ತಿ ಆಸ್ಕರ್. ಚಿತ್ರ ನಿರ್ಮಾಣಕ್ಕಾಗಿ ಅತ್ಯಂತ ಹೆಚ್ಚು ಆಸ್ಕರ್ ಪ್ರಶಸ್ತಿಗಳನ್ನು ಪಡೆದ ಚಿತ್ರ ನಿರ್ಮಾಪಕನಾರು ?

೩.ಮಹಾತ್ಮಾ ಗಾಂಧಿಯವರಿಗೆ ನಾಲ್ವರು ಪುತ್ರರಿದ್ದರು ಅವರ ಹೆಸರುಗಳನ್ನು ಹೇಳಬಲ್ಲಿರಾ ?

೪.ಮ್ಯಾಗ್ಸೇಸೆ ಪ್ರಶಸ್ತಿಯನ್ನು ಪಡೆದ ಪ್ರಥಮ ಭಾರತೀಯ ಯಾರು ?

೫.ವಿವಾದಾಸ್ಪದ ನಗರವಾಗಿರುವ ಅಯೋಧ್ಯೆ ಯಾವ ಲೋಕಸಭಾ ಕ್ಷೇತ್ರದಲ್ಲಿ ಬರುತ್ತದೆ ?

೬. 'ಬ್ಯಾಂಕರ್ ಮಾರ್ಗಯ್ಯ' ಎಂಬ ಕನ್ನಡ ಚಲನ ಚಿತ್ರ ಯಾವ ಕಾದಂಬರಿಯನ್ನು, ಆಧರಿಸಿ ತೆಗೆದದ್ದು ?

೭. ರಾಷ್ಟ್ರಪತಿ ಭವನದ ನಿರ್ಮಾಣ ಯಾವಾಗ ಮತ್ತು ಯಾರಿಂದ ಆಯಿತು ?

೮. ಭಾರತ ಗ್ಯಾಟ್ ಒಪ್ಪಂದಕ್ಕೆ ಯಾವಾಗ ಮತ್ತು ಎಲ್ಲಿ ಸಹಿ ಹಾಕಿತು ?

೯. ಭಾರತೀಯ ಕಾಲಮಾನ ಇಂಡಿಯನ್ ಸ್ಟ್ಯಾಂಡರ್ಡ್ ಟೈಮ್ ಎಂದಿನಿಂದ ಜಾರಿಗೆ ಬಂತು ?

೧೦. ೧೯೯೧ರ ಜನಗಣತಿಯ ಮೇರೆಗೆ ಭಾರತದ ಸಾಕ್ಷರತಾ ಪ್ರಮಾಣ ಶೇಕಡಾ ಎಷ್ಟು ?

೧೧. ಕಲಕತ್ತಾ ಹಾಗೂ ದೆಹಲಿಯನ್ನು ಜೋಡಿಸುವ ಹೆದ್ದಾರಿಯ ಸಂಖ್ಯೆ ಎಷ್ಟು ?

೧೨. ಸೆಪ್ಟೆಂಬರ್ ೮, ೧೯೯೪ನ್ನು ಯಾವ ದಿನವನ್ನಾಗಿ ಆಚರಿಸಲಾಯಿತು ?

೧೩. ಭಾರತದಲ್ಲಿ ಬಣ್ಣದ ದೂರದರ್ಶನ ಪ್ರಸಾರ ಎಲ್ಲಿಂದ ಮತ್ತು ಯಾವಾಗ ಆರಂಭವಾಯಿತು ?

೧೪. ಮಾನವ ಶರೀರದಲ್ಲಿ ವಿಟಾಮಿನ್ 'ಕೆ'ಯ ಕಾರ್ಯವೇನು ?

೧೫. ಭಾರತ ಆಗಸ್ಟ್ ೧೫ ರಂದು ಸ್ವತಂತ್ರವಾಯಿತು. ಅದೇ ದಿನಾಂಕದಂದು ಸ್ವತಂತ್ರವಾದ ಇತರ ಎರಡು ದೇಶಗಳಾವುವು ?

೧೬. ಭಾರತದ ಸಿನಿಮಾದಲ್ಲಿ ಹಿನ್ನೆಲೆ ಗಾಯನ ಯಾವ ಚಿತ್ರದಿಂದ ಆರಂಭವಾಯಿತು ?



# ಜ್ಞಾನನಿಧಿ

೧೭. ಅಟಲ್ ಬಿಹಾರಿ ವಾಜಪೇಯಿ ಬರೆದ ಇತ್ತೀಚಿನ ಪುಸ್ತಕ ಯಾವುದು ?



೧೮. ಭಾರತದ 'ರಿಸರ್ವ ಬ್ಯಾಂಕ್' ಯಾವಾಗ ಸ್ಥಾಪಿಸಲ್ಪಟ್ಟಿತು ?

೧೯. ಪ್ರಪಂಚದ ಯಾವ ದೇಶವು ಪ್ರತಿ ವರ್ಷ ತನ್ನ ರಾಷ್ಟ್ರಪತಿಯನ್ನು ಚುನಾಯಿಸುತ್ತದೆ ?

೨೦. ಸಿಕ್ಕಿಂ ಭಾರತದ ಒಕ್ಕೂಟವನ್ನು ಸೇರಿದ್ದು ಯಾವಾಗ ?

ಸಂಗ್ರಹ: **ಮುರಲೀಧರ ಕುಲಕರ್ಣಿ**

ಉತ್ತರಗಳು
ಆಚೆನ ಪುಟದಲ್ಲಿ

**ತ**ಮ್ಮ ಅಪ್ರತಿಮ ಸ್ವರಸಾಧನೆಯಿಂದ ಕರ್ನಾಟಕಕ್ಕೆ ಹೆಸರು ತಂದುಕೊಟ್ಟ ಹೆಮ್ಮೆಯ ಸಂಗೀತ ವಿದುಷಿ ಶ್ರೀಮತಿ ಗಂಗೂಬಾಯಿ ಹಾನಗಲ್ಲರಿಗೆ ಈವರೆಗೆ ಅದೆಷ್ಟು ಗೌರವ ಪ್ರಶಸ್ತಿಗಳು ದೊರೆತಿವೆ ಗೊತ್ತೆ ?

ಇಲ್ಲಿದೆ ನೋಡಿ ಆ ಪಟ್ಟಿ:

೧. ಕಾಶೀ ನಾಗರಿ ಪ್ರಚಾರಿಣಿ' ಸಭಾದ 'ಭಾರತೀಕಂಠ' ಪ್ರಶಸ್ತಿ- ೧೯೪೮.

೨. ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ- ೧೯೬೨.

೩. ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ- ೧೯೭೦.

೪. ಭಾರತ ಸರಕಾರದ 'ಪದ್ಮಭೂಷಣ ಗೌರವ'- ೧೯೭೧.

೫. ಕೇಂದ್ರ ಸಂಗೀತ-ನಾಟಕ ಅಕಾಡೆಮಿ ಪ್ರಶಸ್ತಿ- ೧೯೭೩.

೬. ಬೇಗಂ ಅಖ್ತರ್ ಪ್ರಶಸ್ತಿ- ೧೯೭೪.

೭. ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್- ೧೯೭೮.

೮. ಮಧ್ಯಪ್ರದೇಶದ ಪ್ರತಿಷ್ಠಿತ ತಾನ್‌ಸೇನ್ ಸಮ್ಮಾನ್ ಪ್ರಶಸ್ತಿ- ೧೯೮೪.

೯. ಗುಲಬರ್ಗಾ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್- ೧೯೮೯.

೧೦. ಬೆಂಗಳೂರು ಗಾಯನ ಸಮಾಜದ 'ಸಂಗೀತ ಕಲಾರತ್ನ' ಬಿರುದು- ೧೯೯೦.

೧೧. ಹಫೀಜ್ ಅಲೀಖಾನ್ ಸ್ಮಾರಕ ಪ್ರಶಸ್ತಿ-೧೯೯೦.

೧೨. ಕರ್ನಾಟಕ ಸರಕಾರದ 'ಕನಕ-ಪುರಂದರ ಪ್ರಶಸ್ತಿ'- ೧೯೯೩.



೧೩. ಅಸ್ಸಾಂ ಸರಕಾರದ 'ಶಂಕರದೇವ್ ಪ್ರಶಸ್ತಿ'-೧೯೯೪.

೧೪. ಹಂಪಿ ಕನ್ನಡ ವಿಶ್ವವಿದ್ಯಾಲಯದ 'ನಾಡೋಜ' ಗೌರವ ಡಾಕ್ಟರೇಟ್- ೧೯೯೫.

● **ಆರ್. ಶಿವಸಿಂಗ್**

## ಜ್ಞಾನನಿಧಿ

# ಸಾಬೂನು ಸಮಾಚಾರ

ಸಬಕಾರವನ್ನು ಮೊದಲು ಕಂಡುಹಿಡಿದವರು ಯಾರು? ಗ್ರೀಕರ, ರೋಮನ್ನರ ಅಥವಾ ಭಾರತೀಯರ? ಇವರಾರೂ ಅಲ್ಲ. ಅದನ್ನು ಕಂಡುಹಿಡಿದವರು ಈಗಿರುವ ಫ್ರಾನ್ಸಿನಲ್ಲಿ ವಾಸಿಸುತ್ತಿದ್ದ ಗೌಲ್ ಜನಾಂಗಕ್ಕೆ ಸೇರಿದವರು ಎನ್ನುತ್ತಾನೆ ಮೊದಲನೆಯ ಶತಮಾನದಲ್ಲಿ ಜೀವಿಸಿದ್ದ ಪ್ಲಿನಿ ಎಂಬ ರೋಮನ್ ಇತಿಹಾಸಕಾರ. ಸಸ್ಯಗಳ ಬೂದಿಗೆ ಎಣ್ಣೆಯನ್ನು ಬೆರಸಿ ಸೋಪನ್ನು ತಯಾರಿಸುತ್ತಿದ್ದರಂತೆ ಅವರು. ಸೋಪನ್ನು ತಯಾರಿಸುವ ಕಲೆ ಗೌಲರಿಂದ ಗ್ರೀಕರಿಗೂ ಗ್ರೀಕರಿಂದ ರೋಮನ್ನರಿಗೂ ಇಳಿದುಕೊಂಡು ಬಂತು. ಪ್ಲಿನಿಯ ಕಾಲದಲ್ಲ ಜ್ವಾಲಾಮುಖಿ ಸಿಡಿದು ಇಡಿ ಪಾಂಪೆ ಪಟ್ಟಣವೇ ಲಾವಾರಸದಲ್ಲಿ ಮುಳುಗಿಹೋಯಿತು. ಅನೇಕ ಶತಮಾನಗಳ ನಂತರ ಪುರಾತತ್ವಶಾಸ್ತ್ರಜ್ಞರು ಕಲ್ಲನ್ನು ಸೀಳಿ ಪಾಂಪೆಯನ್ನು ಅಗೆಯುತ್ತಿದ್ದಾಗ ಸಬಕಾರವನ್ನು ತಯಾರಿಸುತ್ತಿದ್ದ ಒಂದು ಕಾರಖಾನೆಯೇ ಅವರ ಕಣ್ಣಿಗೆ ಬಿತ್ತು. ಆ ಕಾರಖಾನೆಯಲ್ಲೊಂದು ಸಬಕಾರ ತಯಾರಿಸಲು ಬಳಸಲಾಗುತ್ತಿದ್ದ ಕೊಪ್ಪರಿಗೆ. ಪುರಾತತ್ವ ಶಾಸ್ತ್ರಜ್ಞರು ಆ ಕೊಪ್ಪರಿಗೆಯಲ್ಲಿ ಕೈಯಾಡಿಸಿದಾಗ ನೂರಾರು ವರ್ಷಗಳ ಹಿಂದೆ ತಯಾರಿಸಿದ ಒಂದಿಷ್ಟು ಸೋಪು ಕೊಪ್ಪರಿಗೆಯ ತಳದಿಂದ ಕಿತ್ತುಕೊಂಡು ಬಂತು!

● 'ದಾಸಯ್ಯ'




## ಉತ್ತರಗಳು

೧. ಶಾಮಲಾಲ್ ಪಾರ್ಷದ್.
೨. ವಾಲ್ ಡಿಸ್ನಿ--೩೧ ಪ್ರಶಸ್ತಿಗಳು.
೩. ಹಿರಾಲಾಲ, ಮಣಿಲಾಲ, ರಾಮದಾಸ ಮತ್ತು ದೇವದಾಸ.
೪. ವಿನೋಬಾ ಭಾವೆ.
೫. ಫೈಜಾಬಾದ್.
೬. ಆರ್.ಕೆ. ನಾರಾಯಣರ 'ದ ಫೈನಾನ್ಷಿಯಲ್ ಎಕ್ಸ್‌ಪರ್ಟ್' ಕಾದಂಬರಿ.
೭. ೧೯೨೦-೨೧ರ ಸುಮಾರಿಗೆ ಬ್ರಿಟಿಶರಿಂದ ಆಯಿತು. ವಾಸ್ತುಶಿಲ್ಪಿ ಎಡ್ವಿನ್ ಲುಟಿಯೆನ್ಸ್.
೮. ಏಪ್ರಿಲ್ ೧೫, ೧೯೯೪ ರಂದು; ಮೊರಕ್ಕೊದಲ್ಲಿ.
೯. ಸಪ್ಟಂಬರ್ ೧, ೧೯೪೭.
೧೦. ಶೇಕಡಾ ೫೨.೧೧.
೧೧. ರಾಷ್ಟ್ರೀಯ ಹೆದ್ದಾರಿ ಸಂಖ್ಯೆ ೨.
೧೨. ಅಂತಾರಾಷ್ಟ್ರೀಯ ಸಾಕ್ಷರತಾ ದಿನ.
೧೩. ೧೫ನೆಯ ಅಗಸ್ಟ್ ೧೯೮೨ ರಂದು ದೆಹಲಿಯಿಂದ.
೧೪. ರಕ್ತವನ್ನು ಹೆಪ್ಪುಗಟ್ಟಿಸುವ ಕಾರ್ಯ.
೧೫. ದಕ್ಷಿಣ ಕೋರಿಯಾ ಮತ್ತು ಬಹರಿನ್.
೧೬. ೧೯೩೪ರಲ್ಲಿ ಬಂಗಾಳಿಯ 'ಭಾಗ್ಯ ಚಕ್ರ' ಎಂಬ ಚಲನಚಿತ್ರದಿಂದ.
೧೭. 'ಸಂಸಟ್ ಮೇ ತೀನ್ ದಶಕ್'.
೧೮. ಏಪ್ರಿಲ್ ೧, ೧೯೩೫.
೧೯. ಸ್ವಿಟ್ಜರ್‌ಲೆಂಡ್.
೨೦. ಏಪ್ರಿಲ್ ೧೯೭೫.

# ನಿಮ್ಮ ಶಬ್ದಭಾಂಡಾರ ಬೆಳೆಯಲಿ

## ಶಬ್ದ ಭಾಂಡಾರವು ಹಣದ ಭಾಂಡಾರಕ್ಕಿಂತಲೂ ಅಮೂಲ್ಯವಾಗಿದೆ

ಪ್ರತಿ ತಿಂಗಳೂ ಇಲ್ಲಿ ಕೆಲವು ಶಬ್ದಗಳ ಪರಿಚಯ ಮಾಡಿಕೊಡಲಾಗುವುದು. ಆಯಾ ಶಬ್ದದ ಮುಂದೆ ನಾಲ್ಕು ಅರ್ಥಗಳನ್ನು ಕೊಟ್ಟಿದ್ದು ಅವುಗಳಲ್ಲಿ ಒಂದು ಮಾತ್ರ ಸರಿಯಾಗಿರುತ್ತದೆ. ನಿಮಗೆ ಸರಿಯೆನಿಸಿದ ಅರ್ಥವನ್ನು ಮೊದಲು ಆರಿಸಿಕೊಳ್ಳಿರಿ. ಆಮೇಲೆ ಇದರ ಬೆನ್ನಿನ ಪುಟ ನೋಡಿರಿ. ಅಲ್ಲಿ ಸರಿಯಾದ ಅರ್ಥವನ್ನು ವಿವರಿಸಿದೆ.

೧. ಕ್ರತುಶಕ್ತಿ
(ಅ) ಹರಿತವಾಗಿರುವುದು
(ಆ) ಇಂದ್ರ
(ಇ) ದಕ್ಷತೆ
(ಈ) ಯಜ್ಞದೇವತೆ

೨. ಕಃಪದಾರ್ಥ
(ಅ) ಹತ್ತಿಯ ಬಟ್ಟೆ
(ಆ) ಕರಿ ವಸ್ತು
(ಇ) ಒಂದು ಔಷಧ
(ಈ) ಕ್ಷುಲ್ಲಕ ವಸ್ತು

೩. ಮೀನಮೇಷ
(ಅ) ನಿರ್ಧಾರವಿಲ್ಲದಿರುವುದು
(ಆ) ಒಳ್ಳೆ ಮುಹೂರ್ತ
(ಇ) ಕೆಟ್ಟ ಮುಹೂರ್ತ
(ಈ) ನಿರರ್ಥಕ

೪. ಪುನರುಕ್ತಿ
(ಅ) ನೆತ್ತರ ಧಾರೆ
(ಆ) ಪ್ರೀತಿ
(ಇ) ಹೇಳಿದ್ದನ್ನೇ ಹೇಳುವುದು
(ಈ) ಮುತ್ತಿನ ಚಿಪ್ಪು

೫. ಬಯಲಾಸೆ
(ಅ) ಹೊಲಮನೆ ಮಾಡುವ ಆಸೆ
(ಆ) ವ್ಯರ್ಥವಾದ ಅಪೇಕ್ಷೆ
(ಇ) ಆಕಾಶ
(ಈ) ಮೋಕ್ಷದ ಇಚ್ಛೆ

೬. ವಿಷ(ಮ) ವರ್ತುಲ
(ಅ) ಪಾರಾಗಲಾರದ ಪೇಚು
(ಆ) ಸರ್ಪನಿಗೆ ಹಾಕಿದ ಮಂತ್ರದ ಗೆರೆ
(ಇ) ದುಷ್ಟರ ಕೂಟ
(ಈ) ಗುಪ್ತಕಾರಸ್ಥಾನ

೭. ಕಿತ್ತಡಿ
(ಅ) ಮುನಿ
(ಆ) ತೂಕದ ತ್ರಾಸು
(ಇ) ಮುರಿದ ಕಾಲು
(ಈ) ಆಚೆಯ ದಡ

೮. ಉಭಯ ಸಂಕಟ
(ಅ) ಸಂಕಟದ ಹೆದರಿಕೆ
(ಆ) ಹೇಗೆ ಮಾಡಿದರೂ ಕಷ್ಟವಾಗ ಪರಿಸ್ಥಿತಿ
(ಇ) ಕಷ್ಟ ಪರಂಪರೆ
(ಈ) ದೈವೀ ಪ್ರಕೋಪ

೯. ಎಲ್ಲೆ
(ಅ) ನಾಳೆ
(ಆ) ಯಾವ ಸ್ಥಳದಲ್ಲಿ
(ಇ) ಕರಗುವಿಕೆ
(ಈ) ಗಡಿ

೧೦. ಕೂಟಪ್ರಶ್ನೆ
(ಅ) ಜಾತಕ ತಾಳೆ ನೋಡುವುದು
(ಆ) ಗಂಡಹೆಂಡಿರ ಸಮಸ್ಯೆ
(ಇ) ಬಿಡಿಸಲಾರದ ಪ್ರಶ್ನೆ
(ಈ) ಜ್ಯೋತಿಷ ಕೇಳುವುದು

೧೧. ಸೌಜನ್ಯ
(ಅ) ಒಳ್ಳೆಯತನ
(ಆ) ಗುರುತು
(ಇ) ಸುಖಿ
(ಈ) ಕಂಪು

೧೨. ಒಳಗುದಿ
(ಅ) ಗುಟ್ಟಾಗಿ ಗುದ್ದು
(ಆ) ಗುಪ್ತ ವ್ಯಥೆ
(ಇ) ಒಳಗೆ ಸೇರಿಸುವಿಕೆ
(ಈ) ಮೋಸ

# ಶಬ್ದ ಭಾಂಡಾರದ ಸರಿಯಾದ ಅರ್ಥಗಳು

೧. ಕ್ರತುಶಕ್ತಿ

(ಇ) ದಕ್ಷತೆ, ಮಹಾ ಕಾರ್ಯಗಳನ್ನು ಸಾಧಿಸಬಲ್ಲ ಯೋಗ್ಯತೆ (ಸಂ. ಕ್ರತು=ಯಜ್ಞ, ಶಕ್ತಿ- ಅಂದರೆ ಯಜ್ಞದಂಥ ದುಷ್ಕರವಾದ ಕಾರ್ಯ ಸಾಧಿಸುವ ಯೋಗ್ಯತೆ.)

೨. ಕಃಪದಾರ್ಥ

(ಈ) ಕ್ಷುಲ್ಲಕ ವಸ್ತು, ನಿಷ್ಪ್ರಯೋಜಕವಾದದ್ದು. ಉದಾ: ಅವನೆಂದರೆ ಇವನಿಗೆ ಕಃಪದಾರ್ಥದಂತೆ.

೩. ಮೀನಮೇಷ

(ಅ) ನಿರ್ಧಾರವಿಲ್ಲದಿರುವುದು, ಸಂದಿಗ್ಧ ಬುದ್ಧಿ. ಉದಾ: ಈ ವಿಷಯದಲ್ಲಿ ಮೀನಮೇಷ ಎಣಿಸುತ್ತಿದ್ದರೆ ಕೊನೆಗೆ ಕಾರ್ಯಹಾನಿಯೇ ಸೈ. (ಮೀನ, ಮೇಷ ಎಂದು ಜ್ಯೋತಿಷ ಎಣಿಸುತ್ತಿದ್ದುದು ಎಂಬುದರಿಂದ)

೪. ಪುನರುಕ್ತಿ

(ಇ) ಒಮ್ಮೆ ಹೇಳಿದ್ದನ್ನೇ ಮತ್ತೆ ಹೇಳುವುದು ಉದಾ: ಅವನ ಲೇಖನದಲ್ಲಿ ಪುನರುಕ್ತಿ ಬಹಳ. (ಸಂ. ಪುನಃ=ಮತ್ತೆ, ಉಕ್ತಿ=ಮಾತು.)

೫. ಬಯಲಾಸೆ

(ಅ) ವ್ಯರ್ಥವಾದ ಅಪೇಕ್ಷೆ, ಎಂದೂ ಕೈಗೂಡಲಾರದ ಆಸೆ, ಹುಸಿ ಹಂಬಲ. (ಕನ್ನಡ ಬಯಲು=ಶೂನ್ಯ+ಆಸೆ)

೬. ವಿಷ(ಮ) ವರ್ತುಲ

(ಅ) ಪಾರಾಗಲಾರದ ಪೇಚು, ಒಮ್ಮೆ ಸಿಕ್ಕಿಕೊಂಡರೆ ಎಲ್ಲಿಯೂ ಹೊರಬೀಳುವ ಅವಕಾಶವಿಲ್ಲದ ಸಂಕಟ, ಒಂದು ತಪ್ಪಿನಿಂದ ಇನ್ನೊಂದು ತಪ್ಪಿಗೆ ಸಾಗಬೇಕಾದ ಪರಿಸ್ಥಿತಿ, ಸುಳಿ. ಉದಾ: ಬಡತನದಿಂದ ಪಾಪ, ಪಾಪದಿಂದ ಬಡತನ ಇದೊಂದು ವಿಷ(ಮ) ವರ್ತುಲ (Vicious circle) ಎಂಬ ಇಂಗ್ಲಿಷ್ ಪದಗಳ ಯಥಾವತ್ ಕನ್ನಡ ರೂಪಾಂತರ)

೭. ಕಿತ್ತಡಿ

(ಅ) ಮುನಿ, ಋಷಿ, ಸಂನ್ಯಾಸಿ, ತಪಸ್ವಿ. (ಕನ್ನಡ. ಕಿತ್ತು- ಸುಣ್ಣ, ಅಡಿ=ಹೆಜ್ಜೆ- ಎಂದರೆ ಜಾಗರೂಕವಾಗಿ ಹೆಜ್ಜೆ ಇಕ್ಕುವ)

೮. ಉಭಯ ಸಂಕಟ

(ಅ) ಹೇಗೆ ಮಾಡಿದರೂ ಕಷ್ಟವಾದ ಪರಿಸ್ಥಿತಿ, ಎರಡೂ ಕಡೆ ಕಷ್ಟವಿರುವಿಕೆ. ಉದಾ: ಹೆಂಡತಿಯ ಮಾತು ಕೇಳಿದರೆ ಅಪಕೀರ್ತಿ, ತಾಯಿಯಂತಾದರೆ ಅನ್ಯಾಯ ಈ ಉಭಯ ಸಂಕಟದಲ್ಲಿ ಸಿಕ್ಕಿ ಒದ್ದಾಡಿದನವನು) (ಸಂ. ಉಭಯ=ಎರಡೂ (ಕಡೆ) ಸಂಕಟ)

೯. ಎಲ್ಲೆ

(ಈ) ಗಡಿ, ಮಿತಿ, ಸೀಮೆ, ಹದ್ದು. ಉದಾ: ಎಲ್ಲೆಯಿಲ್ಲದ ದುರಾಶೆಯಿಂದ ಆತ ಕೆಟ್ಟ. (ಕನ್ನಡ).

೧೦. ಕೂಟಪ್ರಶ್ನೆ

(ಇ) ಬಿಡಿಸಲಾರದ ಸಮಸ್ಯೆ, ಜಟಿಲವಾದ ಪ್ರಶ್ನೆ (ಸಂ. ಕೂಟ=ಮೋಸದ ಪ್ರಶ್ನೆ).

೧೧. ಸೌಜನ್ಯ

(ಅ) ಒಳ್ಳೆಯತನ, ವಿನಯ, ಸ್ನೇಹ, ಔದಾರ್ಯ, ದಯೆ. (ಸಂ. ಸು=ಒಳ್ಳೆಯ ಜನ=ಮನುಷ್ಯ ಎಂಬುದರಿಂದ)

೧೨. ಒಳಗುದಿ

(ಅ) ಗುಪ್ತ ವ್ಯಥೆ, ಬಾಯ್ಬಿಟ್ಟು ಹೇಳಲಾರದ ಕಷ್ಟ, ಅಂತರಂಗದ ಮತ್ಸರ. (ಕ. ಒಳ+ಕುದಿ)

## ನಿಮ್ಮ ಶಬ್ದಶಕ್ತಿಯ ತರಗತಿ

ನೀವು ಶಬ್ದಗಳಿಗೆ ಅರ್ಥ ಆರಿಸಿದ್ದು ಸರಿಯಾಗಿದೆಯೆಂದು ಎಣಿಸಿ ಕೆಳಗಿನಂತೆ ನಿಮ್ಮ ಶಬ್ದಶಕ್ತಿಯ ತರಗತಿಗಳನ್ನು ತಿಳಿಯಿರಿ.

೬-೮ ಸರಿಯಿದ್ದರೆ ... ಸಾಧಾರಣ

೯-೧೦ ಸರಿಯಿದ್ದರೆ ... ಉತ್ತಮ

೧೧-೧೨ ಸರಿಯಿದ್ದರೆ ... ಅತ್ಯುತ್ತಮ

"ಆತ ಬದುಕಿದ್ದಾನೆಯೆ?"

"ಬದುಕಿದ್ದರೆ ಬರುತ್ತಿದ್ದನಲ್ಲ...."

"ಸತ್ತಿದ್ದಾನೆನ್ನುತ್ತೀರಾ?"

"ಹಾಗಾಗಿದ್ದರೆ ಶವವಾದರೂ ಸಿಕ್ಕಬೇಕಾಗಿತ್ತು..."

"ತುಂಬ ಗಟ್ಟಿಮನಸ್ಸಿನವನ್ರೀ ಆತ..."

"ಹೌದು. ಸದೃಢ ಆರೋಗ್ಯದವ ಕೂಡ..."

"ಅಂಥವ ಹೀಗೆ ತಲೆ ಮರೆಸಿಕೊಳ್ಳುವುದು ಸಾಧ್ಯವೆ?"

"ನಾವೂ ಅದನ್ನೇ ಅಂದ್ಕೋತಿದ್ದೀವಿ..."

"ಛೆ.... ಎಲ್ಲಿದ್ದಾನೋ.... ಹೇಗಿದ್ದಾನೋ..."

"ಆ ಪರಮಾತ್ಮನಿಗೇ ಗೊತ್ತು..."

"ಪೊಲೀಸರಿಗೂ ಪತ್ತೆಯಾಗಿಲ್ಲ ಅಂದರೆ..."

"ಎಂಥಾ ನಿಗೂಢ ಕಣ್ಮರೆ ನೋಡಿ..."

" 'ಇದ್ದಾನೆ-ಇಲ್ಲ,' ಎರಡರೊಳಗೊಂದು ಗೊತ್ತಾಗೋದಾದ್ರೆ ಈ ಚಿಂತೆಯಿಂದ ಮುಕ್ತಿಯಾದ್ರೂ ಸಿಗುತ್ತೆ...."

"ಹಾಗೇಂತ ನಿಖರವಾಗಿ ಹೇಳೋದು ಪೀಟರ್ ಮಹಾಶಯನಿಂದ ಮಾತ್ರ ಸಾಧ್ಯ..."

"ಅವನನ್ನಾದ್ರೂ ಕೇಳೋಣ್ವೆ?"

" ಮೊದಲು ಪೊಲೀಸರು ಏನ್ಮಾಡ್ತಾರೋ ನೋಡೋಣ..."



೨

## ಎಕ್ಸ್-ರೇ ಕಣ್ಣಿನ ಮನುಷ್ಯ !

• ಗೋವಾ

೧೯೫೮ರ ಎಪ್ರಿಲ್ ತಿಂಗಳು. ಬೆಲ್ಜಿಯನ್ ಭೂಗತರಲ್ಲಿ ದೈತ್ಯನೆನಿಸಿಕೊಂಡಿದ್ದ ಜಾರ್ಜಸ್ ಕೊರ್ನೆಲಿಸ್ ಬೆಳಕು ಮೂಡುವ ಹೊತ್ತಿಗೆ ಘೆಂಟ್ ನಗರದಿಂದ ನಾಪತ್ತೆಯಾಗಿದ್ದ. ಕೌಟುಂಬಿಕವಾಗಿ ಯಾವ ತೊಂದರೆಯೂ ಇಲ್ಲದ, ಆರ್ಥಿಕವಾಗಿಯೂ ಸಮಸ್ಯೆಯಿರದ ಕೊರ್ನೆಲಿಸ್ ಎಲ್ಲಿ ಹೋದ? ಯಾಕೆ ಹೋದ? ಹತ್ತು-ಹದಿನೈದು ದಿನಗಳವರೆಗೂ ಪೊಲೀಸರು ತಲೆ ಕೆರೆದುಕೊಂಡರು.

ಕೊರ್ನೆಲಿಸ್ ಕಾಣದ ಹಾಗೆ ಹೊರಟು ಹೋಗಿ ಸರಿಯಾಗಿ ಎರಡು ವಾರಗಳ ನಂತರ ಲೀಯಿ ನದಿಯ ಮೇಲಿನ ಫೆರ್ರಿಯ ಕ್ಯಾಪ್ಟನ್ ಹೈರಾಣಾಗಬೇಕಾದ ಪ್ರಸಂಗ. ಆತನ ಫೆರ್ರಿಯು ಡ್ರಾಂಜೆನ್ ಎಂಬ ಗ್ರಾಮ ಮತ್ತು ಘೆಂಟ್ ನಗರಗಳ ನಡುವೆ ಜನ-ಜಾನುವಾರು-ಮಾಲುಗಳನ್ನು ಹೇರಿಕೊಂಡೊಯ್ದು ಮುಟ್ಟಿಸುತ್ತಿತ್ತು. ಆ ದಿನ ಆತನಿಗೆ

## "ಆ ಬೆಕ್ಕ ತ್ರಲೆಯುವ ಸತ್ತಿರುವುದು ನಿಜ..."

ಫೆರ್ರಿಯ ಲಂಗರು ಯಾಕೋ ಗೂಟ ಹೊಡೆದು ಕಟ್ಟಲ್ಪಟ್ಟದೆಯೆಂಬಂಥ ಅನಿಸಿಕೆಯನ್ನುಂಟು ಮಾಡಿತು. ತುಂಬ ತಿಣುಕಿದ ನಂತರ ಮೇಲೆತ್ತಲ್ಪಟ್ಟ ಲಂಗರಿಗೆ ಪುರುಷನೊಬ್ಬನ ಶವ ಸಿಕ್ಕಿಕೊಂಡಿತ್ತು.

ಪೊಲೀಸರಿಗೆ ವರದಿ ಹೋಯಿತು. ಶವದ ಮೈ ಮೇಲಿನ ಜಾಕೆಟ್ಟಿನ ಜೇಬಿನಲ್ಲಿದ್ದ ಪರ್ಸ್, ಸತ್ತಾತ ಜಾರ್ಜಿಯಸ್ ಕೊರ್ನೆಲಿಸ್ ಎಂದು ಸಾರಿತು. ಶವದ ತಲೆ ಸಂಪೂರ್ಣ ಜಜ್ಜಲ್ಪಟ್ಟು ಶರೀರದಲ್ಲೆಲ್ಲ ಗಾಯದ ಗುರುತುಗಳು ಕಂಡುವು. ಹೀಗಾದದ್ದು ಸಾವಿಗೆ ಮುನ್ನವೇ- ನಂತರವೇ ಎಂಬುದನ್ನು ಮಾತ್ರ ಪೊಲೀಸು ಸರ್ಜನ್‌ನಿಂದ ಪತ್ತೆ ಹಚ್ಚಲಾಗಲಿಲ್ಲ. ಮನೆಯಿಂದ ಹೊರಟಾಗ ಆತ ತೊಟ್ಟಿದ್ದ ಬಟ್ಟೆ ನೀಟಾಗಿಯೇ ಇತ್ತಾದರೂ ಎಡಗಾಲಿನ ಬೂಟು ಮಾತ್ರ ನಾಪತ್ತೆಯಾಗಿತ್ತು.

ಪೊಲೀಸು ವರದಿ ಸಿದ್ಧವಾಗಲೇನು ತಡ? "ಅಸಹಜ ಸಾವು." ಎರಡೇ ಪದಗಳು.

ಆದರೆ ಕೊರ್ನೆಲಿಸ್‌ನ ಪರಿವಾರದವರಿಗೆ ವರದಿ ಸಮರ್ಪಕವೆನಿಸಲಿಲ್ಲ. "ಇದು ಕೊಲೆ" ಎಂಬುದವರ ಸಂಶಯ. ಯುದ್ಧ ಕಾಲದಲ್ಲಿ ಕೊರ್ನೆಲಿಸ್ ಎಂದರೆ ಕೆಂಡಕಾರುವವರ ಸಂಖ್ಯೆ ಹೆಚ್ಚಿತ್ತು. ಜರ್ಮನರು ಮತ್ತು ಅವರಿಗೆ ಸಹಾನುಭೂತಿ ಸೂಚಿಸುತ್ತಿದ್ದ ಕೆಲವು ಬೆಲ್ಜಿಯನ್ನರು ಕೊರ್ನೆಲಿಸ್‌ನ ಹೆಚ್ಚೆಯೆಣಿಸುತ್ತಿದ್ದುದೂ ಮನೆ ಜನಕ್ಕೆ ಗೊತ್ತಿತ್ತು. ಆದರೆ ಇಲ್ಲಿ ಅದು ಕೊಲೆ ಎಂದು ಸಾಬೀತು ಮಾಡಲಿಕ್ಕೆ ಪುರಾವೆಗಳು ಸಿಕ್ಕರೆ ತಾನೆ? ಪರಿವಾರದ ಜನ ಪೊಲೀಸರಿಗೆ ದುಂಬಾಲು ಬಿದ್ದರು. ಪೊಲೀಸರು ಪುರಾವೆಗಳಿಗಾಗಿ ಪರದಾಡಿದರು. ಸಿಕ್ಕದೇ ಹೋದಾಗ ಫೈಲು ಮುಚ್ಚಿ ಕಟ್ಟಿಟ್ಟು ಬಿಟ್ಟರು.

ಇದೆಲ್ಲ ನಡೆದ ಹೊತ್ತಿನಲ್ಲೆ ಪೀಟರ್ ಅದೇ ಊರಲ್ಲಿ ತನ್ನ ಪ್ರದರ್ಶನಗಳನ್ನು ನೀಡುತ್ತಿದ್ದ. ಅಂಥದೊಂದು ಪ್ರದರ್ಶನ ಸಂದರ್ಭದಲ್ಲಿ ಯಾರೋ ಬಂದಾದ ಲಕೋಟೆಯನ್ನು ಪೀಟರ್‌ನ ಕೈಗಿತ್ತರು. ಫೆಂಟ್ ತಲುಪುವಷ್ಟರಲ್ಲೇ ಪೀಟರ್ ಹೊಸ ಆಕರ್ಷಣೆಯೊಂದನ್ನು ಅಳವಡಿಸಿಕೊಂಡಿದ್ದ. ಪ್ರೇಕ್ಷಕರು ಬಂದಾದ ಲಕೋಟೆಯಲ್ಲಿ ಫೋಟೋಗಳನ್ನಿಟ್ಟುಕೊಟ್ಟರೆ ಅದನ್ನು ಬಿಚ್ಚದೆಯೇ ಒಳಗಿದ್ದ ಚಿತ್ರದಲ್ಲಿನ ವ್ಯಕ್ತಿಯ ಕುರಿತಾದ ಎಲ್ಲ ವಿವರಗಳನ್ನೂ ಹೇಳಿಬಿಡುವುದು. ಇದು ಆತನ 'ದಿವ್ಯದೃಷ್ಟಿ'ಯ ಸಾಮರ್ಥ್ಯಕ್ಕೆ ಮತ್ತೊಂದು ಹೆಗ್ಗಳಿಕೆ ಎನ್ನಿಸಿತು.

ಆ ಲಕೋಟೆ ಕೈಗೆ ಬಂದದ್ದೇ ತಡ, ಅದನ್ನು ಕೊಟ್ಟ ವ್ಯಕ್ತಿಯನ್ನು ಕುಳಿತಲ್ಲಿಯೇ ಎದ್ದು ನಿಲ್ಲುವಂತೆ ಕೇಳಿಕೊಂಡ ಪೀಟರ್. ಆತ ಹಾಗೆ ಮಾಡಿದಾಗ ಪೀಟರ್ ಹೇಳಿದ್ದೇನು ಗೊತ್ತೆ? "ನಾನು ಮೃತ ವ್ಯಕ್ತಿಯೊಬ್ಬನನ್ನು ನೋಡಿದೆ." ಅಷ್ಟೇ ಅಲ್ಲ, ಪಟಪಟನೆ ಹೇಳುತ್ತಲೇ ಹೋದ, "ಆತ ಮುಳುಗಿ ಸತ್ತ ಅಂತ ನೀವಂದ್ಕೊಂಡಿದೀರಿ. ಆದ್ರೆ ಆತ ಕೊಲ್ಲಲ್ಪಟ್ಟ. ಹೆಣಬೀಳ ಹೊಡೆದರು. ತಲೆ ಜಜ್ಜಿದರು. ನಂತರ ನದಿ ಪಾಲು ಮಾಡಿದರು...."

ಪ್ರದರ್ಶನ ಮುಗಿದ ಮೇಲೆ ಒಂದಷ್ಟು ಜನ ಪೀಟರ್‌ನನ್ನು ಕಂಡರು. ಕೊರ್ನೆಲಿಸ್‌ನ ಪರಿವಾರದ ಜನ. "ಈ ಕೊಲೆಯ ಸಂಬಂಧದಲ್ಲಿ ದಯವಿಟ್ಟು ಪೊಲೀಸರೊಂದಿಗೆ ಚರ್ಚಿಸುವಿರಾ?" ಅವರ ವಿನಂತಿಯನ್ನು ತಿರಸ್ಕರಿಸಲಾರದವನಾದ ಪೀಟರ್.

ಠಾಣೆಯಲ್ಲಿ....

ತಾನು ಕೇಳಿದ್ದಕ್ಕೆಲ್ಲ ಪೂರ್ಣತ್ತರಾಗೇ ಉತ್ತರಿಸಿದರಾದರೂ ಪೊಲೀಸರು ಸಂದೇಹದ ಮುದ್ದೆಗಳಾಗಿದ್ದರೆಂಬುದನ್ನು ಪೀಟರ್ ಗಮನಿಸಿದ. ಈತ ಮೃತನ ಯಾವುದಾದರೂ ವಸ್ತು ಬೇಕೆಂದ. ಶವದ ಬಲಗಾಲಿನಲ್ಲಿ ದೊರೆತ ಆ ಬೂಟನ್ನಿತ್ತರು. "ಆಹಾ! ಹಾಲೆಂಡಿನ ಬ್ರೇಡಾಗೆ ಓಡಿಹೋಗಿದ್ದೀರಾ? ನನ್ನ ದೇಶಕ್ಕೆ.... ಬರುತ್ತೇನೆ ಇರಿ." ವಟಗುಟ್ಟಿದ ಪೀಟರ್.

ಬ್ರೇಡಾ ಪೊಲೀಸರು ನೆರವಿಗೆ ನಿಂತರು. "ನಾಲ್ಕು ಹಸ್ತಕರ ಫೋಟೋಗಳು ದೊರೆಯಬಹುದೆ?" ಅವರು ಅವನ್ನೂ ಒದಗಿಸಿದರು. ಬೆನ್ನು ಮೇಲಾಗಿಟ್ಟ ಅವುಗಳನ್ನು ಒಂದೊಂದಾಗಿ ಮುಟ್ಟಿದ ಪೀಟರ್. ಎರಡು ಫೋಟೋಗಳು ಮಾತ್ರ ಕಂಪಿಸಿದುವು. "ಹಾಂ.... ಇವರೇ ಕೊರ್ನೆಲಿಸ್‌ನನ್ನು ಕೊಂದವರು." ಆರ್ಕಿಮಿಡಿಸ್‌ನಂತೆ ಅರಚಿಕೊಂಡ ಎಕ್ಸ್-ರೇ ಕಣ್ಣಿನ ಮನುಷ್ಯ.

ಪೊಲೀಸರು ಪಾತಾಳಗರುಡಿ ಪ್ರಯೋಗಿಸಿದರು. ಬಲೆಯ ಕಣ್ಣಿಗಿಂತ ಸಣ್ಣ ಮೀನುಗಳಾಗಿ ಪಾತಕಿಗಳಿಬ್ಬರೂ ಜಾರಿಕೊಂಡು ಹೋದದ್ದು ಅವರಿಗಿನ್ನೊಂದು ಆತಂಕ. ಅವರಿಬ್ಬರು ಸಿಕ್ಕದೆ ವಿಚಾರಣೆ ಸಾಧ್ಯವಿಲ್ಲ. ತಲೆ ಮರೆಸಿಕೊಂಡ ಅವರಿಬ್ಬರನ್ನೂ ಹುಡುಕುವುದು ಅಷ್ಟು ಸಲಭವೂ ಆಗಿರಲಿಲ್ಲ. ಫೈಲು ಕಟ್ಟಿಟ್ಟು ಬಿಡುವ ನಿರ್ಧಾರ ಪೊಲೀಸರದು. ಪೀಟರ್ ಸುಮ್ಮ ನುಳಿಯುವ ಜಾಯಮಾನದವನೆ?

ಆತ ಮತ್ತೆ ಪಾತಕಿಗಳ ಫೋಟೋಗಳೊಂದಿಗೆ 'ಮಾತನಾಡಿದ.'

"ಆ್ಯಂಟ್ವರ್ಪ್‌ನಲ್ಲಿದ್ದಾರೆ."

"ಅಲ್ಲಿಯ ನಮ್ಮ ಸಹೋದ್ಯೋಗಿಗಳಿಗೆ ಸುದ್ದಿ ಕಳಿಸೋಣವೆ?"

"ಊಹುಂ. ಸುದ್ದಿ ಸೋರಿಯಾಗುವ ಸಂಭವವಿದೆ."

"ಹಾಗಾದರೇನು ಮಾಡೋಣ?"

"ಪೊಲೀಸು ವೇಷ ಬಿಟ್ಟು ಅಲ್ಲಿಗೆ ಹೋಗಿ. ಒಮ್ಮೆಲೇ ದಾಳಿ ಮಾಡಬೇಡಿ. ನಾಲ್ಕು ದಿನಗಳ ನಂತರ ನಶೆಯಲ್ಲಿ ಮುಳಗಿದ ಹೊತ್ತಿನಲ್ಲಿ ಅವರು ಸಿಕ್ಕಿಬೀಳುತ್ತಾರೆ."

ಪೀಟರ್ ಹೇಳಿದ್ದು ನಿಜವಾಯಿತು. ನಶೆಯಿಂದ ನಿರ್ವಿಣ್ಣರಾದ ಪಾತಕಿಗಳಿಬ್ಬರೂ ಘೆಂಟ್‌ಗೆ ತರಲ್ಪಟ್ಟರು.

* * *

ಪ್ಯಾರಿಸ್‌ನಲ್ಲೊಂದು ಪ್ರದರ್ಶನ. ಅಲ್ಲಿಯ ಮಾಜಿ ಯೋಧರ ಸಂಘದ ಸಹಾಯಾರ್ಥ ನಡೆದ ಆ ಪ್ರದರ್ಶನಲ್ಲಿ ಹಾಜರಿದ್ದವರು ಸರಿಯಾಗಿ ೧೧೦೦೦ ಜನ. ಫ್ರಾನ್ಸ್‌ನಲ್ಲಿ ಅಷ್ಟು ಜನರೆದುರು ಪೀಟರ್ ನಿಂತದ್ದು ಅದೇ ಮೊದಲು. ಮರುದಿನದ ಪತ್ರಿಕೆಗಳಲ್ಲೆಲ್ಲ ಪೀಟರ್ ಪರಾಕ್ರಮದ ಸುದ್ದಿಗೆ ಅಗ್ರಪ್ರಾಶಸ್ತ್ಯ. ಅಂದೇ ಸಂಜೆ ತಾನು ತಂಗಿದ್ದ ಹೊಟೇಲ್ ಲಾಂಡರ್ಸ್‌ನಲ್ಲಿ ಪತ್ರಿಕಾಗೋಷ್ಠಿ ಕರೆದ ಪೀಟರ್.

ಈ ಹೊತ್ತಿಗಾಗಲೇ ಏಳು ಭಾಷೆಗಳಲ್ಲಿ ಮಾತನಾಡಬಲ್ಲ ಸಾಮರ್ಥ್ಯವನ್ನಾತ ಪಡೆದಾಗಿತ್ತು. ಮಾತೃಭಾಷೆ ಡಚ್ ಅಂತೂ ಸರಿಯೇ. ಜರ್ಮನ್ ಭಾಷೆಯಲ್ಲಾತ ಮಾತನಾಡಿ ಜರ್ಮನ್ ಸೈನ್ಯಾಧಿ

> **ನೆಮ್ಮದಿ**
>
> ಸ್ವಾತಂತ್ರ್ಯ ಬದುಕಿನ
> ಆಗಸದಲ್ಲಿ
> ನೆಮ್ಮದಿಯ ಸೂರ್ಯ
> ಮೂಡಲೇ ಇಲ್ಲ!
>
> • ಕೃಷ್ಣಮೂರ್ತಿ ಕಾಟ

ಕಾರಿಗಳಿಗೆ ಚಳ್ಳೆ ಹಣ್ಣು ತಿನ್ನಿಸಿದ್ದೂ ನಿಮಗೆ ಗೊತ್ತು. ಫ್ಲೆಮಿಶ್, ಸ್ಪ್ಯಾನಿಶ್, ಚೀನೀ ಮತ್ತು ಇಂಗ್ಲಿಷ್‌ಗಳನ್ನೂ ಕರಗತ ಮಾಡಿಕೊಂಡಿದ್ದ. ಫ್ರಾನ್ಸ್ ತಲಪುವ ಹೊತ್ತಿಗೆ ಫ್ರೆಂಚ್ ಭಾಷೆಯಲ್ಲೂ ಮಾತಾಡುವುದನ್ನು ರೂಢಿಸಿಕೊಂಡಿದ್ದ. ಪತ್ನಿ ಮಾರಿಯಾ ಒಂದು ರೀತಿಯಲ್ಲಿ ಪೀಟರ್‌ಗೆ ಭಾಷಾ ಶಿಕ್ಷಕಿ. ಗಂಡನಿಗೆ ಫ್ಲೆಮಿಶ್, ಸ್ಪ್ಯಾನಿಶ್, ಇಂಗ್ಲಿಷ್‌ಗಳನ್ನು ಹೇಳಿಕೊಟ್ಟದ್ದ ಆಕೆ ಫ್ರೆಂಚ್ ಭಾಷೆಯಲ್ಲಿ ಮಾತಾಡುವ ರೂಢಿ ಮಾಡಿಸಲು ಹಗಲಿರುಳು ಶ್ರಮಿಸಿದಳು.

ಈ ಬಹು ಭಾಷಾ ಪಾಂಡಿತ್ಯದ ಫಲವಾಗಿಯೇ ಪೀಟರ್ ಯುರೋಪಿನ ಅನೇಕ ರಾಷ್ಟ್ರಗಳಲ್ಲಿ ಪ್ರದರ್ಶನ ನೀಡಲು, ಜನಮನ ಗೆಲ್ಲಲು ಸಾಧ್ಯವಾಯಿತು. ಸಾರ್ವಜನಿಕ ಪ್ರದರ್ಶನಗಳೊಂದಿಗೆ ಖಾಸಗಿ ಪ್ರಕರಣಗಳು, ಅಪರಾಧ ಪತ್ತೆಯಲ್ಲಿ ನೆರವು ಇತ್ಯಾದಿ.

ಪತ್ರಿಕಾಗೋಷ್ಠಿಯ ಪರಿಣಾಮ ಪೀಟರ್‌ಗೆ ವಿರುದ್ಧವಾಗಿತ್ತು. ಮರುದಿನ ಫ್ರೆಂಚ್ ರಾಷ್ಟ್ರೀಯ ಪೊಲೀಸು ಪಡೆಯ ಮುಖ್ಯಸ್ಥರಿಂದ ಫೋನು.

"ಮನರಂಜನಾ ಕಾರ್ಯಕ್ರಮ ನಡೆಸಲು ಲೈಸನ್ಸ್ ಪಡೆದಿದ್ದೀರಾ?"

ಅಂಥ ಲೈಸೆನ್ಸ್ ತನ್ನ ಬಳಿ ಇರಲಿಲ್ಲವಾದ್ದರಿಂದ ಪೀಟರ್ ನಿರುತ್ತರನಾದ.

"ನೀವು ಲೈಸೆನ್ಸಿಲ್ಲದೆ ಕಾರ್ಯಕ್ರಮ ನಡೆಸಿ ಕಾನೂನಿಗೆ ವಿರುದ್ಧವಾಗಿ ನಡೆದುಕೊಂಡಿದ್ದೀರಿ," ಪೊಲೀಸು ಅಧಿಕಾರಿ ದರ್ಪ ಮೆರೆದ.

"ನಾನು ನೀಡಿದ್ದು ವೃತ್ತಿಪರ ಕಾರ್ಯಕ್ರಮವಲ್ಲ, ಅದರಿಂದ ನಾನು ಹಣ ಮಾಡಿಕೊಂಡಿಲ್ಲ. ಜನರ ಕಲ್ಯಾಣಾರ್ಥ ಕಾರ್ಯಕ್ರಮ

ಇದು. ನಿಮಗೇ ಗೊತ್ತಿರುವಂತೆ ನನ್ನ ಪ್ರದರ್ಶನ ಮಾಜಿ ಯೋಧರ ಸಂಘದ ಸಹಾಯಾರ್ಥ ಏರ್ಪಾಟಾಗಿತ್ತು. ಆದರೆ ನಿಮ್ಮ ಈ ವಿಚಾರಣೆಯ ಹಿಂದೆ ಬೇರೊಂದು ಉದ್ದೇಶವಿದ್ದಂತೆ ತೋರುತ್ತಿದೆ ನನಗೆ. ಹೇಳಿ.... ಸುಮ್ಮನೇ ಕಾನೂನು ಗೀನೂನೂಂತ ಯಾಕೆ ಹೆದರಿಸ್ತೀರಿ? ನನ್ನಿಂದೇನಾದರೂ ನೆರವು ಬೇಕಿದ್ದರೆ ಖಂಡಿತ ಸಹಕರಿಸುತ್ತೇನೆ..."

"ವಾಹವ್ವಾ ಪೀಟರ್. ಮೆಚ್ಚಿದೆ. ನಿಜಕ್ಕೂ ನಮಗೆ ನಿಮ್ಮ ಸಹಕಾರದ ಆವಶ್ಯಕತೆ ಇದೆ."

"ಏನು ಹೇಳಿ."

"ಏನಿಲ್ಲ.... ನಮ್ಮ ಇಲಾಖೆಯ ಸದಸ್ಯರಿಗೋಸ್ಕರ ಒಂದು ಪ್ರದರ್ಶನ ನೀಡ್ತೀರಾಂತ...."

ಒಪ್ಪದೆ ವಿದಿಯಿರಲಿಲ್ಲ. ಯಾಕೆಂದರೆ ಲೈಸೆನ್ಸ್ ಪಡೆದಿಲ್ಲವೆಂಬ ಸಣ್ಣ ಕಾರಣವನ್ನೇ ಮುಂದು ಮಾಡಿ ತನ್ನನ್ನು ಫ್ರಾನ್ಸ್‌ನಿಂದ ಹೊರಹಾಕಿದರೆ? ಮತ್ತೆಂದೂ ಆ ದೇಶವನ್ನು ಪ್ರವೇಶಿಸದಂತೆ ಮಾಡಿದರೆ? ಪೀಟರ್ ಥಟ್ಟನೆ ಹೇಳಿಬಿಟ್ಟ- "ನಿಮ್ಮ ಆಸಕ್ತಿಯಿಂದ ನನಗಿನ್ನಷ್ಟು ಆತ್ಮವಿಶ್ವಾಸ ಹೆಚ್ಚಿತು. ಯಾವಾಗ ಏರ್ಪಡಿಸುತ್ತೀರಿ ಕಾರ್ಯಕ್ರಮಾನ?"

"ಇವತ್ತೇ... ಮಧ್ಯಾಹ್ನ ನಾಲ್ಕು ಗಂಟೆಗೆ ಆದೀತಾ?"

"ನನಗೆ ಅನುಕೂಲ ಸಮಯಾನೇ ಹೇಳೀದ್ರಿ."

"ಹಾಗಾದ್ರೆ ಬಂದ್ಬಿಡಿ- 'ಪ್ಯಾಲೇಸ್ ಡಿ ಜಸ್ಟಿಸ್'ಗೆ...."

"ಆಯ್ತು."

ಫ್ರೆಂಚ್ ಭಾಷೆ ಮಾತಾಡಬಲ್ಲವನಾಗಿದ್ದರೂ ಇಂಥ ಸಂದರ್ಭದಲ್ಲಿ ತನ್ನೊಂದಿಗೆ ದುಭಾಷಿಯಾಗಿ ಪತ್ನಿ ಮಾರಿಯಾಳೇ ಇರುವುದೊಳಿತು ಎಂದುಕೊಂಡ ಪೀಟರ್. ಇಬ್ಬರೂ 'ಪ್ಯಾಲೇಸ್ ಡಿ ಜಸ್ಟಿಸ್'ಗೆ ಬಂದಾಗ ಸರಿಯಾಗಿ ನಾಲ್ಕು ಗಂಟೆ. ಏನೋ ಒಂದಷ್ಟು ಜನ ಪೊಲೀಸು ಅಧಿಕಾರಿಗಳಿರಬಹುದೆಂದುಕೊಂಡು ಬಂದವ ದಂಗಾದ. ಅಲ್ಲಿ ಅಧಿಕಾರಿಗಳ ದಂಡಿನೊಂದಿಗೆ ಅರವತ್ತೆಪ್ಪತ್ತು ಜನ ನ್ಯಾಯಾಂಗ ಇಲಾಖೆಯ ಮಂದಿ! ತೀರ ಮುಂದೆ ಇಪ್ಪತ್ತು ಜನ ನ್ಯಾಯಾಧೀಶರು ಆಸೀನರಾಗಿದ್ದಾರೆ! ಒಬ್ಬನೇ ಒಬ್ಬನಾದರೂ ಆತ್ಮೀಯತೆ-ಅಚ್ಚರಿ ವ್ಯಕ್ತಪಡಿಸಿದರೆ ಆಣೆ. ಅವರೆಲ್ಲರ ಮುಖಗಳಲ್ಲಿ ನಿರ್ವಿಕಾರ ಭಾವನೆ ನೆಲೆಸಿತ್ತು.

"ಹಾಂ, ಮಿ. ಪೀಟರ್ ಹರ್‌ಕೋಸ್.... ನೀವು ಒಂದು ಸಮಸ್ಯೆಯನ್ನು ಬಿಡಿಸಬೇಕಾಗಿದೆ. ಅದರ ಕುರಿತು ನಾವೇನೂ ಹೇಳುವುದಿಲ್ಲ. ಈ ಪ್ರಕರಣದ ಬಗ್ಗೆ ಇಲ್ಲಿರುವ ಯಾರೂ ನಿಮಗೆ ಸುಳಿವು ನೀಡುವುದಿಲ್ಲ. ಪ್ರಶ್ನೆಗಳಿಗೆ ಅವಕಾಶವಿಲ್ಲ. ನೀವು ಇಲ್ಲಿರುವ ವಸ್ತುಗಳ ಸಹಾಯದಿಂದ ಪ್ರಕರಣವೇನೆಂದು ಅರಿತು ಅದಕ್ಕೊಂದು ಪರಿಹಾರ ಹೇಳಿದರೆ ನಿಮ್ಮಲ್ಲಿದೆಯೆನ್ನಲಾದ 'ಅದ್ಭುತ ಶಕ್ತಿ'ಯನ್ನು ಕೊಂಡಾಡುತ್ತೇವೆ. ಹೂಂ, ಶುರು ಮಾಡಿ...." ಪೀಟರ್‌ನೊಂದಿಗೆ ಫೋನಿನಲ್ಲಿ ಮಾತಾಡಿದ್ದಾತ ಇಷ್ಟನ್ನೆಲ್ಲ ಒಂದೇ ಉಸುರಿನಲ್ಲಿ ಹೇಳಿ ತನ್ನ ಜಾಗಕ್ಕೆ ಹೋಗಿ ಕುಳಿತ.

ತನ್ನೆದುರಿಗೆ ಕೂತವರು ನಿರ್ಜೀವ ಗೊಂಬೆಗಳೆ? ಮಿಸುಗುತ್ತಿಲ್ಲ, ಉಸಿರು ಬಿಗಿ ಹಿಡಿದೇ ಕೂತಿದ್ದಾರಲ್ಲ.... ಕಣ್ಣು ಕೀಲಿಸಿ ತನ್ನನ್ನೇ ನೋಡುತ್ತಿದ್ದಾರಲ್ಲ.... ಇದೇನು ತಾನವರೊಂದಿಗೆ ದೃಷ್ಟಿಯುದ್ಧ ಮಾಡಬೇಕಿದೆಯೆ? ಅವರೆಲ್ಲರೆಡೆ ನೋಡಿ ಪೀಟರ್ ಒಂದು ಮುಗುಳ್ನಗೆ ಒಗೆದ. ಅದೂ ತನ್ನನ್ನು ತಾನು ಸಂತೈಸಿಕೊಳ್ಳುವುದಕ್ಕಾಗಿ. ಎದೆಯಲ್ಲುಂಟಾದ ನಡುಕವನ್ನು ಕಡಿಮೆ ಮಾಡಿಕೊಳ್ಳುವುದಕ್ಕಾಗಿ.

ಹಿಂದೆ ಸಾಲಾಗಿರಿಸಿದ್ದ ಐದು ವಸ್ತುಗಳನ್ನಾತ ಸಮೀಪಿಸಿದ. ಒಂದು ಬಾಚಣಿಕೆ, ಕತ್ತರಿಗಳ ಒಂದು ಜೋಡಿ, ಒಂದು ಕೈ ಗಡಿಯಾರ, ಒಂದು ಸಿಗರೇಟ್ ಲೈಟರ್ ಮತ್ತು ಒಂದು ಚರ್ಮದ ಚೀಲ...

ಪೀಟರ್ ಪ್ರತಿಯೊಂದನ್ನೂ ಮುಟ್ಟಿನೋಡಿದ. ನಂತರ ಅಲ್ಲಿದ್ದವರೆಡೆ ನೋಡುತ್ತ,

"ಈ ಪೈಕಿ ಮೂರು ವಸ್ತುಗಳು ಮಾತ್ರ ನಿಮ್ಮ ಮನಸ್ಸಿನಲ್ಲಿರುವ ಪ್ರಕರಣಕ್ಕೆ ಸಂಬಂಧಿಸಿವೆ... ಅಲ್ವೆ?" ಎಂದು ಕೇಳಿದ.

ಯಾರ ಮುಖವೂ ಬದಲಾಗಲಿಲ್ಲ. ಕಣ್ಣುಗಳು ಅರಳಲಿಲ್ಲ. ಒಬ್ಬನಿನ್ನೊಬ್ಬನೆಡೆ ಹೊರಳಲಿಲ್ಲ.

ಹಿಂದೆ ಆ ಐದು ವಸ್ತುಗಳ ಪೈಕಿ ಒಂದಾದ ಕೈಗಡಿಯಾರದ ಸದ್ದು ಇನ್ನಷ್ಟು ಜೋರಾಗಿ, ಸ್ಪಷ್ಟವಾಗಿ ಕೇಳಿಸುವಂಥ ಮೌನವನ್ನವರು ಮುಂದುವರಿಸಿದರು.

ಈ ಜನ ಹಟ ಹಿಡಿದೇ ಕೂತಿದ್ದಾರೆ. ಮೌನವಾಗಿದ್ದು ಬಿಡುವ ಹಟ. ದುರ್ದಾನ ಪಡೆದವರಂತೆ ದುರುದುರು ನೋಡುತ್ತ ಕೂಡುವ ನಿರ್ಧಾರ ಮಾಡಿಯೇ ಅಲ್ಲಿ ಬಂದಿದ್ದಾರೆ. ಇವರನ್ನು ಗಮನಕ್ಕೆ ತಂದುಕೊಂಡರೆ ತನ್ನ ಏಕಾಗ್ರತೆ ತಪ್ಪುತ್ತದೆ. ಇವರೇನು ಹೀಗೆ ಮಾಡಿ ತನ್ನನ್ನು ಹತಪ್ರಭನನ್ನಾಗಿಸಿ ಸೋಲೊಪ್ಪಿಕೊಳ್ಳುವ ಸ್ಥಿತಿಗೆ ತರುವ ಹುನ್ನಾರ ಹೂಡಿದ್ದಾರೆಯೆ? ತಲೆ ಕೆಡಿಸಿಕೊಂಡು ಪ್ರಯೋಜನವಿಲ್ಲ. ಸುಮ್ಮನೇ ಈ ವಸ್ತುಗಳೊಂದಿಗೆ ಸಖ್ಯ ಬೆಳೆಸುವುದೇ ಕ್ಷೇಮವೆಂದುಕೊಂಡ ಪೀಟರ್.

ಆ ಚರ್ಮದ ಚೀಲವನ್ನೆತ್ತಿಕೊಂಡ. ಚಿತ್ರವೊಂದು ಚಿತ್ತದಲ್ಲಿ ರೂಹು ಪಡೆಯುತ್ತ ಸ್ಪಷ್ಟವಾಗತೊಡಗಿತು.

"ಬಿಳಿ ಕೋಟು.... ಬಕ್ಕ ತಲೆಯವನೊಬ್ಬ ಅದನ್ನು ತೊಟ್ಟಿದ್ದಾನೆ.... ಆತ ಒಬ್ಬ ಎಂಜಿನಿಯರ್.... ಅಥವಾ ಒಬ್ಬ ಡಾಕ್ಟರ್... ರೈಲು ಹಳಿಗಳು ಕಾಣುತ್ತಿವೆ.... ಅಲ್ಲೊಂದು ಗುಡ್ಡ.... ಅದನ್ನಿಳಿದರೆ ಗಿಡಗಳೋ ಗಿಡಗಳು.... ಅವುಗಳ ನಡುವೆ ಒಂದು ಮನೆ...."

ಪೀಟರ್ ಮಾತು ನಿಲ್ಲಿಸಿದ. ಕಾಗದವೊಂದರ ಮೇಲೆ ಪೆನ್ಸಿಲ್ಲಿನಿಂದ ತಾನು ಕಂಡದ್ದನ್ನು ರೇಖಿಸಿದ. ಅದನ್ನು ಎಲ್ಲರಿಗೂ ಕಾಣುವಂತೆ ಎತ್ತಿ ಹಿಡಿದ. ನೋಡಿದವರು ಮತ್ತೆ ಮೊದಲಿನಂತೆಯೇ ಕುಳಿತರು. ಅವರ ಕಣ್ಣಲ್ಲಾಗಲಿ ಮುಖದಲ್ಲಾಗಲಿ ಬದಲಾವಣೆಯೇ ಕಾಣಲಿಲ್ಲ.

ಪೀಟರ್ ಕಂಗಾಲಾಗಲಿಲ್ಲ ಬಿಡಿ. ತಾನು ಕಂಡದ್ದನ್ನು ಹೇಳುತ್ತಲೇ ನಡೆದ....

"ಅದೋ- ಉಗ್ರಾಣ ಮನೆ. ಅದರಿಂದಾಚೆಗೊಂದು ವಾಸದ ಮನೆ. ಅವೆರಡರ ನಡುವೆ ಶವವೊಂದು ಬಿದ್ದುಕೊಂಡಿದೆ. ನಿಕೋಲಾ. ಈ ಪ್ರಕರಣಕ್ಕೆ ಸಂಬಂಧಿಸಿದ ವ್ಯಕ್ತಿಯದೋ ವಸ್ತುವಿನದೋ ಹೆಸರು ನಿಕೋಲಾ. ಅಂದ ಹಾಗೆ ಯಾರು ಈ ನಿಕೋಲಾ?"

ಈ ಸಲವೂ ಅವರೆಲ್ಲ ನಿರುತ್ತರಕುಮಾರರಾಗೇ ಕುಳಿತರು.

"ಹಾಲಿನ ಬಾಟಲು! ಈ ಪ್ರಕರಣಕ್ಕೂ ಹಾಲಿನ ಬಾಟಲಿಗೂ ಏನು ಸಂಬಂಧ? ಮೃತ ವ್ಯಕ್ತಿ ಗುಂಡೇಟಿಗೆ ಬಲಿಯಾಗಿಲ್ಲ. ಜೇಲು. ಅದರೊಳಗೊಬ್ಬ ಬಕ್ಕ ತಲೆಯವ... ಯಾರಾತ? ಡಾಕ್ಟರನಂತೆ ಕಾಣುತ್ತಾನೆ... ಆ ಶವ ಒಬ್ಬ ಮಹಿಳೆಯದು. ಕೊಲೆಗೀಡಾಗಿದ್ದಾಳೆ. ಆದರೆ ಹೇಗೇಂತ ಸ್ಪಷ್ಟವಾಗುತ್ತಿಲ್ಲ...." ಪೀಟರ್ ಕ್ಷಣಕಾಲ ಸುಮ್ಮನಾದ. ಆ ಹಾಲ್‌ನಲ್ಲೆಲ್ಲ ಕಣ್ಣಾಡಿಸಿದ.



"ಹಾಲಿನ ಬಾಟಲಿಗೂ ಈ ಪ್ರಕರಣಕ್ಕೂ ಸಂಬಂಧ ವೇನು?" ಪ್ರಶ್ನೆ ಎಸೆದ.

ಊಹುಂ. ಅವರಾರೂ ತುಟಿಪಿಟಕ್ಕೆನ್ನಲಿಲ್ಲ. ಕಣ್ಣನ್ನೂ ಪಿಳುಕಿಸಲಿಲ್ಲ. ಪೀಟರ್ ಹೇಳಿದ್ದನ್ನು ಪುರಸ್ಕರಿಸುವ ಇಲ್ಲವೆ ತಿರಸ್ಕರಿಸುವ ಗೋಜಿಗೂ ಹೋಗಲಿಲ್ಲ. 'ಮೇಣದ ಗೊಂಬೆಗಳ ಸಂಗ್ರಹಾಲಯವೇ ಇದು?' ಎಂದುಕೊಂಡ ಪೀಟರ್. ಇದೆಂಥ ಸತ್ವಪರೀಕ್ಷೆಯ ವಿಧಾನ? ಉತ್ತೇಜನವಿಲ್ಲದಿದ್ದರೆ ಉದ್ದಾಮಪಂಡಿತನೂ ಉಡುಗಿಹೋಗುತ್ತಾನೆ. ಇವರೆಲ್ಲ ತನ್ನನ್ನು ಯಾಕಿಂಥ ಪರೀಕ್ಷೆಗೊಳಪಡಿಸುತ್ತಿದ್ದಾರೆ? ತನ್ನ ಶತ್ರುಗಳೇ ಇವರು? ಪೀಟರ್ ಎದೆಗೆಡತೊಡಗಿದ. ಆದರೆ ಚಂಡಮಾರುತದ ನಡುವೆಯೂ ಗಟ್ಟಿ ಹೆಜ್ಜೆ ಯಿಟ್ಟು ನಿಂತರೇನೇ ಆದರಿಂದ ಪಾರಾಗಲು ಸಾಧ್ಯ ಎಂಬ ಅರಿವು ಮೂಡಿತು.

"ಜೇಲಿನಲ್ಲಿರುವ ಆ ಮನುಷ್ಯ..." ಪೀಟರ್ ತಲೆಗೆ ಕೈ ಹಚ್ಚಿಕೊಂಡ. "ಹೌದು. ಆತ ಸತ್ತಿದ್ದಾನೆ...." ಎಂದವ ಇನ್ನಷ್ಟು ಏಕಾಗ್ರತೆಗೆ ಯತ್ನಿಸಿದ. ಊಹುಂ. ಮುಂದೇನೂ ತೋರಲಿಲ್ಲ. "ಇಷ್ಟೇ ನನಗೆ ಕಂಡದ್ದು..." ಎಂದು ಎದುರಿನವರನ್ನೆಲ್ಲ ದಿಟ್ಟಿಸತೊಡಗಿದ.

ಮುಂದೆ ಅರ್ಧ ನಿಮಿಷ ಇನ್ನೂ ಆತಂಕ ಮೂಡಿಸಿತು ಆತನಿಗೆ. ಆದರೆ ಇದ್ದಕ್ಕಿದ್ದ ಹಾಗೆಯೇ ಅಲ್ಲಿದ್ದವರೆಲ್ಲರ ಮುಖಗಳು ಜೀವತಳೆದವು. ಕೈಗಳು ಚಲಿಸಿದವು. ಚಪ್ಪಾಳೆ... ಕಿವಿಗಡಚಿಕ್ಕುವ ಚಪ್ಪಾಳೆ. ಜೊತೆಗೆ ಅಭಿನಂದನಪೂರ್ವಕ ಕೇಕೆ- ಹರ್ಷೋದ್ಗಾರ.

ಪೀಟರ್ ಗೆದ್ದಿದ್ದ.

ಈ ಹಿಂದೆಂದೂ ಅನುಭವಿಸಿರದ ರೋಮಾಂಚನ ಆತನಿಗೆ. ಕಣ್ಣುಗಳೆರಡೂ ತುಂಬಿಬಂದುವು. ಚಪ್ಪಾಳೆ- ಹರ್ಷೋದ್ಗಾರಗಳು ನಿಂತುವಾದರೂ ಗುಜುಗುಜು ಮಾತು ಅಲ್ಲೆಲ್ಲ ತುಂಬಿತ್ತು. ಅಚ್ಚರಿಯ ಮುದ್ದೆಗಳಾಗಿ ಒಬ್ಬನಿನ್ನೊಬ್ಬನೊಡನೆ ಅಚ್ಚರಿಗೆ ಉಚ್ಚಾರ ರೂಪ ತೊಡಿಸುವುದರಲ್ಲೇ ಮಗ್ನನಾಗಿದ್ದ.

ಪೀಟರ್‌ನನ್ನು ಅಲ್ಲಿಗೆ ಆಹ್ವಾನಿಸಿದ್ದಾತ ಎದ್ದು ಬಂದ.

"ನೀವು ಹೇಳಿದ್ದು ನೂರಕ್ಕೆ ತೊಂಬತ್ತೊಂಬತ್ತು ಪಾಲು ಸರಿ. ಆದರೆ...." ಮಾತು ಕತ್ತರಿಸಿದ.

"ಸ್ವಲ್ಪ ತಡೆಯಿರಿ ಆಫೀಸರ್. ಮಿ. ಪೀಟರ್ ಈಗಾಗ್ಲೇ ಸಾಕಷ್ಟು ಪರೀಕ್ಷಿಸಲ್ಪಟ್ಟಿದ್ದಾರೆ. ಅವರು ಹೇಳಿದ್ದು ಸರಿಯಾಗೇ ಇದೆ. ಅಲ್ಲಾ, ಯಾವುದೇ ಸುಳಿವು ಪಡೆಯದೇ, ಈ ಪ್ರಕರಣದ ಪೂರ್ವಪರಿಚಯವೂ ಇಲ್ಲದೆಯೂ ಅವರು ಕರಾರುವಾಕ್ಕಾಗಿ ನಿರೂಪಿಸಿದ್ದಾರಲ್ಲಾ- ಅದು ಮೆಚ್ಚಬೇಕಾದ ಅಂಶ. ರೈಲು ಹಳಿಗಳು, ಅದರಾಚೆಗೊಂದು ಗುಡ್ಡ, ಅದನ್ನು ಹತ್ತಿಳಿದರೆ ಗಿಡಗಳ ಗುಂಪು, ಅವುಗಳ ನಡುವೆ ಮನೆ. ಉಗ್ರಾಣ ಮತ್ತು ಮನೆಗಳ ನಡುವೆ ಬಿದ್ದ ಸ್ತ್ರೀಯ ಶವ. ಗುಂಡೇಟಿನಿಂದಲ್ಲ, ಗಂಡ ವಿಷವಿಕ್ಕಿದ್ದರಿಂದಾಗಿ ಪ್ರಾಣಬಿಟ್ಟಾಕೆ. ಆ ಡಾಕ್ಟರ್ ಆಕೆಯ ಗಂಡ. ಹಾಲಿನ ಬಾಟಲು. ಆದರೆ ಅದರಲ್ಲಿನ ಹಾಲು ವಿಷ ಸೇರಿಸಲ್ಪಟ್ಟದ್ದು. ನಿಕೋಲಾ ಎಂಬ ಹೆಸರು ಕೂಡ ಹೇಳಿಬಿಟ್ಟಿದ್ದಾರೆ ಪೀಟರ್. ಅದು ಆ ಮೃತ ಸ್ತ್ರೀಯ ಮುದ್ದು ನಾಯಿಯ ಹೆಸರು..." ನ್ಯಾಯಾಧೀಶರ ಪೈಕಿ ಅತಿ ಹಿರಿಯ ನೆಂಬಂತೆ ಕಾಣುತ್ತಿದ್ದವ ಹೇಳಿದ.

"ಆದರೆ ಸರ್.... ಜೇಲಿನಲ್ಲಿರುವಾತ ಸತ್ತಿದ್ದಾನೆಂಬುದಾಗಿ ಪೀಟರ್ ಹೇಳಿದರು. ಆತ ಸತ್ತಿಲ್ಲ. ಇಲ್ಲೇ ಪ್ಯಾರಿಸ್ಸಿನಲ್ಲೇ ಬಂಧನದಲ್ಲಿದ್ದಾನೆ... ಮಿ. ಪೀಟರ್, ಇದೊಂದು ಮಾತ್ರ ತಪ್ಪಾಗಿ ಹೇಳಿದಿರಿ," ಆ ಪೊಲೀಸು ಅಧಿಕಾರಿ ಸಮರ್ಥನೆ ನೀಡಿದ.

"ಇಲ್ಲಿಲ್ಲ. ನಾನು ಕಂಡದ್ದನ್ನೆಲ್ಲ ಕಂಡ ಹಾಗೆಯೇ ಹೇಳಿದ್ದೇನೆ. ಆ ಬಕ್ಕತಲೆಯವ ಸತ್ತಿರುವುದು ನನಗೆ ಕಂಡದ್ದು ನಿಜ...."

ಅಷ್ಟರಲ್ಲಿ ಸಹಾಯಕ ಅಧಿಕಾರಿಯೊಬ್ಬ ಆ ಹಾಲ್‌ಗೆ ಧಾವಿಸಿದ.

"ಸರ್.... ಬಂಧಿತ ಡಾಕ್ಟರ್ ಸೆಲ್‌ನಲ್ಲೇ ಸತ್ತುಬಿದ್ದಿದ್ದಾನೆ," ಎಂದ.

**(ಮುಂದಿನ ಸಂಚಿಕೆ ನೋಡಿ)**

---

**ಪು**ಷ್ಪಪಾತ್ರೆಯಲ್ಲಿ ಬೆಳೆಸಿದ ಸಸ್ಯಗಳು ಇನ್ನಷ್ಟು ನಳನಳಿಸುವಂತೆ ಕಾಣಬೇಕೆ ? ಎಲೆಗಳಿಗೆ ಒಂದಿಷ್ಟು ಔಡಲೆಣ್ಣೆ ಸವರಿ.

ಆ್ಯಂಬ್ರೋಜ್ ಬಿಯರ್ಸ್‌ನ

# ಕಟುಹಾಸ್ಯ ಕಥೆಗಳು

ಆ್ಯಂಬ್ರೋಜ್ ಬಿಯರ್ಸ್ ತಮ್ಮ ಅಗಾಧ ಶಬ್ದ ಸಾಮರ್ಥ್ಯ ಮತ್ತು ಪ್ರಖರ ವಿನೋದಕ್ಕಾಗಿ ಹೆಸರಾದ ಅಮೆರಿಕನ್ ಸಾಹಿತಿ. ವೃತ್ತಿಯಲ್ಲಿ ಪತ್ರಕರ್ತ. ಆ ಕಾಲದಲ್ಲಾತ 'ಕಟುಹಾಸ್ಯಗಾರ' (Black Hu-marist) ಎಂದೇ ಪ್ರಖ್ಯಾತನಾದವ. "ಸರ್ವಶಕ್ತಿ ಮಾನ್ ಬಿಯರ್ಸ್ ಪ್ರಭು" ಎಂದು ಜನ ಆತನನ್ನು ಗೌರವಪೂರ್ವಕವಾಗಿ ಸಂಬೋಧಿಸುತ್ತಿದ್ದರು. ಕಲ್ಪನೆಗೂ ಮೀರಿದ ರೀತಿಯಲ್ಲಿ ಬದುಕಿ ಅದೇ ರೀತಿ ಮರಣವನ್ನಪ್ಪಿದವ ಆ್ಯಂಬ್ರೋಜ್. 'ಫ್ಯಾಂಟಾಸ್ಟಿಕ್ ಫೇಬಲ್ಸ್' ಎಂಬುದು ಆ್ಯಂಬ್ರೋಜ್ ಬಿಯರ್ಸ್‌ನ ಕಟುಹಾಸ್ಯ ಪ್ರಸಂಗಗಳ ಸಂಕಲನ. ಇಲ್ಲಿ ಅದರಿಂದ ಆಯ್ದ ಒಂಬತ್ತು ಕಟುಹಾಸ್ಯ ಕಥೆಗಳನ್ನು ನಿಮಗಾಗಿ ನೀಡುತ್ತಿದ್ದೇವೆ.

ಈ ಮೊದಲು ಕಥಾಮೋದಕ, ಐದು ಮಿನಿ ಕಥೆಗಳನ್ನು ಆಸ್ವಾದಿಸಿದಂತೆಯೇ ಇವುಗಳನ್ನೂ ಸವಿಯಬಲ್ಲಿರೆಂಬ ವಿಶ್ವಾಸ ನಮ್ಮದು.

• ಸಂಪಾದಕ

ಅನುವಾದ: ಗುರುನಾಥ ಇನಾಮದಾರ

# ಆ್ಯಂಬ್ರೋಜ್ ಬಿಯರ್ಸ್‌ನ ಕಟುಹಾಸ್ಯ ಕಥೆಗಳು

## ಕಾನೂನುಪ್ರಿಯ ನ್ಯಾಯಾಧೀಶ

ಆ ನ್ಯಾಯಾಧೀಶ ನದಿಯ ದಂಡೆಯ ಮೇಲೆ ಆರಾಮಾಗಿ ಕುಳಿತಿದ್ದ. ಪ್ರವಾಸಿಯೊಬ್ಬ ಅವನ ಬಳಿ ಬಂದು, "ನಾನು ತುರ್ತಾಗಿ ಈ ನದಿಯನ್ನು ದಾಟಿ ಆ ದಡಕ್ಕೆ ಹೋಗಬೇಕಾಗಿದೆ. ಇಲ್ಲಿರುವ ಈ ದೋಣಿಯನ್ನು ಬಳಸುವುದು ಕಾನೂನು ರೀತ್ಯ ಸರಿಯೆ? ದಯವಿಟ್ಟು, ಹೇಳಿ," ಎಂದ.



"ಅದರಲ್ಲೇನೂ ತಪ್ಪಿಲ್ಲ. ಏಕೆಂದರೆ ಈ ದೋಣಿ ನನ್ನದೇ. ಹಾಗೂ ನಾನು ಅದನ್ನು ಬಳಸಲು ನಿನಗೆ ಅನುಮತಿಯನ್ನೂ ಕೊಟ್ಟಿದ್ದೇನೆ," ಎಂದ ನ್ಯಾಯಾಧೀಶ.

ಆ ಪ್ರವಾಸಿ ಉಪಕಾರ ಸ್ಮರಿಸಿ, ದೋಣಿಯನ್ನು ತೆಗೆದುಕೊಂಡು ನದಿಯಲ್ಲಿ ಹೊರಟ. ಆದರೆ ಆ ದೋಣಿಗೆ ದೊಡ್ಡದೊಂದು ತೂತಿದ್ದುದರಿಂದ ಕೆಲವೇ ಕ್ಷಣಗಳಲ್ಲಿ ದೋಣಿಯಲ್ಲಿ ನೀರು ಹೊಕ್ಕು, ಆ ಪ್ರವಾಸಿಯ ಸಮೇತ ಅದು ನದಿಯಲ್ಲಿ ಮುಳುಗಿತು.

ಇದನ್ನೆಲ್ಲ ನೋಡುತ್ತಿದ್ದವನೊಬ್ಬ ನ್ಯಾಯಾಧೀಶನನ್ನು ಕುರಿತು, "ನೀವು ಅದೆಷ್ಟು ನಿರ್ದಯರಾಗಿದ್ದೀರಿ! ನಿಮಗೆ ಆ ದೋಣಿಯಲ್ಲಿ ತೂತು ಇದೆಯೆಂಬುದು ಗೊತ್ತಿದ್ದರೂ ಅದನ್ನು ಅವನಿಗೇಕೆ ಹೇಳಲಿಲ್ಲ?" ಎಂದು ಕೇಳಿದ.

" 'ದೋಣಿ ಯಾವ ಸ್ಥಿತಿಯಲ್ಲಿದೆ' ಎಂಬ ವಿಷಯ ನನ್ನ ಮುಂದೆ ಬರಲೇ ಇಲ್ಲವಲ್ಲ. ನಾನೇನು ಮಾಡಲಿ?" ನ್ಯಾಯಾಧೀಶ ಶಾಂತಸ್ವರದಲ್ಲೇ ಉತ್ತರಿಸಿದ. ●

## ಪ್ರಾಮಾಣಿಕ ಖಾಜಿ

ಒಬ್ಬ ದರೋಡೆಖೋರ ವ್ಯಾಪಾರಿಯೊಬ್ಬನನ್ನು ಲೂಟಿ ಮಾಡಿ ಸಾವಿರ ನಾಣ್ಯ ಪಡೆದಿದ್ದ. ಅವನನ್ನು ಬಂಧಿಸಿ ಖಾಜೀಯೆದುರಿಗೆ ನಿಲ್ಲಿಸಲಾಯಿತು.

"ನಿನ್ನ ಈ ಅಪರಾಧಕ್ಕೆ ಶಿರಚ್ಛೇದವೇ ಸೂಕ್ತವಾದ ಶಿಕ್ಷೆ. ಈ ಬಗ್ಗೆ ನಿನಗೇನಾದರೂ ಹೇಳುವುದಿದೆಯೇ?" ಖಾಜೀ ಕೇಳಿದ.

ಚತುರನಾದ ಆ ದರೋಡೆಖೋರ "ಮಹಾಸ್ವಾಮಿ ಎಲ್ಲವೂ ದೇವರ ಇಚ್ಛೆ. ಅವನೇ ನನ್ನಿಂದ ಈ ಲೂಟಿ ಮಾಡಿಸಿದ್ದಾನೆ. ಇದರಲ್ಲಿ ನನ್ನದೇನು ತಪ್ಪು?" ಎಂದು ಕೇಳಿದ.

"ನೀನು ಹೇಳುವುದೂ ಸರಿಯೇ. ನಿಜ

# ತರುಣ ಪಾದ್ರಿಯೂ ಧರ್ಮಗುರುವೂ



**ಚ**ರ್ಚ್ ಒಂದರ ಧರ್ಮಗುರುವನ್ನು ಕುರಿತು ತರುಣ ಪಾದ್ರಿಯೊಬ್ಬ, "ನನ್ನ ಪ್ರವಚನ ಮುಗಿಯುತ್ತಿದ್ದಂತೆಯೇ ನೀವು ಚಪ್ಪಾಳೆ ತಟ್ಟಿರಿ. ತಮಗೆ ಇಲ್ಲಿ ಎಲ್ಲರ ಪರಿಚಯವಿದೆ. ತಮ್ಮ ಪುಣ್ಯ ದಿಂದ ಇಂದು ದೊರೆಯುವ ಹಣದಲ್ಲಿ ಕಾಲು ಭಾಗ ನಾನು ನಿಮಗೆ ನೀಡುತ್ತೇನೆ." ಎಂದ.

ಪಾದ್ರಿಯ ಪ್ರವಚನ ಮುಗಿಯುತ್ತಿದ್ದಂತೆಯೇ ಧರ್ಮಗುರು ಚಪ್ಪಾಳೆ ತಟ್ಟಿ, ಅಲ್ಲಿ ಆಗಲೇ ಸಂಗ್ರ ಹವಾದ ಹಣವನ್ನೆಲ್ಲ ಜೇಬಿಗೆ ಸೇರಿಸಿದ.

ಜನರೆಲ್ಲ ಹೊರಟು ಹೋದ ನಂತರ ತರುಣ ಪಾದ್ರಿಯು ಮೆಲ್ಲನೆಯ ಧ್ವನಿಯಲ್ಲಿ, "ಪೂಜ್ಯರೇ, ತಾವು ಸಂಗ್ರಹಿಸಿದ ಹಣ..." ಎಂದು ಕೇಳುತ್ತಿದ್ದಂತೆಯೇ ಆ ಧರ್ಮಗುರು, "ಇತ್ತೀಚೆಗೆ ಜನರು ಉದಾರವಾಗಿ ಹಣ ನೀಡುವುದನ್ನೇ ಮರೆ ತಂತೆ ಕಾಣುತ್ತದೆ. ಅವರು ನನ್ನ ಪಾಲಿನ ಹಣ ವನ್ನಷ್ಟೇ ಹಾಕಿದ್ದಾರೆ, ನೋಡು." ಎಂದು ಹೇಳಿ ಚರ್ಚ್ ಮೆಟ್ಟಿಲಿಳಿದು ಹೊರಟುಬಿಟ್ಟ.! ●

---

ವಾಗಿಯೂ ನಿನ್ನನ್ನು 'ನಿರ್ದೋಷಿ'ಯೆಂದು ಬಿಟ್ಟು ಬಿಡಬೇಕು. ಆದರೆ ಅದೇ ದೇವರು ನನ್ನನ್ನು ಈ ಕಾರ್ಯಕ್ಕಾಗಿ ಇಲ್ಲಿ ನಿಯೋಜಿಸಿದ್ದಾನೆ. ಆದ್ದರಿಂದ ನಾನು ನ್ಯಾಯದಾನ ಮಾಡಲೇ ಬೇಕಾಗಿದೆ. ಆದರೆ ನಿನಗೆ ದೊರೆತುದರಲ್ಲಿ ಅರ್ಧ ಹಣ ನನಗೆ ಕೊಟ್ಟರೆ ನಾನು ಬೇರೆ ವಿಚಾರ ಮಾಡುತ್ತೇನೆ. ಬಹುಶಃ ದೇವರೆ ನನಗೆ ಇಂಥ ಮೋಹ ಬುದ್ಧಿ ಕೊಟ್ಟನೊ ತಿಳಿಯದು." ಎಂದು ಖಾಜೀ ಹೇಳುತ್ತಿರುವಂತೆಯೇ ಆ ದರೋಡೆ ಖೋರ ತಕ್ಷಣವೇ ತನ್ನ ಜೇಬಿನಿಂದ ಐನೂರು ನಾಣ್ಯಗಳನ್ನು ತೆಗೆದು ಖಾಜಿಯ ಕೈಗಿತ್ತ.



"ಹುಂ, ಒಳ್ಳೆಯದು. ಈಗ ನಾನು ನಿನ್ನ ಅರ್ಧ ಶಿರವನ್ನು ಮಾತ್ರ ಕತ್ತರಿಸಬೇಕಾಯಿತು. ನೀನು ಯಾವ ಬಾಯಿಯಿಂದ ದೊಡ್ಡ ದೊಡ್ಡ ತತ್ವಜ್ಞಾನದ ಮಾತು ಹೇಳಿದೆಯೋ ಅದನ್ನು ಉಳಿಸಿ, ಉಳಿದುದನ್ನು ಉರುಳಿಸುತ್ತೇನೆ." ಎಂದು ಹೇಳಿದ ಖಾಜಿ. ●

## ಆ್ಯಂಬ್ರೋಜ್ ಬಿಯರ್ಸ್‌ನ ಕಟುಹಾಸ್ಯ ಕಥೆಗಳು

# ವರ್ತಮಾನ ಪತ್ರ ಹುಟ್ಟಿದ್ದು ಹೀಗೆ!



ದರೋಡೆಖೋರನೊಬ್ಬ ಜನದಟ್ಟಣೆಯ ರಸ್ತೆಯಲ್ಲಿ ಪ್ರವಾಸಿಗನೊಬ್ಬನಿಗೆ ಪಿಸ್ತೂಲು ತೋರಿಸಿ, "ಹುಂ, ಬೇಗನೆ ನಿನ್ನಲ್ಲಿರುವ ಹಣ ಕೊಡುವಿಯೋ, ಅಥವಾ ನಿನ್ನ ಜೀವ ಕೊಡುವಿಯೋ?" ಎಂದು ಗದರಿಸಿದ.

"ನಿನಗೆ ಈ ಎರಡರ ಪೈಕಿ ಒಂದನ್ನು ತೆಗೆದು ಕೊಳ್ಳುವುದೇ ಆಗಿದ್ದರೆ ನನ್ನ ಜೀವನವನ್ನು ತೆಗೆದುಕೋ. ಅದರಿಂದಾಗಿ ಕೊನೆಯ ಪಕ್ಷ ನನ್ನ ಹಣವಾದರೂ ಉಳಿದೀತು." ಎಂದ ಆ ಪ್ರವಾಸಿ.

"ಅರೆ, ನಿನ್ನ ಪ್ರಾಣವೇ ಹೋದ ಮೇಲೆ ಹಣ ದಿಂದ ನಿನಗೇನು ಪ್ರಯೋಜನ?" ದರೋಡೆಖೋರ ಆಚ್ಚರಿಪಟ್ಟ.

"ಯಾವ ಪ್ರಾಣವು ಹಣವನ್ನು ಉಳಿಸಲು ಶಕ್ಯವಿಲ್ಲವೋ ಆ ಪ್ರಾಣ ಇದ್ದರೆಷ್ಟು? ಹೋದರೆ ಷ್ಟು?" ಎಂದು ಆ ಪ್ರವಾಸಿ ಹೇಳಿದಾಗ ದರೋಡೆ ಖೋರನಿಗೆ ಆತನ ತತ್ವಜ್ಞಾನ ಮತ್ತು ತರ್ಕಶುದ್ಧತೆಯ ಬಗ್ಗೆ ಅತೀವ ಸಂತಸವಾಯಿತು. ಕೂಡಲೇ ಆತ ಆ ಪ್ರವಾಸಿಯನ್ನು ತನ್ನ ಪಾಲು ದಾರನನ್ನಾಗಿ ಮಾಡಿಕೊಂಡ. ಅವರಿಬ್ಬರು ತಮ್ಮ ತಮ್ಮ ಪಾಂಡಿತ್ಯವನ್ನು ಜನರಿಗೆ ತಲುಪಿಸಲು ಮಾಡಿದ್ದೇನು ಗೊತ್ತೆ? ಕೂಡಲೇ ಒಂದು ವರ್ತ ಮಾನಪತ್ರ ಪ್ರಾರಂಭಿಸಿದ್ದು! ●

# ಅಜಾತಶತ್ರು

ರಸ್ತೆಯಲ್ಲಿ ಮೌನವಾಗಿ ಬರುತ್ತಿದ್ದ ನಿರುಪದ್ರವಿ ಮನುಷ್ಯನನ್ನು ಕೋಲಿನಿಂದ ಒಬ್ಬ ಚಚ್ಚಿದ.

ಅವರಿಬ್ಬರನ್ನು ಕೋರ್ಟಿನಲ್ಲಿ ಹಾಜರುಪಡಿಸಲಾಯಿತು.

ಫಿರ್ಯಾದಿಯು ಕಕ್ಕುಲತೆಯಿಂದ ನ್ಯಾಯಾಧೀಶ ರನ್ನು ಕುರಿತು, "ನನಗೇನಾಯಿತೋ ನನಗೆ ತಿಳಿ ಯದು, ಯಾರು ಹೊಡೆದರೋ ಅದೂ ನನಗೆ ಗೊತ್ತಿಲ್ಲ. ಆದರೆ ಈ ಜಗತ್ತಿನಲ್ಲಿ ನನಗೆ ಯಾರೊಬ್ಬರೂ ಶತ್ರುಗಳಿಲ್ಲವಲ್ಲಾ!" ಎಂದು ಹೇಳಿದ.

"ಹಾಗಾದರೆ ನಾನು ಹೊಡಿದಿಲ್ಲವೆಂಬುದು ಖಚಿತವಾಯಿತಲ್ಲವೆ?" ಆರೋಪಿ ಕೇಳಿದ.

"ಆರೋಪಿಯನ್ನು ಬಿಟ್ಟು ಬಿಡಿರಿ. ಯಾವ ಮನುಷ್ಯನಿಗೆ ಶತ್ರುಗಳೇ ಇಲ್ಲವೋ ಅಂಥವನಿಗೆ ಮಿತ್ರರೂ ಇರುವುದಿಲ್ಲ. ಕೋರ್ಟು-ಕಚೇರಿಗಳು ಇಂಥವರಿಗಾಗಿ ತೆರೆದವುಗಳಲ್ಲ!" ನ್ಯಾಯಾ ಧೀಶರು ಆದೇಶವಿತ್ತರು. ●

# ಬಣ್ಣದ ಮೇಣಬತ್ತಿ



ಮೃತ್ಯುಶಯ್ಯೆಯಲ್ಲಿದ್ದ ಆತ ತನ್ನ ಹೆಂಡತಿಗೆ ಹೇಳಿದ- "ಇನ್ನು ನಾನು ನಿನ್ನನ್ನು ಶಾಶ್ವತವಾಗಿಯೇ ತೊರೆದು ಹೋಗಲಿದ್ದೇನೆ. ನೀನು ನನ್ನ ಮೇಲೆ ಇಟ್ಟ ಪ್ರೀತಿಯ ಬಗ್ಗೆ ಕೊನೆಯ ಪುರಾವೆಯೊಂದು ಬೇಕಾಗಿದೆ. ನನ್ನ ಬ್ಯಾಗಿನಲ್ಲಿ ಬಣ್ಣದ ಮೇಣಬತ್ತಿಯಿದೆ. ಅದು ಶ್ರೇಷ್ಠ ಗುರುವೊಬ್ಬರು ಕೊಟ್ಟಿದ್ದು. ದೈವೀ ಗುಣವುಳ್ಳದ್ದು. ಅದು ನಿನ್ನ ಬಳಿ ಇರುವವರೆಗೂ ನೀನು ಬೇರೆಯವರನ್ನು ಮದುವೆಯಾಗುವುದಿಲ್ಲವೆಂದು ನನಗೆ ವಚನ ಕೊಡು."

ಆಕೆ ವಚನವಿತ್ತಳು. ಕೆಲ ಸಮಯದ ನಂತರ ಆತ ಸಮಾಧಾನದಿಂದ ಪ್ರಾಣ ಬಿಟ್ಟ.

ಇತ್ತ ಅವನ ಅಂತ್ಯಸಂಸ್ಕಾರದ ಸಿದ್ಧತೆಯಾಗುತ್ತಿದ್ದಂತೆಯೇ ಅವಳು ಆ ಮೇಣಬತ್ತಿಯನ್ನು ಡಬ್ಬಿಯಲ್ಲಿ ಹಚ್ಚಿಕೊಂಡು ನಿಂತಳು. ಅದು ಪೂರ್ಣ ಉರಿದು ಹೋಗುವವರೆಗೂ ಆಕೆ ಹಾಗೆಯೆ ನಿಂತಿದ್ದಳು. ●

# ಕವಿ ಮತ್ತು ಸಂಪಾದಕ




ಕವಿಯೊಬ್ಬ ತನ್ನ ಕೃತಿಯನ್ನು ಆ ಸಂಪಾದಕನ ಮುಂದಿಟ್ಟು, "ಇದೊಂದು ಚಿಕ್ಕದಾದರೂ ಚೊಕ್ಕ ಕವಿತೆ. ಈ ಕವನದ ಮಟ್ಟ ತುಂಬ ಎತ್ತರದ್ದು, ಇದೊಂದು ಅಸಲೀ ಕವನವೆಂಬುದನ್ನು ನೀವು ನೋಡಿದರೆ ತಿಳಿಯುತ್ತೀರಿ," ಎಂದು ಹೇಳಿದ.

ಕವನವನ್ನೋದಿ ಅದನ್ನು ತನ್ನ ಟೇಬಲ್ ಡ್ರಾಯರ್‌ನಲ್ಲಿಡುತ್ತ ಸಂಪಾದಕ ರೂಪಾಯಿಯ ನಾಣ್ಯವೊಂದನ್ನು ಅವನ ಕೈಯಲ್ಲಿಡುತ್ತಾ, "ಇದೊಂದು ಚಿಕ್ಕದಾದರೂ ಚೊಕ್ಕ ನಾಣ್ಯ. ಇದರ ಮೌಲ್ಯ ಬಹಳ ಮಹತ್ವದ್ದು. ಇದೊಂದು ಅಸಲೀ ನಾಣ್ಯವೇ ಆಗಿದೆಯೆಂಬುದನ್ನು ನೀವು ನೋಡಿದರೆ ತಿಳಿಯುತ್ತೀರಿ," ಎಂದುಬಿಟ್ಟ! ●

## ಆ್ಯಂಬ್ರೋಜ್ ಬಿಯರ್ಸ್‌ನ ಕಟುಹಾಸ್ಯ ಕಥೆಗಳು



# ತಂದೆ ಮತ್ತು ಮಗ

ಒಬ್ಬ ವೃದ್ಧ ತಂದೆ ಉದ್ಧಟ ಹಾಗೂ ಶೀಘ್ರ ಕೋಪಿಯಾದ ತನ್ನ ಮಗನನ್ನು ಕುರಿತು, "ಮಗನೇ, ಹೀಗೆ ಗಳಿಗೆಗೊಮ್ಮೆ ಚಿಕ್ಕಪುಟ್ಟ ಕಾರಣಗಳಿಗೂ ಸಿಟ್ಟಿಗೇಳುತ್ತಿದ್ದರೆ ಅನೇಕ ರೀತಿಯ ಕಷ್ಟಗಳನ್ನು ಎದುರಿಸಬೇಕಾಗುತ್ತದೆ. ಇನ್ನು ಮುಂದೆ ನಿನಗೆ ಸಿಟ್ಟು ಬಂದಾಗ ಬಾಯಿತೆರೆಯುವ ಮೊದಲು ನಿಂತಲ್ಲೇ ನೂರರವರೆಗೆ ಅಂಕಿಗಳನ್ನು ಎಣಿಸು. ಹಾಗೆ ಎಣಿಸುತ್ತೇನೆ ಎಂದು ಈಗ ನನಗೆ ಮಾತು ಕೊಡು," ಎಂದು ಕೇಳಿದನು.

ಮಗನು ಹಾಗೇ ಆಗಲೆಂದು ಮಾತು ಕೊಡುವುದೊಂದೇ ತಡ ಆ ಮುದುಕ ತನ್ನ ಕೈಯಲ್ಲಿದ್ದ ಕೋಲಿನಿಂದ ಮಗನನ್ನು ಹೊಡೆಯತೊಡಗಿದನು. ಮಗನು ಒಂದು, ಎರಡು, ಮೂರು.... ಹೀಗೇ ಹತ್ತರವರೆಗೆ ಎಣಿಸಿದನೋ ಇಲ್ಲವೋ ಕೂಡಲೇ ಆ ಮುದುಕನನ್ನು ಎತ್ತಿ ಹೊರಗೆ ಹೋಗುತ್ತಿದ್ದ ಟ್ಯಾಕ್ಸಿಯೊಂದರಲ್ಲಿ ಬಿಸಾಕಿಬಿಟ್ಟ!!

---

# ಏಕನಿಷ್ಠ ವಿಧವೆ

ಗಂಡನ ಸಮಾಧಿಯ ಬಳಿ ಕಣ್ಣೀರು ಸುರಿಸುತ್ತ ನಿಂತಿದ್ದ ತರುಣಿ-ಸುಂದರಿಯಾದ ವಿಧವೆಯನ್ನು ಅಲ್ಲೇ ನಿಂತವನೊಬ್ಬ ಕಂಡು, "ನಿನ್ನ ಬಗ್ಗೆ ಎಷ್ಟೋ ದಿನಗಳಿಂದ ನನಗೆ ಪ್ರೀತಿ ಉಕ್ಕುತ್ತಲಿದೆ. ನನ್ನ ಬಗ್ಗೆ ನಿನಗೇನಾದರೂ ಅನ್ನಿಸುತ್ತಿದೆಯಾ?" ಎಂದು ಕೇಳಿದ.

"ಥೂ, ಇಲ್ಲಿಂದ ತೊಲಗಾಚೆ, ಇದು ಪ್ರೇಮಾಲಾಪದ ಸಮಯವೇ?" ಆ ವಿಧವೆ ಗಟ್ಟಿಯಾಗಿ ಕೂಗಿದಳು.

"ನನ್ನ ಪ್ರೀತಿಯನ್ನು ವ್ಯಕ್ತಪಡಿಸಲು ಇದು ಸೂಕ್ತ ಸಮಯವಲ್ಲವೆಂಬುದು ನನಗೆ ಗೊತ್ತು. ಆದರೆ ನಿನ್ನ ಸೌಂದರ್ಯ ಕಂಡು ಹುಚ್ಚಾದ ನಾನು ಹೀಗೆ ಮಾಡಬೇಕಾಯಿತು." ಆತ ನಮ್ರನಾಗಿಯೇ ಹೇಳಿದ.

"ಅಯ್ಯೋ, ನಾನು ನನ್ನ ಗಂಡನ ಸಮಾಧಿಯ ಮುಂದೆ ನಿಂತು ಕಣ್ಣೀರು ಸುರಿಸುವ ಮೊದಲೇ ನೀನು ಬಂದು ಈ ಮಾತು ಹೇಳಬಾರದಿತ್ತೆ?" ಆಕೆ ಗದ್ಗದಕಂಠದಿಂದ ಕೇಳಿದಳು.



# ಕಾವ್ಯದ ಹುಟ್ಟು





ಕಣ್ಣ ಕಿಂಡಿ ಮೂಲಕ
ಒಳಗಿಳಿದ
ಸುಂದರ-ಕುರೂಪ ನೋಟಗಳ
ಸರಸ-ವಿರಸ ದೃಶ್ಯಗಳ
ಅನ್ಯಾಯ-ದೌರ್ಜನ್ಯ ಹಿಂಸೆಯಂತಹ
ದಾರುಣ ಘಟನೆಗಳ
ಅಗಾಧ ಅವ್ಯಾಹತ
ಚಿಂತನಾನುಭವಗಳ ಪರಿಣಾಮ
ಗಾಢವಾಗಿ
ಹೃದಯದಿ ಮಡುಗಟ್ಟಿ
ಚಿತ್ತ ಬತ್ತಿ ಹೊಸೆದು ಹುರಿಗೊಂಡು
ಒಳಗೊಳಗೆ ಘರ್ಷಣೆಯುಂಟಾಗಿ
ಫಕ್ಕನೆ ಪ್ರತಿಭೆ ಪ್ರಜ್ವಲಿಸಿ
ಬೆಳಕ ಹೊಳೆ ಹರಿದಂತಾಗಿ
ಅದರೊಳೆ ಸಂಪೂರ್ಣ ಮುಳುಗೆದ್ದ ಸಂತೃಪ್ತಿ.
ಕಣ್ಣು-ಹೃದಯ ಶುದ್ಧಿ ಇದ್ದಲ್ಲಿ ಮಾತ್ರ
ಈ ಸತ್ಫಲ ಪ್ರಾಪ್ತಿ!!

• ಉ.ಶಾ. ಬಸವಣ್ಣಪ್ಪ

# ಮಾತು ಮಾಣಿಕ್ಯ

೧೫

# ಹಟಮಾರಿ ಹೊಟ್ಟೆ

ನೆಲ ನಿಂತ ನೆಲದ ಮೇಲೆ. ಬರಗಾಲದ ಕರಿಯ ಛಾಯೆ ಕವಿಯಿತೆಂದರೆ, ಜನತೆಯ ಮತಿಗೆ ಮಂಕು ಮುಸುಕುವುದು. ಆಗ ಬಡಜನರ ಬವಣೆ ಹೇಳತೀರದು. ಇದ್ದೂರಲ್ಲಿ ಕೂಲಿ-ಕುಂಬಳಿ ಹುಟ್ಟುವಂತಿಲ್ಲ. ಬಿಕ್ಕೆ ಬೇಡಲು ಮಾನ ಸಾಲುವದಿಲ್ಲ. ಮುಂದೇನು ಗತಿ? ಒಟ್ಟಿಗೆ ಎಲ್ಲರೂ ಸೇರಿ ಮತ್ತೊಂದೆಡೆ ಗುಳೆ ಹೋಗುವುದು. ಅಲ್ಲಿ ಬೇರೆ ಉದ್ಯೋಗ ವ್ಯವಸಾಯ ಹುಡುಕಿಕೊಳ್ಳುವುದು. ಇದೆಲ್ಲವೂ "ಹೊಟ್ಟೆಗಾಗಿ, ಗೇಣು ಬಟ್ಟೆಗಾಗಿ" (ಇಲ್ಲಿಯ "ಗೇಣುಬಟ್ಟೆ" ಎಂಬ ಪದವನ್ನು ಇಂದಿನ ದಿನಮಾನದಲ್ಲಿ "ಥಾನು ಬಟ್ಟೆ" ಎಂದು ಬದಲಿಸಿ ಓದಬೇಕಷ್ಟೆ!) ಹೊಟ್ಟೆ ಹೊರೆದುಕೊಳ್ಳಲು ಪಡಬೇಕಾದ ಕಷ್ಟ ಅಷ್ಟಿಷ್ಟಲ್ಲ.

ಹಸಿವೆಯಿಂದ ಕಸಿವಿಸಿಪಡುವ ಹೊಟ್ಟೆ ಯಾರನ್ನೂ ಕೇಳದಂಥ ಹಟಮಾರಿ! ವಿಶ್ವಾಮಿತ್ರ-ವಾಮದೇವ ರಂತಹ ಋಷಿ ಪುಂಗವರೆ ಹಸಿವೆಯಿಂದ ಕಂಗೆಟ್ಟು, ಚಾಂಡಾಲನ ಮನೆಯಲ್ಲಿ ಶ್ವಾನ ಮಾಂಸ ಭಕ್ಷಣದಂತಹ ದುರ್ಗತಿಗೆ ಗುರಿಯಾದರಂತೆ. ಬಂಧುವಿನೊಡನೆ ದ್ಯೂತವಾಡಿ ಸೋತು ಕಾಡುಪಾಲಾದ ನಳಮಹಾರಾಜನು, ಹಾಳು ಹೊಟ್ಟೆಯನ್ನು ತುಂಬಿಕೊಳ್ಳಲೆಂದು ಹಕ್ಕಿಗಳನ್ನು ಹಿಡಿಯ ಹೋಗಿ, ಉಟ್ಟ ಬಟ್ಟೆಯನ್ನೂ ಕಳೆದು ಕೊಂಡ. ಫಜೀತಿಗೊಂಡು ಬತ್ತಲೆಯಾದ. ಭೂಪತಿಯು ಹಕ್ಕಿಗಳೆದುರಿನಲ್ಲಿಯೆ ನಗೆಪಾಟಲಿಗೀಡಾದ. ಇದೆಲ್ಲ ಏತಕ್ಕಾಗಿ? ಎಂದಿಗೂ ತುಂಬಲಾರದ, ಒಂದು ಬಾರಿ ಭರ್ತಿ ಮಾಡಿದರೂ ಮರುಗಳಿಗೆಯಲ್ಲೆ ತೆರ ವಾಗುವ ಸ್ವಭಾವದ ಈ ತುತ್ತಿನ ಚೀಲಕ್ಕಾಗಿ!

"ಅನ್ನ ಬ್ರಹ್ಮದಾ ದೇಗುಲದಲ್ಲಿ ಬೆಳಗೂ ಬೈಗೂ ಚಟಚಟ ಬೆಂಕಿ," ಎಂದು ಹಿಂದೊಮ್ಮೆ ವರಕವಿ ಅಂಬಿ ಕಾತನಯದತ್ತರು ಹಾಡಿದಂತೆ ಹೊಟ್ಟೆಯಲ್ಲಿ ಅನವರತವೂ ನಿಗಿನಿಗಿ ಉರಿಯುವ ಬೆಂಕಿ. ಈ ಅಗ್ನಿ ದೇವನಿಗೆ ಕಾಲಕಾಲಕ್ಕೆ ಆಹುತಿ, ಸಮರ್ಪಣ ಅತ್ಯವಶ್ಯ. ಆದರಿಂದಲೇ ನಮ್ಮೀ ದೇಹದಲ್ಲಿ ಒಂದು ಬಗೆಯ ಶಾಖೋ ತ್ಪತ್ತಿ. ತತ್ಪರಿಣಾಮವಾಗಿಯೇ ದೇಹಯಂತ್ರದ ಕಾರ್ಯಪ್ರವೃತ್ತಿ. ದೇಹದೊಳಗಣ ಈ ಕಾವು ಮರೆಯಾದ ತಕ್ಷಣವೇ ಸಾವು.

ಹೊಟ್ಟೆಯನ್ನು ತುಂಬಿಸುವುದೆಂದರೆ ಒಂದು ಬಗೆಯ ದುಸ್ಸಾಹಸ. ಒಂದು ಕಡೆಯಿಂದ ತುಂಬುತ್ತ ಹೋದಂತೆ ಇನ್ನೊಂದು ಕಡೆಯಿಂದ ಖಾಲಿಯಾಗುವ ಅಭ್ಯಾಸ ಅದರದು. ತುಂಬುತ್ತೇವೆ ಎಂಬುದು ನಮಗಿರುವ ಭ್ರಮೆ. ಶ್ರಮಪೂರ್ವಕವಾಗಿಯೋ ಕ್ರಮಬದ್ಧವಾಗಿಯೋ ಬರಿದಾಗುವುದು ನೈಸರ್ಗಿಕ ನಿಯಮ. ಹಿತ್ತಲಿನಲ್ಲಿ ಹೆಗ್ಗಣದ ಹಾವಳಿ ಹೆಚ್ಚಾದಾಗ ಅದರ ಹೋರನ್ನು ಹುಡುಕಿ, ಕಲ್ಲು ಹೆಂಟೆಗಳಿಂದ ಮುಚ್ಚಿಬಿಡುವ ಹವಣಿಕೆ ನಮ್ಮದು. ಇದೊಂದು ಹುಚ್ಚು ಪ್ರಯತ್ನವಲ್ಲವೆ? ಏಕೆಂದರೆ ಮೂಷಕರಾಯನು ರಾಜಾರೋಷವಾಗಿ

● ಪ್ರೊ. ಶ್ರೀನಿವಾಸ ತೋಫಖಾನೆ

ಸಂತತವಾಗಿ ಸದ್ದಿಲ್ಲದೆ ಸಂಚರಿಸಲೋಸುಗ ಸಿದ್ಧಪಡಿಸಿದ ಸುರಂಗ ಮಾರ್ಗದ ಆರಂಭ ನಮ್ಮ ಮನೆಯ ಅಂಗಳದಲ್ಲಿ; ಕೊನೆಯೋ ಬಲು ದೂರದಲ್ಲಿ, ಅಕ್ಕಪಕ್ಕದ ಮನೆಗಳ ಬುನಾದಿಯ ಅಡಿಯಲ್ಲಿ ಹಾದು, ಊರ ಹೊರಗಣ ತೋಟದಲ್ಲೋ, ಗದ್ದೆಯಲ್ಲೋ ಮುಗಿಯುವಂಥ ಹೆದ್ದಾರಿ ಅದು. ಅದನ್ನು ಮಣ್ಣು, ಹೆಂಟೆಯಿಂದ ಮುಚ್ಚಿಬಿಡುವುದು ಅದೆಂತು ಸಾಧ್ಯ? ಈ ಪುಟ್ಟ ಪ್ರಾಣಿ ಕೈಕೊಳ್ಳುವ ಕಾಮಗಿರಿಯ ಕೌಶಲ ಯಾರನ್ನೂ ಬೆರಗುಗೊಳಿಸುವಂಥದು. ಹೊಟ್ಟೆಯ ಹಕೀಗತ್ತು ಕೂಡ ಇಂಥದೆ. ಎಷ್ಟು ಹಿಟ್ಟು ಉಣಬಡಿಸಿದರೂ ಇದರ ಅಭೀಷ್ಟಕ್ಕೆ ಇತಿಮಿತಿ ಎಂಬುದೇ ಇಲ್ಲ.

ದೇಹದಲ್ಲಿ ಒಟ್ಟಾಗಿ ಕೂಡಿಕೊಂಡು ಹಾಯಾಗಿ ಬದುಕುವ ಕಣ್ಣು, ಕಿವಿ, ಕೈಕಾಲು ಮೊದಲಾದ ಬೇರೆ ಬೇರೆ ಅವಯವಗಳಲ್ಲಿ ಒಂದು ಸಲ ವಿರಸ ಮೂಡಿತಂತೆ. "ನಾನು ಹೆಚ್ಚು, ನಾನು ಹೆಚ್ಚು ನೀವೆಲ್ಲ ಬದುಕುತ್ತಿರುವುದು ನನ್ನಿಂದಾಗಿಯೇ!" ಎಂದು ಪ್ರತಿಯೊಂದೂ ವಾದಿಸಿತಂತೆ. ಇತರರಿಗೆ ಪಾಠ ಕಲಿಸಲೆಂದು, ತನ್ನ ಹೆಚ್ಚಳವನ್ನು ಮೆರೆಯಲೆಂದು ಒಂದೊಂದು ಅವಯವವೂ ಕೆಲಸ ನಿಲ್ಲಿಸುತ್ತ ಹೋಯಿತಂತೆ. ಇದನ್ನೆಲ್ಲ ತೆಪ್ಪಗೆ ಗಮನಿಸಿ ಹೊಟ್ಟೆ ಮುಷ್ಕರ ಹೂಡಿದ್ದೇ ತಡ, ಉಳಿದ ಅಂಗಾಂಗಗಳೆಲ್ಲ ಕಂಗಾಲಾದವು. ಕೆಟ್ಟಮೇಲೆ ಬುದ್ಧಿ ಬಂದಿತು ಎನ್ನುವಂತೆ ಅವು ನಂತರ ಒಕ್ಕೊರಲಿನಿಂದ ಮಹಿಮಾಶಾಲಿ ಹೊಟ್ಟೆಗೆ "ನೀನೇ ಶ್ರೇಷ್ಠ, ನೀನೇ ಗರಿಷ್ಠ" ಎಂದು ನತಮಸ್ತಕವಾಗಿ ಸ್ತುತಿಸಿದವು. ಹೊಟ್ಟೆಯು ಆ ಬಳಿಕ ಉಪವಾಸ ನಿಲ್ಲಿಸಿತಂತೆ. ಅದು ಉಂಡು ತೇಗಿದೊಡನೆ ಉಳಿದೆಲ್ಲ ಅವಯವಗಳು ಕಳೆದು ಹೋದ ಜೀವಕಳೆಯನ್ನು ಮರಳಿ ಗಳಿಸಿದುವಂತೆ. ನೆಮ್ಮದಿಯ ನಿಟ್ಟುಸಿರುಬಿಟ್ಟುವಂತೆ.

ಹೊಟ್ಟೆಯನ್ನು ತಣಿಸುವ ಅನ್ನ ದೇವ ಸಮಾನ. "ಅನ್ನ ದೇವರ ಮುಂದೆ ಇನ್ನು ದೇವರು ಇಲ್ಲ" ಎಂದು ಸರ್ವಜ್ಞನು ಅನ್ನದ ಹಿರಿಮೆ ಸಾರಿದುದರಲ್ಲಿ ಹೊಟ್ಟೆಯ ಹಿರಿಮೆಯೂ ಪ್ರತಿಧ್ವನಿತ. "ಮೊದಲು ಹೊಟ್ಟೆಪ್ಪ, ಬಳಿಕ ವಿಠ್ಠಪ್ಪ" ಎಂಬ ನಾಣ್ಣುಡಿ ಹೊಟ್ಟೆಯ ಶ್ರೇಷ್ಠತನಕ್ಕೆ ಹಿಡಿದ ಕನ್ನಡಿ.

ಅಗ್ನ್ಯಾಗಾರದಂತಿರುವ ಹೊಟ್ಟೆಯ ಕಾರ್ಯಾಗಾರಕ್ಕೆ ಬಿಡುವೆಂಬುದೆ ಇರದು. ಕೈಕಾಲು, ಕಣ್ಣು ಕಿವಿಗಳಂತಹ ಉಳಿದ ಅವಯವಗಳಿಗೆ ದಿನಕ್ಕೆ ಕೆಲ ಸಮಯವಾದರೂ ವಿರಾಮ. ಹೊಟ್ಟೆಗೆ ಮಾತ್ರ ಹಾಗಲ್ಲ. ಬಿಡುವಿಲ್ಲದ ದುಡಿಮೆ ಇದರದು. ಇತರ ಅಂಗಾಂಗಗಳಲ್ಲಿ ಒಂದಿದ್ದರೂ ಸರಿ, ಇಲ್ಲದಿದ್ದರೂ ಸರಿ. ಅಪಘಾತ ಸಂಭವಿಸಿ ಕೈ, ಇಲ್ಲವೆ ಕಾಲು ಮುರಿದರೆ ನಡೆದೀತು. ಹಬ್ಬದ ಸಲುವಾಗಿ ಉಬ್ಬಿನಿಂದ ತಂದ ಸಿಡಿಮದ್ದು ಸಿಡಿದು, ಒಂದು ಕಣ್ಣು ಕಳೆದು ಹೋದರೂ ಚಿಂತೆಯಿಲ್ಲ. ಶರೀರರಥ ಉರುಳುತ್ತಲೆ ಇರುತ್ತದೆ. ಬೇನೆಯಿಂದಲೋ ಕ್ಷೀಣತೆಯಿಂದಲೋ ಕಣ್ಣು ಕಿವಿಗಳಂತಹ ಇಂದ್ರಿಯ ದುರ್ಬಲಗೊಂಡು ಅವುಗಳ ಕಾರ್ಯಾಚರಣೆ ಕುಂಠಿತಗೊಂಡರೂ ನಡೆದೀತು. ಆದರೆ ಹೊಟ್ಟೆಯ ಮಾತು ಹಾಗಲ್ಲ. ಅದು ಕೆಲಸ ನಿಲ್ಲಿಸಿದರೆ, ಇಲ್ಲವೆ ರೋಗ-ರುಜಿನಕ್ಕೊಳಗಾದರೆ, ಉಳಿದೆಲ್ಲ ಅವಯವಗಳು ನಿಸ್ತೇಜ, ನಿರ್ವೀರ್ಯ. ಪ್ರಾಣೋತ್ಕ್ರಮಣ ಸಮಯ ಸಹ ಸನ್ನಿಹಿತವಾಗುವ ಭಯ. ಎಂತಲೇ ಹೊಟ್ಟೆಯ ಮಹಿಮೆ ಅಗಮ್ಯ.

ಹೊಟ್ಟೆಯ ವಿಶಿಷ್ಟ ಗುಣ ಬೆಂಕಿ ಅರ್ಥಾತ್ ಜಠರಾಗ್ನಿ. ಅದು ಪ್ರಜ್ವಲವಾಗಿರುವಂಥವರು ಹೊಟ್ಟೆಬಾಕ, ಕೂಳುಬಕ್ಕ ಎಂಬ ತೆಗಳಿಕೆಗೆ ಪಾತ್ರರು. ಬರಿ ಹೊಟ್ಟೆಗೆ ಏನಾದರೂ ತುರುಕುತ್ತಲೆ ಇರುವ, ಯಾವುದೇ ಕೆಲಸಕ್ಕೆ ಬಾರದ, ನಿಷ್ಪ್ರಯೋಜಕರು ಕೆಲವರು. ಅಂಥವರು "ಕೂಳಿಗೆ ದಂಡ, ಭೂಮಿಗೆ ಭಾರ," ಎಂಬ ಮೂದಲಿಕೆಗೆ ಗುರಿಯಾಗುವಂಥವರು.

ಬಕ, ಕೀಚಕ, ಕಿರ್ಮೀರರಂತಹ ರಕ್ಕಸರನ್ನು ಸಿಗಿದು ಹಾಕಿ, ಪರಾಕ್ರಮ ಮೆರೆದ ಪಾಂಡವ ಮಧ್ಯಮ ಭೀಮಸೇನನಿಗೆ, ಏಕಚಕ್ರ ನಗರದಲ್ಲಿದ್ದಾಗ, ಭಿಕ್ಷೆ ಬೇಡಿ ತರುತ್ತಿದ್ದ ತಿಂಡಿತೀರ್ಥದಲ್ಲಿ ಸಿಂಹಪಾಲು. ಭೀಮನು ಭೋಜನಪ್ರಿಯನಾಗಿದ್ದರೂ ಪರಮವೀರನೂ ಅಹುದು. "ಬಂಡಿ ಅನ್ನವ ಉಂಡಿತು ಕೂಸು, ಬಕನ ಪ್ರಾಣವ ಹಿಂಡಿತು ಕೂಸು" ಎಂದು ದಾಸರ ಪ್ರಶಂಸೆಗೆ ಆತ ಪಾತ್ರನಾಗುದು ತನ್ನ ಸದಾ ಪ್ರಜ್ವಲಿಸುತ್ತಿದ್ದ ಜಠರಾಗ್ನಿಯಿಂದಲೆ! ●

‘ಪ್ರಜ್ಞೆ ಮತ್ತು ಪರಿಸರ’ ಡಾ. ಯು.ಆರ್. ಅನಂತಮೂರ್ತಿಯವರ ಹದಿನೆಂಟು ವಿಚಾರಪೂರ್ಣ ವಿಮರ್ಶಾ ಲೇಖನಗಳಿಂದ ಕೂಡಿದ ಕೃತಿ. ೧೯೭೧ರಲ್ಲಿ ಮೊದಲು ಪ್ರಕಟವಾಗಿ, ನಂತರ ೧೯೯೨ರಲ್ಲಿ ನಾಲ್ಕನೆಯ ಮುದ್ರಣವನ್ನು ಕಂಡಿದೆ. (ಅಕ್ಷರ ಪ್ರಕಾಶನ, ಹೆಗ್ಗೋಡು.)

ಪ್ರಕೃತದಲ್ಲಿ ಅದರಲ್ಲಿ ಬರುವ ‘ಇಂಗ್ಲಿಷ್ ಬ್ರಾಹ್ಮಣ, ಕನ್ನಡ ಶೂದ್ರ’ ಎಂಬ ಲೇಖನದಿಂದ ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯವನ್ನು ವಿದ್ಯಾರ್ಥಿಗಳಿಗೆ ಕಲಿಸಿದ ಅವರು ಅನುಭವದಿಂದ ಮೂಡಿಸಿರುವ ವಿಚಾರಧಾರೆಯನ್ನು ಪ್ರಸ್ತುತಪಡಿಸುತ್ತಿದ್ದೇನೆ.

ನನಗೆ ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯವನ್ನು ವಿದ್ಯಾರ್ಥಿಗಳಿಗೆ ಕಲಿಸಿದ ಅನುಭವವಿದೆ. ಪರೀಕ್ಷೆಯಲ್ಲಿ ಅವರು ಬರೆದ ಉತ್ತರಗಳನ್ನು ಓದಿದ ಅನುಭವವಿದೆ. ಸತ್ಯದ ಬಗೆಗೆ ಸ್ವಲ್ಪವಾದರೂ ಕಳಕಳಿ ಇರುವವನು ಈ ಅಗಾಧವಾದ ಮೋಸವನ್ನು



‘ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯವನ್ನು ಹೇಗೆ ಕಲಿಸಬೇಕು?’

# ಡಾ. ಅನಂತಮೂರ್ತಿಯವರ ವಿಚಾರಗಳು

ಕಣ್ಣಾರೆ ಕಂಡು ಆತ್ಮವಂಚನೆ ಮಾಡಿಕೊಳ್ಳುವುದು ಅಸಾಧ್ಯ. ನಾವು ಏನನ್ನು ವಿದ್ಯಾರ್ಥಿಗಳಿಗೆ ನಿಜವಾಗಿ ಕಲಿಸುತ್ತಿದ್ದೇವೆ? ಇಂಗ್ಲಿಷ್ ಭಾಷೆಯನ್ನೋ? (ಇಂಗ್ಲೀಷಿನಲ್ಲಿ ಒಂದು ಸರಳ ಸಾಮಾನ್ಯ ವಾಕ್ಯವನ್ನೂ ಅವರಿಗೆ ತಪ್ಪಿಲ್ಲದೆ ಬರೆಯುವುದಕ್ಕೆ ಬರುವುದಿಲ್ಲ) ಅಥವಾ ಇಂಗ್ಲಿಷ್ ಸಾಹಿತ್ಯವನ್ನೋ? ಅವರು ಬರೆಯುವ ಇಂಗ್ಲಿಷಿನಲ್ಲಿ ವರ್ಡ್ಸ್‌ವರ್ತಿನಲ್ಲಿ ಪ್ರಕೃತಿ, ಹ್ಯಾಮ್ಲೆಟ್ಟನ ಒಳತೋಟಿ ಇವುಗಳ ಬಗೆಗೆ ಅವರು ಏನನ್ನು ತಾನೆ ಬರೆದಾರು? ಆದರೆ ಇಂಗ್ಲಿಷ್ ಉಪಾಧ್ಯಾಯರಲ್ಲಿ ಕೆಲವರಿಗಾದರೂ ಒಂದು ಅನುಭವವಾಗಿರಬೇಕು: ಮಿಕಮಿಕ ಕಣ್ಣುಬಿಡುವ ವಿದ್ಯಾರ್ಥಿಗಳಿಗೆ ಒಂದರ್ಧ ಗಂಟೆ ಹ್ಯಾಮ್ಲೆಟ್ಟನ ಸಮಸ್ಯೆ ಏನೆಂಬುದನ್ನು ಬ್ರ್ಯಾಡ್ಲೆ ಇತ್ಯಾದಿ ವಿಮರ್ಶಕರನ್ನೆಲ್ಲ ಉದ್ಧರಿಸಿ ವಿವರಿಸಿದ ಮೇಲೆ "ಪಾಪ, ಹೋಗಲಿ" ಎಂದು ಪಶ್ಚಾತ್ತಾಪದಿಂದ ಕನ್ನಡದಲ್ಲಿ ನಾಟಕದ ಬಗ್ಗೆ ಹೇಳಲು ಪ್ರಾರಂಭಿಸಿದೊಡನೆ ಅವರ ಕಣ್ಣಲ್ಲೊಂದು ಹೊಸ ಹೊಳಪು ಕಾಣುತ್ತದೆ.

ಆದ್ದರಿಂದ ಅಧ್ಯಾಪಕನಾದ ನನ್ನ ನಮ್ರ ಸೂಚನೆ ಇದು: ಮೂಲ ಗ್ರಂಥವನ್ನು ಓದುವಷ್ಟು ಇಂಗ್ಲಿಷ್ ಭಾಷೆಯ ವ್ಯಾಕರಣ ಇತ್ಯಾದಿಗಳನ್ನು ವಿದ್ಯಾರ್ಥಿಗಳಿಗೆ ಕಲಿಸೋಣ. ಆದರೆ ಇವರು ಇಂಗ್ಲಿಷ್ ಸಾಹಿತ್ಯವನ್ನು ಓದಿ ಪಡೆದ ಅನುಭವವನ್ನು ತಮ್ಮ ಭಾಷೆಯಲ್ಲೇ ವ್ಯಕ್ತಪಡಿಸಲು ಅವಕಾಶ ಕಲ್ಪಿಸೋಣ. ಪರೀಕ್ಷೆಯಲ್ಲಿ ಅವರ ಇಂಗ್ಲಿಷ್ ಭಾಷೆಯನ್ನು ಅಳೆಯುವುದು ನಮ್ಮ ಗುರಿಯಾದರೆ ವ್ಯಾಕರಣ, ವಾಕ್ಯರಚನೆಯ ಪ್ರಶ್ನೆಗಳನ್ನು ಕೇಳೋಣ ಅಥವಾ ಅವರ ಸಾಹಿತ್ಯಾನುಭವವನ್ನು, ಸಂವೇದನಾಶಕ್ತಿಯನ್ನು, ಅಭಿರುಚಿಯನ್ನು ಪರೀಕ್ಷಿಸುವುದು ನಮ್ಮ ಗುರಿಯಾದರೆ ತಮ್ಮ ಅನುಭವವನ್ನು ಸಹಜವಾಗಿ ವ್ಯಕ್ತಪಡಿಸಲು ಸಾಧ್ಯವಾದ ಭಾಷೆಯಲ್ಲಿಯೇ ಅವರಿಗೆ ಬರೆಯಲು ಬಿಡೋಣ. ಆದರೆ ನಾವು ಈಗ ಪರೀಕ್ಷೆಯಲ್ಲಿ ಅವರ ಇಂಗ್ಲಿಷ್ ಭಾಷಾ ಜ್ಞಾನವನ್ನೂ ಪರೀಕ್ಷಿಸದೆ, ಸಾಹಿತ್ಯಾನುಭವವನ್ನೂ ತೂಗದೆ ನೂರರಲ್ಲಿ ಎಂಬತ್ತು ಜನರನ್ನು ಇಂಗ್ಲಿಷಿನಲ್ಲಿ ಫೇಲ್ ಮಾಡಿಸುತ್ತಿದ್ದೇವೆ. ಇದರ ಪರಿಣಾಮ ನಮ್ಮ ವಿದ್ಯಾರ್ಥಿಗಳು ಶೇಕ್ಸ್‌ಪಿಯರ್‌ನ ಪರಮ ಶತ್ರುಗಳೋ ಅಥವಾ ಶೇಕ್ಸ್‌ಪಿಯರನ ಬಗ್ಗೆ ನೋಟ್ಸ್ ಬರೆದೊಬ್ಬನ ಪರಮಮಿತ್ರನೋ ಅಥವಾ ಪಾಸಾಗಲಾಗದ ತಾವು ಅಪ್ರಯೋಜಕರೆನ್ನುವ ಹತಮತಿಗಳೋ ಆಗುತ್ತಿದ್ದಾರೆ.

ಆದ್ದರಿಂದಲೆ ಗ್ರಹಿಕೆಗೆ ಮೂಲಭಾಷೆ, ಅಭಿವ್ಯಕ್ತಿಗೆ ನಮ್ಮ ಭಾಷೆ ಎನ್ನುವುದು ಸರಿಯಾದ ಹಾದಿ. ಮ್ಯಾಕ್ಸ್‌ಮುಲ್ಲರ್ ಸಂಸ್ಕೃತದಲ್ಲಿ ವೇದಗಳನ್ನು ಓದಿದರೂ ಸಂಸ್ಕೃತ ಭಾಷೆಯಲ್ಲಿಯೆ ತನ್ನ ಗ್ರಂಥಗಳನ್ನು ರಚಿಸುವ ಮೌಢ್ಯ ತೋರಿಸಲಿಲ್ಲ. ಜರ್ಮನ್ ಭಾಷೆಯಲ್ಲಿ ಬರೆದ ಪೋರ್ಚುಗೀಸರು, ಜರ್ಮನ್ನರು, ರಶಿಯನ್ನರು ಶೇಕ್ಸ್‌ಪಿಯರನನ್ನು ಓದಿ ಆ ಬಗ್ಗೆ ತಮ್ಮ ತಮ್ಮ ಭಾಷೆಯಲ್ಲೆ ವಿಮರ್ಶಾ ಗ್ರಂಥಗಳನ್ನು ಬರೆದಿದ್ದಾರೆ. ಅವು ಮತ್ತೆ ಇಂಗ್ಲಿಷ್ ಭಾಷೆಗೆ ಅನುವಾದಿತವಾಗಿ ಇಂಗ್ಲಿಷ್ ವಿದ್ಯಾರ್ಥಿಗಳಿಗೇ ಉಪಯುಕ್ತವಾದ ವಿಮರ್ಶಾ ಗ್ರಂಥಗಳಾಗಿವೆ. ಆದರೆ ಭಾರತೀಯನೊಬ್ಬ ಇಂಗ್ಲಿಷಿನಲ್ಲೆ ಶೇಕ್ಸ್‌ಪಿಯರನ

• ಡಾ. ಕೆ. ಶ್ರೀಕಂಠಯ್ಯ

ಬಗ್ಗೆ ಬರೆದ ಯಾವ ಗ್ರಂಥವನ್ನಾಗಲೀ ಇಲ್ಲ, ವಿದ್ಯಾರ್ಥಿಗಳು ಉಪಯುಕ್ತವೆಂದು ಕಂಡದ್ದನ್ನು ನಾವು ನೋಡಿಲ್ಲ. ಶೇಕ್ಸಪಿಯರ್ ನಮ್ಮ ಜನಪದದ ಸೊತ್ತಾದ ಹೊರತು ನಾವು ಅವನ ಬಗ್ಗೆ ಅನನ್ಯ ಗ್ರಂಥವನ್ನಾದರೂ ಹೇಗೆ ಬರೆದೇವು? ರಶಿಯನ್ನರಿಗೆ, ಜರ್ಮನ್ನರಿಗೆ, ಫ್ರೆಂಚರಿಗೆ ಶೇಕ್ಸ್‌ಪಿಯರ್ ತಮ್ಮ ಭಾಷೆಗಳ ಮೂಲಕ ತಮ್ಮವನಾದ್ದರಿಂದಲೇ ಅವನ ಬಗ್ಗೆ ಅವರು ಉದ್ಗ್ರಂಥಗಳನ್ನು ಬರೆಯುವುದು ಸಾಧ್ಯವಾಯಿತು.

ಇಂಗ್ಲೆಂಡಿನಲ್ಲಿ ನನ್ನ ಅನುಭವಕ್ಕೆ ಬಂದ ವಿಷಯವಿದು. ನಾನು ಓದುತ್ತಿರುವ ವಿಶ್ವವಿದ್ಯಾಲಯದಲ್ಲಿ ಸ್ಪ್ಯಾನಿಷ್, ಫ್ರೆಂಚ್, ರಶಿಯನ್, ಜರ್ಮನ್ ಇತ್ಯಾದಿ ಯುರೋಪಿನ ಭಾಷೆಗಳ ವಿಭಾಗಗಳಿವೆ. ಜಪಾನಿನಿಂದ ಬಂದವರೊಬ್ಬರು ಇಂಗ್ಲಿಷ್ ಶಾಖೆಯಲ್ಲಿ ಸಂಶೋಧನೆ ನಡೆಸುತ್ತಿದ್ದಾರೆ. ಆದರೆ ಜಪಾನ್ ಭಾಷೆಯಲ್ಲೆ ತಮ್ಮ ವಿಮರ್ಶೆಯನ್ನು ಬರೆಯುತ್ತಿದ್ದಾರೆ. ಜಪಾನಿನಲ್ಲಿ ಇಂಗ್ಲಿಷ್ ಅಧ್ಯಾಪಕರಾದ ಅವರು ತಮ್ಮ

ಭಾಷೆಯಲ್ಲಿಯೆ ಇಂಗ್ಲಿಷ್ ಸಾಹಿತ್ಯವನ್ನು ಕಲಿಸಿ ಕೊಡುತ್ತಾರೆ. ಆದರೂ ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯದ ಪ್ರಭಾವ ಜಪಾನಿನ ಮೇಲೆ ಅಗಾಧವಾಗಿ ಆಗಿದೆ. ಜೊತೆಗೆ ಇಂಗ್ಲಿಷ್ ಸಾಹಿತ್ಯದ ಮೇಲೆಯೇ ಪರಿಣಾಮ ಮಾಡಬಲ್ಲಂತಹ ನಾಟಕಗಳು, ಕಾದಂಬರಿಗಳು ಜಪಾನಿ ಭಾಷೆಯಲ್ಲಿ ಬಂದಿವೆ.

ಇದನ್ನೆಲ್ಲ ನೋಡಿದ ಮೇಲೆ ನನಗನ್ನಿಸುತ್ತದೆ; ಕೊನೆಯಪಕ್ಷ ನಮಗೆ ಇಷ್ಟನ್ನು ಮಾಡುವುದು ಸಾಧ್ಯ:

ಕನ್ನಡ ನಾಡಿನ ಮೂರು ವಿಶ್ವವಿದ್ಯಾಲಯಗಳಲ್ಲಿ ಇಂಗ್ಲಿಷ್ ಮತ್ತು ಕನ್ನಡ ಎರಡೂ ಭಾಷೆಗಳನ್ನೂ ತೆಗೆದುಕೊಂಡು ಓದುವ ವಿದ್ಯಾರ್ಥಿಗಳಿದ್ದಾರೆ. ಇಂಗ್ಲಿಷ್ ಸಾಹಿತ್ಯ ವಿಭಾಗಗಳಲ್ಲಿ ಇಂಗ್ಲಿಷ್ ಕವಿ, ನಾಟಕಕಾರ ವಿಮರ್ಶಕರ ಬಗ್ಗೆ ನಾವು ಸಂಶೋಧನೆ ಮಾಡುತ್ತೇವೆ. ಮಾಡಿದ ಸಂಶೋಧನೆಯನ್ನು ಇಂಗ್ಲಿಷಿನಲ್ಲಿ ಬರೆಯುತ್ತೇವೆ. ಈ ಸಂಶೋಧನೆಗಳಿಗೆ ಅನೇಕ ವೇಳೆ ಭಾರತದಲ್ಲಿ ಅವಶ್ಯವಾದ ಗ್ರಂಥಗಳೆಲ್ಲ ದೊರೆಯುವುದು ದುರ್ಲಭ. ಅಲ್ಲದೆ ನಮ್ಮ ವಿದ್ಯಾರ್ಥಿಗಳೇ ಇಂಗ್ಲಿಷ್ ಸಾಹಿತ್ಯದ ಬಗೆಗೆ ಇಂಗ್ಲಿಷ್ ವಿಮರ್ಶಕರು ಬರೆದದ್ದನ್ನು ಓದಲು ಬಯಸುತ್ತಾರೆ. ಆದ್ದರಿಂದ ಈ ಸಂಶೋಧನೆಗಳನ್ನು ನಮ್ಮ ಭಾಷೆಯಲ್ಲೆ ನಾವು ಬರೆದರೆ, ಕೃತಿ ದ್ವಿತೀಯ ವರ್ಗದ್ದಾದರೂ ಕನ್ನಡದಲ್ಲಿ ಸದ್ಯದ ದೃಷ್ಟಿಯಿಂದ ಮಹತ್ವದ್ದಾಗುತ್ತದೆ. ಇಂತಹ ಸಂಶೋಧನೆಗಳನ್ನು ನಾವು ಪ್ರಕಟಿಸಬಹುದು. ಕನ್ನಡಕ್ಕೆ ಉಪಯೋಗ ಮಾಡಿಕೊಳ್ಳಬಹುದು. ಹೊಸದೊಂದು ವಿಮರ್ಶೆಯ ಭಾಷೆಯ ಸೃಷ್ಟಿಗೆ ಇವು ಸಹಾಯಕವಾಗಬಹುದು. ಎಲ್ಲಕ್ಕಿಂತ ಮುಖ್ಯವಾಗಿ ಹೀಗೆ ಇಂಗ್ಲಿಷ್ ಸಾಹಿತ್ಯದ ಸಂಶೋಧನೆಯನ್ನು ಕನ್ನಡದಲ್ಲಿ ಮಾಡಿದ ಅನುಭವ ನಮ್ಮ ಭಾಷೆಯ ಅಭಿವೃದ್ಧಿಯ ಯತ್ನದಲ್ಲಿ ಬಹಳ ಪ್ರಯೋಜನಕಾರಿಯಾಗಬಹುದು. ನನಗೆ ತಿಳಿದಂತೆ ಇಂಗ್ಲೆಂಡಿನ ಎಲ್ಲ ವಿಶ್ವವಿದ್ಯಾಲಯಗಳಲ್ಲೂ ನಡೆಯುತ್ತಿರುವ ಕೆಲಸವೆಲ್ಲ ಈ ಬಗೆಯದೇ. ಎರಡೂ ಭಾಷೆಗಳ ನಡುವೆ ಕೊಡು-ಕೊಳ್ಳುವಿಕೆ ನಡೆಯಬೇಕಾದದ್ದು ಹೀಗೆ... ಆದ್ದರಿಂದ ನಾವು ಕೂಡಲೆ ಮಾಡಬೇಕಾದದ್ದು ಮತ್ತು ಮಾಡಬಹುದಾದದ್ದು ಇದು:

ಈಗ ನಮ್ಮ ವಿಶ್ವವಿದ್ಯಾಲಯಗಳಲ್ಲಿ ಸಮಾಜ ಶಾಸ್ತ್ರ, ಮನಃಶಾಸ್ತ್ರ, ರಾಜಕೀಯ ಶಾಸ್ತ್ರ, ಇಂಗ್ಲಿಷ್ ಸಾಹಿತ್ಯ, ತತ್ವಶಾಸ್ತ್ರ ಇತ್ಯಾದಿಗಳ ಬಗೆಗೆ ನಡೆಯುತ್ತಿರುವ ಪಿಎಚ್.ಡಿ. ಸಂಶೋಧನೆಗಳೆಲ್ಲ ಕೊನೆಯಪಕ್ಷ ಸಾಧ್ಯವಿರುವಷ್ಟಾದರೂ ಕೂಡ ಕನ್ನಡದಲ್ಲಿ ಬರಲಿ." (ಪ್ರಜ್ಞೆ-ಪರಿಸರ ಪುಟ ೫೧-೬೩)

ಇಂಗ್ಲಿಷ್ ಭಾಷೆ ಹಾಗೂ ಸಾಹಿತ್ಯದ ಬೋಧನೆ ಹಾಗೂ ಅದರಿಂದ ಮಾಡಬಹುದಾದ ಸಾಧನೆಗಳ ಬಗೆಗೆ ಡಾ. ಅನಂತಮೂರ್ತಿಯವರು ವ್ಯಕ್ತಪಡಿಸಿರುವ ಈ ಭಾವನೆಗಳು ಕ್ರಿಯಾತ್ಮಕವಾಗಿ, ಚಿಂತನೀಯವಾಗಿವೆ. ಸುಮಾರು ಮೂರು ದಶಕಗಳಷ್ಟು ಹಿಂದೆಯೇ (೧೯೬೫-ಪ್ರಜಾವಾಣಿ) ವ್ಯಕ್ತಪಡಿಸಿದ ಭಾವನೆಗಳು ಇವು. ಇಂದಿಗೂ ಅನಂತಮೂರ್ತಿಯವರ ಈ ಭಾವನೆಗಳನ್ನು ಅನೇಕ ಶಿಕ್ಷಣ ತಜ್ಞರು, ಬುದ್ಧಿಜೀವಿಗಳೂ ಸ್ವಾಗತಿಸಿದ್ದಾರೆ. ಸುಮಾರು ಮೂರು ದಶಕಗಳ ಹಿಂದೆ, ಕುವೆಂಪು ಬೆಂಗಳೂರಿನಲ್ಲಿ ನಡೆದ ಕಾಲೇಜು ಅಧ್ಯಾಪಕರ ಸಭೆಯಲ್ಲಿ, "ಇಂಗ್ಲಿಷನ್ನು ನಮ್ಮ ವಿದ್ಯಾರ್ಥಿಗಳಿಗೆ ಕನ್ನಡದಲ್ಲಿ ಬೋಧಿಸಿ, ಶೇಕ್ಸ್‌ಪಿಯರ್, ವರ್ಡ್ಸ್‌ವರ್ತ್, ಮಿಲ್ಟನ್‌ನಂತಹ ಮಹಾಕವಿ ಪುಂಗವರ ಶ್ರೀಮಂತ ಭಾವನೆಗಳನ್ನು ಸರಳ ಸುಂದರವಾಗಿ ಮಾತೃಭಾಷೆಯಲ್ಲಿ ಬೋಧಿಸಿ, ಆಂಗ್ಲಸಾಹಿತ್ಯದ ಅಮೃತಪಾನ ಮಾಡಿಸಿ, ಸಾಹಿತ್ಯದಲ್ಲಿ ಆಸಕ್ತಿ ಹುಟ್ಟಿಸಿ" ಎಂದು ಭಾವಪೂರ್ಣವಾಗಿ ಮನವಿ ಮಾಡಿಕೊಂಡಿದ್ದನ್ನು ನಾನು ಕೇಳಿದ್ದೇನೆ. ಆದರೆ ಕುವೆಂಪು ಅವರ ಆ ಭಾವನೆಗಳನ್ನು ಲೇವಡಿ ಮಾಡದವರೆಷ್ಟೋ! ಕುವೆಂಪು ಅವರಿಗಿಂತ ಹತ್ತು ಹೆಜ್ಜೆ ಮುಂದೆ ಹೋಗಿ ಅನಂತಮೂರ್ತಿಯವರು- "ಇಂಗ್ಲಿಷ್ ಭಾಷೆಯಷ್ಟೇ ಅಲ್ಲ, ಪ್ರೌಢ ವ್ಯಾಸಂಗ, ಸಂಶೋಧನೆ ಎಲ್ಲ ಹಂತದಲ್ಲೂ ಎಲ್ಲ ವಿಷಯಗಳಲ್ಲೂ ವಿಷಯ ಗ್ರಹಿಕೆಗೆ ಮಾತ್ರ ಮೂಲಭಾಷೆ, ಅಭಿವ್ಯಕ್ತಿ ಮಾಧ್ಯಮವಾಗಿ ನಮ್ಮ ಭಾಷೆ ಉಪಯೋಗವಾಗಬೇಕು" ಎಂದು ಒತ್ತಿ ಹೇಳಿದ್ದಾರೆ. ಬುದ್ಧಿಜೀವಿಗಳು ಅಭಿವ್ಯಕ್ತಿ

ಮಾಧ್ಯಮದಲ್ಲಿ ಮಾತೃಭಾಷೆಯ ಮಹತ್ವದ ಬಗೆಗೆ ಎಷ್ಟು ಒತ್ತಿ ಹೇಳಿದರೂ, ಇನ್ನೂ ಹೇಳುತ್ತಲೆ ಇದ್ದರೂ, ಆಂಗ್ಲಭಾಷೆಯ ಬಗೆಗೆ ಕುರುಡು ವ್ಯಾಮೋಹವನ್ನು ಬೆಳೆಸಿಕೊಂಡಿರುವ ನಮ್ಮಲ್ಲಿ ಅನೇಕರಿಗೆ ಈ ಭಾವನೆಗಳು ವ್ಯರ್ಥಾಲಾಪಗಳಾಗಿರುವುದು ನಾಚಿಕೆಗೇಡಿನ ವಿಷಯ.

ಹಾಗೆ ನೋಡಿದರೆ ದಕ್ಷಿಣದವರಿಗಿಂತ ಉತ್ತರ ದೇಶದವರಿಗೆ ಇಂಗ್ಲಿಷಿನ ಈ ಕುರುಡು ವ್ಯಾಮೋಹ ಸ್ವಲ್ಪಮಟ್ಟಿಗಾದರೂ ಕಡಿಮೆಯೆಂದೇ ಹೇಳಬಹುದು. ಉತ್ತರ ದೇಶದಿಂದ ನಮ್ಮ ಮನೆಗೆ ಬಂದ ಒಬ್ಬ ಸ್ನಾತಕೋತ್ತರ ಪದವೀಧರೆ, ಭೌತಶಾಸ್ತ್ರದಲ್ಲಿ ಎಂ.ಎಸ್ಸಿ. ಡಿಗ್ರಿಯನ್ನು ಪ್ರಥಮ ಸ್ಥಾನದಲ್ಲಿ ಪಡೆದವಳು. ಆಕೆ ಒಮ್ಮೆ, "ನೀವು ಯಾಕೆ ಹೀಗೆ ನಿಮ್ಮ ಕಾಲೇಜುಗಳಲ್ಲಿ ಇಂಗ್ಲಿಷ್ ವ್ಯಾಮೋಹ ಪಡುತ್ತೀರಿ. ನಮ್ಮ ಕಾಲೇಜುಗಳಲ್ಲಿ ಸ್ನಾತಕೋತ್ತರ ತರಗತಿಗಳಲ್ಲಿ ಕೂಡ ವಿಜ್ಞಾನದಂತಹ ಕ್ಲಿಷ್ಟವಾದ ವಿಷಯಗಳನ್ನೂ ನಮ್ಮ ಪ್ರೊಫೆಸರುಗಳು ಸೊಗಸಾಗಿ ಹಿಂದಿಯಲ್ಲಿ ವಿವರಣೆ ನೀಡಿ ಪಾಠ ಮಾಡುತ್ತಾರೆ. ನಮಗೆ ಪಾಠ ಸೊಗಸಾಗಿ ಅರ್ಥವಾಗುತ್ತೆ. ಅದನ್ನು ಗ್ರಹಿಸಿ ನಾವು ಇಂಗ್ಲಿಷಿನಲ್ಲಿ ಉತ್ತರ ಬರೆಯುತ್ತೇವೆ." ಎಂದು ಹೇಳಿದ ಮಾತುಗಳಿಂದ ನಾನು ವಿಸ್ಮಯಗೊಂಡೆ.

"ಮೂಲ ಭಾಷೆಯಲ್ಲೆ ವಿಷಯ ಗ್ರಹಣ ಮಾಡಿ, ಅದರ ಸಾರಸರ್ವಸ್ವವನ್ನು ತಮ್ಮ ಭಾಷೆಯಲ್ಲಿ ಕೊಡುವ ಸಾಹಸವನ್ನು ಮಾಡಿ ಸಾಹಿತ್ಯ ಸೇವೆಯನ್ನು ಸಲ್ಲಿಸಿದವರು ತೀರ ವಿರಳ" ಎಂದು ಅನಂತಮೂರ್ತಿಯವರು ಹೇಳುತ್ತಾರೆ. ನಿಜ. ಅಂತಹ ವಿರಳರಲ್ಲಿ ಒಬ್ಬರಾಗಿ ನಮಗೆ ಕಾಣಸಿಗುವವರು ಎಸ್. ಅನಂತನಾರಾಯಣ ಎಂಬುವರು. ಇಂಗ್ಲಿಷ್ ಅಧ್ಯಾಪಕರಾಗಿ ಸೇವೆ ಸಲಿಸಿದ ಅವರು, ಆಂಗ್ಲ ಸಾಹಿತ್ಯ, ಕನ್ನಡ ಸಾಹಿತ್ಯದ ಮೇಲೆ ಬೀರಿರುವ ಪ್ರಭಾವವನ್ನು ಗುರುತಿಸಲು ತಮ್ಮ ಪಿಎಚ್.ಡಿ. ಸಂಶೋಧನಾ ವಿಷಯವಾಗಿ 'ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಕಾವ್ಯದ ಪ್ರಭಾವ' ಎಂಬ ವಿಷಯವನ್ನು ಆರಿಸಿಕೊಂಡು ಸೊಗಸಾದ ಪ್ರಬಂಧವನ್ನು ಕನ್ನಡದಲ್ಲಿ ರಚಿಸಿರುವುದು ಒಂದು ದಾಖಲೆಯ ವಿಷಯ. ಅನೇಕ ಇಂಗ್ಲಿಷ್ ಕಾವ್ಯಗಳ ಪ್ರೌಢ ಅಧ್ಯಯನ ನಡೆಸಿ, ಜೊತೆಜೊತೆಯಲ್ಲಿ ಹೊಸಗನ್ನಡ ಕವಿತೆಗಳನ್ನೂ ಅಧ್ಯಯನ ಮಾಡಿ, ಪ್ರೌಢ ಪ್ರಬಂಧವನ್ನು ರಚಿಸಿದರು.

'ಶೇಕ್ಸ್‌ಪಿಯರ್‌ಗೆ ನಮಸ್ಕಾರ' ಎಂಬುದು ದೆಹಲಿ ಕನ್ನಡಿಗರು ಶೇಕ್ಸ್‌ಪಿಯರ್‌ನ ೪೦೦ನೆಯ ವರ್ಧಂತಿಯ ನೆನಪಾಗಿ ಹೊರತಂದ ಒಂದು ಅಪರೂಪದ ಕನ್ನಡ ಕೃತಿ. ಆ ಮಹಾಕವಿಗೆ ಕನ್ನಡಿಗರು ಅದರಲ್ಲೂ ಹೊರನಾಡ ಕನ್ನಡಿಗರು, ತಮ್ಮ ಭಾಷೆಯಲ್ಲಿ ನೀಡಿದ ಕಮನೀಯ ಕೊಡುಗೆ ಅದು. ಅಂತಹ ಒಂದು ಅಪರೂಪದ, ಶೇಕ್ಸ್‌ಪಿಯರ್‌ನ ಜೀವನ ಹಾಗೂ ಕೃತಿಗಳನ್ನು ಪರಿಚಯಿಸುವ ಮತ್ತೊಂದು ಶ್ರೇಷ್ಠ ಕೃತಿ ಕನ್ನಡದಲ್ಲಿ ಬಂದಿಲ್ಲವೇನೋ ಅನಿಸುತ್ತದೆ (?).

ಒಟ್ಟಿನಲ್ಲಿ ವಿಶ್ವದ ವಿಶ್ವಸನೀಯ ಶ್ರೀಮಂತ ಭಾಷೆಯಾಗಿ ವಿರಾಜಿಸುತ್ತಿರುವ ಇಂಗ್ಲಿಷ್ ಭಾಷೆ ಹಾಗೂ ಇಂಗ್ಲಿಷ್ ಸಾಹಿತ್ಯವನ್ನು ನಾವು ಯಾವ ರೀತಿ ಪರಿಭಾವಿಸಿ ವಿದ್ಯಾರ್ಥಿಗಳಿಗೆ ಅಭ್ಯಾಸ ಮಾಡಿಸಬೇಕು; ಆ ಭಾಷೆಯ ಸೊಬಗು, ಸೌಂದರ್ಯವನ್ನು ಯಾವ ರೀತಿ ಕಂಡುಕೊಳ್ಳಬೇಕು; ಆ ಭಾಷೆಯಲ್ಲಿರುವ ಅಪಾರ ಜ್ಞಾನವನ್ನು ನಾವು ಯಾವ ರೀತಿ ನಮ್ಮ ನಮ್ಮ ಭಾಷೆಗಳಲ್ಲಿ ತಂದುಕೊಂಡು ಶ್ರೀಮಂತಗೊಳಿಸಬೇಕು ಎಂಬಿತ್ಯಾದಿ ವಿಚಾರಗಳತ್ತ ಡಾ. ಅನಂತಮೂರ್ತಿಯವರ ವಿಚಾರಧಾರೆ ಮನನೀಯವಾಗಿದೆ. ●

---

**ಬ್ಯಾಟರಿ** ಪೆಲ್ಲುಗಳ ಆಯುಷ್ಯ ಕಡಿಮೆಯಾಗಿದೆಯೆ? ನಾಲ್ಕಾರು ಗಂಟೆಗಳ ಕಾಲ ಬಿಸಿಲಿನಲ್ಲಿಡಿ. ಇದಕ್ಕಿಂತ ಒಳ್ಳೆಯ ಉಪಾಯವೆಂದರೆ ಪೆಲ್ಲಿನ ತಳದಲ್ಲಿ ಮೊಳೆಯಿಂದ ಎರಡು-ಮೂರು ಚಿಕ್ಕ ಚಿಕ್ಕ ತೂತುಗಳನ್ನು ಮಾಡಿ ಉಪ್ಪಿನ ದ್ರಾವಣದಲ್ಲಿ ನಾಲ್ಕಾರು ಗಂಟೆಗಳ ಕಾಲ ಮುಳುಗಿಸಿ ಇಡಿ. ಬಳಿಕ ಪೆಲ್ಲನ್ನು ಒಣ ಮೇಣದಿಂದ ತೂತುಗಳನ್ನು ಮುಚ್ಚಿ.

## ಕಥೆ

● ಟಿ. ಎಂ. ರಮೇಶ್

# ಅನಾವರಣ

**ಕೊ** ಕ್ಕೊ ಕ್ಕೋ ಎಂದು ಹುಂಜ ಬಚ್ಚಲ ಗಟಾರದ ಬಳಿ ಕೂಗುತ್ತಲೇ ಮಂಜನಿಗೆ ತಟಕ್ಕನೆ ಎಚ್ಚರವಾಯಿತು. ಕಣ್ಣು ಹೊಸಕಿಕೊಂಡು ಕಿಟಕಿಯಾಚೆ ದೃಷ್ಟಿ ತೂರಿದ. ಮಂಜು ಬೆಳಕು ಹರಡತೊಡಗಿತ್ತು. ಎದ್ದು, ಜಾರಿಹೋಗಿದ್ದ ಪಂಚೆಯ ಕಚ್ಚೆಯನ್ನು ಸರಿಯಾಗಿ ಬಿಗಿದು ಹೊರ ಬಾಗಿಲಿಗೆ ಬಂದ. ಎದುರಿನ ರಸ್ತೆಯಲ್ಲಿ ಹಾಲಿನ ಕ್ಯಾನು ಹೊತ್ತ ಗಿರಿಭಟ್ಟರ ಮಗನ ಸೈಕಲ್ ಗಡಗಡ ಸದ್ದು ಮಾಡುತ್ತ ಹಾದು ಹೋಯಿತು. ಸಾಕಷ್ಟು ಹೊತ್ತಾಗಿ ಹೋಗಿರಬೇಕು ಎಂದುಕೊಂಡು ಹಿಟ್ಟು ಬೇಯಿಸುತ್ತಿದ್ದ ಹೆಂಡತಿಗೆ ಚುರುಕು ಮಾಡಲು ಹೇಳಿದ. ಬಚ್ಚಲಿಗೆ ಹೋಗಿ ತಂಬಿಗೆ ನೀರು ತುಂಬಿ ಕೊಂಡು ಸೊಪ್ಪಿನ ಬೆಟ್ಟದತ್ತ ನಡೆದ. ಅಲ್ಲಿ ಹಲಸಿನ ಮರದ ಬೇರೊಂದರ ಮೇಲೆ ಕುಕ್ಕರ ಗಾಲಿನಲ್ಲಿ ಕುಳಿತು ಇವತ್ತು ಯಾರ್‍ಯಾರ ಮನೆಯ ಬಾರಿ ಎಂದು ಯೋಚಿಸಿದ. ಬೆಳಗಿನ ಹೊತ್ತು ಶಂಕರರಾಯರ ಮನೆಗಂತು ಹೋಗಲೇಬೇಕು. ನಿನ್ನೆ ಆನರ ಮಗ ಬಂದು 'ನಾಳೆ ಅಪ್ಪಯ್ಯ ಬರು ತ್ತಾನೆ. ನೀನಿನ್ನು ಬಂದೇ ಇಲ್ಲ ಎಂದು ಗೊತ್ತಾ ದರೆ... ಉಳಿದದ್ದು ನಿಂಗೇ ಬಿಟ್ಟದ್ದು' ಎಂದು ಧುರುಕಿ ಹೊಡೆದಿದ್ದ. ಅದಕ್ಕಿಂತ ಹೆಚ್ಚಾಗಿ ಈ ಸಮಯದಲ್ಲಿ ಅವರಿಗೆ ತೊಂದರೆಯಿರುವುದೂ ಹೌದು. ಅವರ ಕಿರಿಯ ಮಗ ಗೌತಮ ಕ್ರಿಕೆಟ್ ಆಡುವಾಗ ತಲೆಗೆ ಹೊಡೆತ ಬಿದ್ದು ಅವನನ್ನು ಮಣಿಪಾಲಿಗೆ ಕರೆದುಕೊಂಡು ಹೋಗಿ ಒಂದು ತಿಂಗಳಾಗಿತ್ತು. ಅಡಿಕೆ ಹಾಕದೆ ಸೊಸೈಟಿಯವರು ದುಡ್ಡು ಕೊಡೋಲ್ಲ ಮಾರಾಯ. ಕಳೆದ ವಾರ ಬಂದವರು ಮುಂದಿನ ವಾರದೊಳಗೆ ಒಂದು ಬಾರಿಯಾದರೂ ಮುಗಿಸಲೇಬೇಕು ಎಂದು ತಾಕೀತು ಮಾಡಿದ್ದರು. ಆದರೆ ಹೋಗಲೇ ಆಗ ಲಿಲ್ಲ. ದಿನಾ ಒಂದಲ್ಲ ಒಂದು. ಒಂದು ಮನೆಗೆ ಹೋದರೆ ಹೆಂಗೂ ಆಯ್ತಲ್ಲ ಮಾರಾಯ, ಇದೊಂದು ತುಂಡು ಮುಗಿಸಿಬಿಡು ಎಂದು; ಗೋಟಿನ ಕೊನೆಯಷ್ಟನ್ನಾದರು ಉಗಿದು ಹಾಕು ಮಾರಾಯ ಎಂದು. ವರ್ಷಂಪ್ರತಿ ಕೊಪ್ಪದ ಕಡೆ ಒಂದು ಕೊಯ್ಲು ಮುಗಿದ ಮೇಲೆಯೇ ಊರಿನದ್ದು. ಆದರೂ ರಾಯರಿಗೆ ತೊಂದರೆಯಿದೆ ಯಲ್ಲ ಪಾಪ. ಇವತ್ತು ರಾಯರ ಮನೆಗೇ ಹೋಗು ವುದು ಎಂದುಕೊಂಡ. ಅಂಡು ತೊಳೆದು ಕಾಲು ನೀವಿ ಎದ್ದ. ಹಾಳಾದ್ದು ವಯಸ್ಸಾಯಿತು. ಮೊದಲಿನ ಹಾಗೆ ಕೆಲಸ ಮಾಡಲೂ ಆಗುವುದಿಲ್ಲ ಎಂದುಕೊಳ್ಳುತ್ತ ಮಾಡಿದ್ದನ್ನು ಮೆಚ್ಚದೆ ಜಾಗರೂಕನಾಗಿ ಮರ ಬಳಸಿ ನಿಂತು ಪಂಚೆ ಕಟ್ಟಿ ಕೊಂಡ. ಮುತ್ತುತ್ತಿದ್ದ ನೊಣವನ್ನು ನೋಡಿ ನೆರುಂ ಬಳವಾಗೆ ದರತಿಯನ್ನು ಪರಪರ ತುಳಿಯುತ್ತ ಮನೆ ಯತ್ತ ಹೆಜ್ಜೆ ಹಾಕಿದ.

ಇಂದು ಬೆಳಗ್ಗೆಯೇ ಶಂಕರರಾಯರ ಮನೆಗೆ ಹೋಗಬೇಕು. ಮಧ್ಯಾಹ್ನದ ಒಳಗೆ ಮುನ್ನೂರು ಕೊನೆ ಉಗಿದು ಹಾಕಿಬಿಟ್ಟರೆ ಶಂಕರರಾಯರಿಗೆ ಮುಖ ತೋರಿಸಲಿಕ್ಕಾದರು ಆಗುತ್ತದೆ. ಮಧ್ಯಾಹ್ನ

ವಿಷ್ಣು ಹೆಗಡೆಯವರ ಮೇಲಿನ ತೋಟಕ್ಕೆ ಇಳಿದರೆ. ಬೆಳಗಿನಷ್ಟು ಕೆಲಸ ಆಗದಿದ್ದರೂ ಹೊತ್ತು ಕಂತುವುದರ ಒಳಗೆ ಇನ್ನೂರಾದರೂ ಆದೀತು. ಸಾಲು ಅಡಿಕೆ ಮರ. ಸೊಕ್ಕಿ ಬೆಳದವಲ್ಲ. ಒಂದು ಮರ ಹತ್ತಿದರೆ ನಾಲ್ಕರ್ಧ ಬಣ್ಣ ಮುಗಿಸಿಯೇ ಕೆಳಗೆ ಇಳಿಯಬಹುದಾದ ಜೇಕು ಮರಗಳು-ಎಂದು ನಿರ್ಧರಿಸಿದವನೇ ಕಾಲು ಮುಖ ತೊಳೆದು ಅಡಿಗೆ ಮನೆಗ ನುಗ್ಗಿದ.

ಮಾವಿನ ಹೂಗಳನ್ನು ಉದುರಿಸಲೇ ಬೀಳು ವಂತಿದ್ದ ಇಬ್ಬನಿ ಸೂರ್ಯ ಮೇಲೆ ಬರುತ್ತಿರುವ ಸೂಚನೆಯನ್ನು ಅರಿಯುತ್ತಿರುವಂತೆ ಕಾಲ್ತೆಗೆಯ ತೊಡಗಿತ್ತು. ಬಿಸಿ ಹಬೆ ಉಗುಳುತ್ತ ಯಾಕೋ ಬಹಳ ಥಂಡಿ ಎಂದು ಮತ್ತೊಂದು ಬೀಡಿ ಹಚ್ಚಿ ಬಿಸಿಯ ದಮ್ಮೆಳೆದು ಚಪ್ಪಲಿ ಮೆಟ್ಟಿದ. ಬಿಡಾರ ದಾಟುತ್ತಿದ್ದಂತೆ ಇಳುಕಲು. ಅದೇ ದಾರಿಯಲ್ಲಿ ಒಂದಿಷ್ಟು ಮುಂದೆ ಹೋದರೆ ಊರ ಕೆರೆ. ಇಡೀ ಹದಿನೈದು ಎಕರೆ ತೋಟದ ಪ್ಲಾಟಿಗೆ ಅದೇ ನೀರಾ ವರಿ ಆಸರೆ. ಕೆರೆ ಏರಿಯ ಮೇಲೆ ನಿಂತು ಕೆಳಗೆ ಕಣ್ಣು ಹಾಯಿಸಿದ. ಗೊನೆ ತುಂಬಿ ನಿಂತ ಅಡಿಕೆ ಮರಗಳ ತೂಗಾಟ ಕಂಡು ಮನಸ್ಸು ಡೋಲಾಯಮಾನವಾಯಿತು. ಊರ ಜನ ಹೇಳುವುದು ಸುಳ್ಳಲ್ಲ. ಅಲ್ಲಲ್ಲಿ ಅಡಿಕೆ



ಕೆಂಪಾಗಿದ್ದುದು ಕಾಣಿಸುತ್ತಿದೆ. ಈ ಸರುಪಿನಲ್ಲಿ ಯಾರೂ ಗೋಟಡಿಕೆ ಮಾಡಿ ಕೊಯ್ಯುವುದಿಲ್ಲ. ಬಾಲಿ ಒಡೆಯುತ್ತಿದ್ದ ಜೊತೆಗೆ ಕೆಂಪಡಿಯಲ್ಲಿ ಆ ಪಿಗಟ್ಟು ಹೆಚ್ಚು. ಅದಕ್ಕೇ ನಂಬಿಕೊಳ್ಳುವುದು ತನ್ನನ್ನೇ. ತಾನೆಂದೂ ಅವರ ನಂಬಿಕೆಯನ್ನು ಹುಸಿಗೊಳಿಸಿಲ್ಲ. ಅಡಿಕೆ ಮರ ಅನ್ನ ಕೊಟ್ಟ ತಾಯಿ. ಅದು ಒಜ್ಜೆಯನ್ನು ತೊನೆಯುತ್ತ ನಿಂತರೆ ನೋಡಲಾದೀತೆ? ಜೊತೆಗೆ ಹಳೆ ಕೊನೆ ಇಳಿಸದೆ ಸಿಂಗಾರ ಒಡೆದು ಹೊಸ ಕೊನೆ ಮೂಡುವುದಾದರೂ ಹೇಗೆ? ಆದರೆ ವರ್ಷ ವರ್ಷ ಮುಂಬೆಳಸು ಶುರುವಾಯಿತು. ತನ್ನಲ್ಲೂ ಮೊದಲಿದ್ದ ಕಸುವು ಉಳಿಯಲಿಲ್ಲ. ಸರಿ, ಮತ್ತೊಬ್ಬನಿಗೆ ಜೀವನೋಪಾಯ ಆಗಲಿ ಅಂತ ಕರೆತಂದಾಯಿತು. ಒಂದೊಂದು ವರ್ಷ ಒಬ್ಬೊಬ್ಬ. ಹಾಗೆಂದು ಮಧ್ಯದಲ್ಲಿಯೇ ಒಬ್ಬನೂ ಕೈಕೊಡಲಿಲ್ಲ. ಈ ನಾರಾಯಣನನ್ನು ಬಿಟ್ಟು. ಪಾಪ, ಒಬ್ಬನೇ ಇರುವುದು, ತನಗೂ ಮಕ್ಕಳು ಮರಿಯಿಲ್ಲ, ರಾತ್ರಿ ಗಪ್ಪ ಹೊಡೆಯಲೋ ಮೂರೆಲೆ ಆಡಲೋ ಆದೀತು- ಅವನಿಗೂ ಊಟ ತಿಂಡಿಯ ಯೋಚನೆ ಇಲ್ಲ ಎಂದು ಹೆಂಡತಿ ಗೌರಿಗೆ ಹೇಳಿ ಮನೆಯಲ್ಲಿಯೇ ಉಳಿಸಿಕೊಂಡಾಯಿತು. ಆದರೆ ಅವನೋ ಪಕ್ಕಾ ಐಷಾರಾಮದ ಜನವೇ ಆಗಿ ಒಂದು ದಿನ ಕೊನೆ ಕೊಯ್ದರೆ ಎರಡು ದಿನ ಪೇಟೆಗೆ ಹೋಗಬೇಕಾದವನು. ಒಂದು ದಿನ ಕಾಲುನೋವು. ಒಂದು ದಿನ ಸೊಂಟನೋವು. ಸಂಬಳಕ್ಕಿಂತ ಹೆಚ್ಚೇ ಮುಂಗಡ ಆಗಿ ಸಾಕಾಗಿ ಹೋಗಿತ್ತು. ಪೇಟೆಯಿಂದ ಬರುವಾಗ ಗೌರಿಗೆ ರಿಬ್ಬನ್ನು ಬಳೆ.....

ಬೀಡಿಯ ತಂಬಾಕು ಗಂಟಲಲ್ಲಿ ಸಿಕ್ಕಿದಂತಾಗಿ ಕ್ಯಾಕರಿಸಿ ಉಗುಳಿದ.

ಮೋರಿಕಟ್ಟೆಯ ಬಳಿ ಒಂದಾ ಮುಗಿಸಿ ಮತ್ತೆ ದಾಪುಗಾಲು ಹಾಕತೊಡಗಿದ ಮಂಜನಿಗೆ ಯೌವನ ಭಾರಕ್ಕೆ ತೊಯ್ಯುವ ಹುಡುಗಿಯಂತೆ ನಿಟ್ಟುಸಿರು ಬಿಡುತ್ತಾ ನಿಂತ ಅಡಿಕೆ ಮರದ ಚಿತ್ರ ಮರೆಯಲಾಗಲಿಲ್ಲ. ಮರದ ಭಾರ ಇಳಿಸಿ ಮುಂದಿನ ಸಿಂಗಾರ ಒಡೆಯಲು ಅನುವು ಮಾಡಿ ಕೊಡಬೇಕಾದ್ದು ತನ್ನ ಕರ್ತವ್ಯವಾಗಿತ್ತು. ನಾರಾಯಣನನ್ನು ಓಡಿಸಬೇಕಾಯಿತು. ಕೊನೆ ಇಳಿಸುವ ಕಾಲ ಬರುವ ಹೊತ್ತಿಗೆ ಗೌರಿ ಕಾಹಿಲೆ ಬಿದ್ದಳು. ಮೊದಲ ಬಾರಿ ಬಸಿರಿ ಎಂದ ಮೇಲೆ ಚನ್ನಾಗಿ ಉಪಚರಿಸದೆ ಇರಲು ಮನಸ್ಸು ಬಂದೀತೆ? ಬೆಳಿಗ್ಗೆ ಏಳುವುದು ನಿಧಾನ, ಸಂಜೆ ತನಗೇ ಮನೆ ಕೆಲಸ.... ಆದರೆ ತನ್ನನ್ನ ನಂಬಿದ ತೋಟಿಗರಿಗೆ ಲುಕ್ಸಾನು ಆಗಬಾರದು. ಆದಷ್ಟು ಬೇಗ ಒಂದು ಕೊಯ್ಲಾದರೂ ಮುಗಿಸೀಯೇ ಬಿಡಬೇಕು....

ಶಂಕರ ರಾಯರ ಮನೆಯ ದಣಪಲು ದಾಟುತ್ತಿದ್ದಂತೆ ಚಾವಡಿಯಲ್ಲಿ ಕುಳಿತು ಮಗ್ಗಿ ಬರೆಯುತ್ತಿದ್ದ ರಾಯರ ಮೊಮ್ಮಗ 'ಕೊನೇಗೌಡ ಬಂದಾ' ಎಂದು ಸಾರಿದ. ಇದು ತನಕದ ಯೋಚನೆಯನ್ನು ತಟಕ್ಕನೆ ಕೊಡವಿದ ಮಂಜ ಅದೇ ತಾನೇ ಉತ್ಸಾಹಿತನಾಗಿ ಎದ್ದವನಂತೆ 'ಏ, ಮಾಣಿ, ಚಿಕ್ಕಯ್ಯ ಇದಾನೇನೋ- ಬೇಗ ಬೇಗ ಹೆಡಗೆ ಮುಟ್ಟೆ ತಯಾರು ಮಾಡ್ಲಿಕ್ಕೆ ಹೇಳು' ಎಂದು ದೋಟಿಯನ್ನು ಅಟ್ಟಕ್ಕೆ ಸಾಚಿ ಟೊಂಕದಲ್ಲಿದ್ದ ಹಗ್ಗದ ಸಿಂಬೆಯನ್ನು ಕಡಕಿನ ಮಣೆಯನ್ನು ಚಾವಡಿಯ ಕಂಬಕ್ಕೆ ಒತ್ತರಿಸಿ ನಿಲ್ಲಿಸಿ ಅಲ್ಲಿಯೇ ಕುಳಿತು ಬೀಡಿ ಹೊತ್ತಿಸಿದ.

ಫುಲ್ ಸ್ವೆಟರ್ ಹಾಕಿ ಹೊರಬಂದ ರಾಯರ ಮಗ 'ಅಂತೂ ಬಂದ್ಯಲ ಮಾರಾಯ' ಎನ್ನುತ್ತಿದ್ದಂತೆ, 'ಹುಂ, ಲಗೂನೆ ತಯಾರಾಗಿ. ಮಧ್ಯಾಹ್ನದೊಳಗೆ ಒಂದು ತುಂಡು ಮುಗಿಸಿಯೇ ಹೋಗೋದು. ನಮ್ಮನೆ ಪ್ರಾಣಿ ಐತಲ್ಲ- ಅದ್ರೂ ಈಗ ಬೇಗ ಏಳಾಂಗಿಲ್ಲ- ಎಬ್ಬಿಸಿ ಚಾ ಕುಡ್ದವನೆ ಇಲ್ಲಿ ಬಂದು ಬೀಡಿ ಹಚ್ಚೆ' ಎಂದು ಅಗತ್ಯವಿಲ್ಲದ ವಿಷಯಗಳನ್ನು ಹೇಳಿ ತನ್ನ ಅವಸರಕ್ಕೆ ಒತ್ತು ಕೊಟ್ಟ.

ಆಸರಿಗೆ ಮುಗಿಸಿ ಕತ್ತಿಯ ಹರಿತವನ್ನೊಮ್ಮೆ ಪರೀಕ್ಷಿಸಿ ಟೊಂಕಕ್ಕೆ ಸಿಕ್ಕಿಸಿ, ಹಗ್ಗದ ಸಿಂಬೆಯನ್ನು ಎಡತೋಳ ಮೂಲಕ ತೂರಿ ಬಗಲಿಗೇರಿಸಿ, ದೋಟಿಯನ್ನು ಭುಜದ ಮೇಲಿಟ್ಟುಕೊಂಡು, 'ದೌಡ್ ಬನ್ನಿ' ಎಂದು ಮುನ್ನಡೆದ ಮಂಜನಿಗೆ, 'ಮೇಲ್ತೋಟದ ಪೇರ್ಲೇ ಮರದ ಬಣ್ಣದಿಂದಲೇ ಶುರು ಮಾಡನೋ' ಎಂದು ಹಿಂದಿನಿಂದ ರಾಯರ ಮಗ ಕೂಗಿದ್ದು ಕೇಳಿ ನಿಂತ. 'ಕೆಳಗೆ ಹ್ಯಾಂಗೂ ಗೋಟಾಗಕ್ಕೆ ಹಿಡ್ದಿದೆ. ಸಿಗಮ್ಮು ಆಪ್ಗಟ್ ಆದ್ರು ಸಿಗ್ಲಿ' ಎಂಬ ಸಮರ್ಥನೆಯ

ಮಾತೂ ಕೇಳಿಬಂತು. ಹೀಗೆಲ್ಲ ಯಾವಾಗಲೂ ಹೇಳಿಸಿಕೊಳ್ಳಬೇಕಾಗಿರ ಲಿಲ್ಲ. ಇಲ್ಲಿಗೆ ಬರುವಾಗಲೇ ಇಡೀ ತೋಟವನ್ನೆ ಕಣ್ಣಲ್ಲೆ ಅಳೆದು ರಾಯರಿಗೆ ಲಾಭವಾಗುವಂತೆ ಯಾವ ಭಾಗದ್ದು ಶರು ಮಾಡಬೇಕು ಎಂದು ಫೈಸಲು ಹಾಕಿರಲಿಲ್ಲವೆ? ಅಷ್ಟಕ್ಕೂ ಊರಲ್ಲಿ ಇವ ರೊಬ್ಬರೇನಾ? ಬಡಿ ರಾಮಭಟ್ಟರ ತೋಟದಲ್ಲಿ ಮರಕ್ಕೊಂದು ಕೊನೆ ಕೆಂಚಾಗಿಲ್ಲವೆ? ಇವರೇನೋ ಆರೆಕರೆ ತೋಟದ ಕುಳ. ಅರ್ಧಪರ್ದ ತೋಟ ಇಟ್ಟುಕೊಂಡವರ ಕಷ್ಟ? ಹುಂ, ಹುಡುಗು ಬುದ್ಧಿ. ಶಂಕರರಾಯರಿದ್ದರೆ ಮಗನಿಗೆ ಹೇಳಿಯೇ ಬಿಡು ತ್ತಿದ್ದರು- 'ಸುಮ್ನೆ ಕೂತ್ಕೊ. ನಿನಗಿಂತ್ಲು ಮಂಜಂಗೇ ನಮ್ಮ ತೋಟದ ಪರಿಚಯ ಚನ್ನಾ ಗುಂಟು' ಎಂದು.. ರಾಯರ ಮೊಮ್ಮಗ ಚಚ್ಚೆ ಯೊಂದನ್ನು ಹಿಡಿದುಕೊಂಡೇ ಕೂಗಿದ. 'ಬಾರೀ ತೆರೀ ಅಡ್ಕೆ ಉದ್ರಿಸಬ್ಯಾಡ್ರೋ- ನಾನೊಬ್ನೇ ಆರಸವ್ನು ಅಕ್ಕು ಶಾಲೆಗೆ ಹೋಗವ್ನಂತೆ. ನಿಂಗೆ ಭಾನುವಾರ ಬರಕ್ಕೇನು ಧಾಡೀ?' 'ನಿನ್ನಣ್ಣಯ್ಯ ಸಮಾ ನೇಣು ಹಿಡಿದ್ರೆ ಒನ್ ಚಚ್ಚೆ ಅಡ್ಕೇನು ಉದ್ರೋದಿಲ್ಲ' ಎಂದು ಸಮಜಾಯಿಷಿ ನೀಡಿದ ಮಂಜ ತೋಟಕ್ಕಿಳಿದ.

ಅಡಿಕೆ ಮರಕ್ಕೆ ನಮಸ್ಕರಿಸಿ, ಬೀಡಿಯ ಕೊನೆಯ ದಮ್ಮೆಳೆದು ತುಂಡು ಒಗೆದು, ಬಾಯಿತುಂಬ ಎಲೆ ಅಡಿಕೆ ಮೇಲೆ ಕಿರುಬೆರಳು ಗಾತ್ರದ ತಂಬಾಕು ತುರುಕಿ ಸರಸರನೆ ಮರ ಏರಿದ. ಸೊಂಟದಿಂದ ಕಡ ಕಿನ ಮಣೆ ತೆಗೆದು ಅದನ್ನ ಮರಕ್ಕೆ ಜೋಡಿಸಿ ಕುಳಿತು, ಮಣೆ ಹಗ್ಗ ಜಗ್ಗಿ ಗಟ್ಟಿಯಾಗಿರುವುದನ್ನ ದೃಢಪಡಿಸಿ ಕೈ ಬಿಟ್ಟ. 'ಕಡಕಿನ ಮಣೆ ಹಗ್ಗ ಸಂಸಾರ ದಂತೆ. ಗಟ್ಟಿಯಿದ್ದರೆ ಹದಾ ಬಾಳು. ಎಲ್ಲಾದರು ಏನಾದರು ಆಯಿತೋ, ಅಷ್ಟೆ' ಎಂದು ಪೇಪರಿ ನಲ್ಲಿ ಕತೆ ಬರೆಯುವ ಕೆಳಗಿನ ಕೇರಿ ಶ್ರೀಪಾದ ನೇಣು ಹಿಡಿಯುವಾಗ ಹೇಳುತ್ತಿದ್ದುದು ನೆನಪಾಯಿತು. ನೇಣು ಹಗ್ಗವನ್ನು ಸರಿಪಡಿಸಿ, ರಾಯರ ಮಗನಿಗೆ ಸೂಕ್ತ ಸ್ಥಳದಲ್ಲಿ ನಿಲ್ಲಲು ನಿರ್ದೇಶಿಸಿ, ಅಂಡುಗೊಕ್ಕೆಯಿಂದ ಕತ್ತಿ ತೆಗೆದು ಕೊನೆ ಕತ್ತರಿಸಿ ಹಗ್ಗದಿಂದ ಸುಂಯ್ಯನೆ ಇಳಿಬಿಡು ತ್ತಿದ್ದಂತೆ ಅಭ್ಯಾಸಕ್ಕೆ ತೊಡರಿಕೊಂಡ ಮಂಜನ ಕಾಲು ಯಾಂತ್ರಿಕವಾಗಿ ಮರ ದಾಟುತ್ತಿದ್ದವು. ಕೈ



ಗಳು ಯಾಂತ್ರಿಕವಾಗಿ ಕೊನೆ ಕತ್ತರಿಸಿ ನೇಣಿಗೆ ಬಿಡುತ್ತ ಮರ ಸಾಪು ಮಾಡುತ್ತಿದ್ದವು. ಕೆಲಸದ ನಡುವೆಯೇ ತಾನು ಅಂದುಕೊಂಡಷ್ಟು ಕೊನೆಗಳು ಮಧ್ಯಾಹ್ನದೊಳಗೆ ಆಗುವುದಿಲ್ಲವೇನೋ ಎನ್ನಿಸಿತು. ಹಾಗೆಂದು ಎಲ್ಲರ ಹಾಗೆ ಸುಮ್ಮನೆ ಕೊನೆ ಕತ್ತರಿಸಿ ನೇಣಿಗೆ ಬಿಡಲು ಮನಸ್ಸು ಒಪ್ಪ ಲಿಲ್ಲ. ಮಂಜ ಕೊನೆ ಕೊಯ್ದ ಎಂದರೆ ಬಂಜೆ ಮರಗಳೂ ಸಿಂಗಾರ ಒಡೆದಾವು ಎಂದು ರಾಮ ಹೆಗಡೆಯ ತಾಯಿ ಸುಂದ್ರಮ್ಮಜ್ಜಿ ಹೇಳುತ್ತಿರ ಲಿಲ್ಲವೆ? 'ಎಷ್ಟು ಮರಕ್ಕೆ ತಾಯ್ತನ ಕೊಟ್ಟವನು- ನಿನಗೊಂದು ಸಿಂಗಾರ ಆಗ್ಲಿಲ್ಲಲ್ಲೋ' ಎಂದು ಪಶ್ಚಾತ್ತಾಪ ಪಟ್ಟಿದ್ದ ಸುಂದ್ರಮ್ಮಜ್ಜಿ ಕಳೆದ ಮಳೆ ಗಾಲದಲ್ಲಿ ಹರೋಹರ ಆದಾಗ ಭಾರೀ ನೋವಾ ಗಿತ್ತು.

ಈಗ ಇದ್ದಿದ್ದರೆ ಗೌರಿ ಬಸಿರಿ ಎಂದು ತಿಳಿದು ತಾನೇ ಚಕ್ಕೆ ಮೆಣಸಿನ ಕಾಳು ಎಲ್ಲ ಕೊಡುತ್ತಿದ್ದಳು. ಅಷ್ಟಕ್ಕೆ ಗೌರಿಯ ನುಣ್ಣನೆಯ ಉಬ್ಬಿದ ಹೊಟ್ಟೆಯ ನೆನಪಾಗಿ ಮುದಗೊಂಡು ದೊಡ್ಡ ಕೊನೆ ಯೊಂದನ್ನು ಮರದಿಂದ ಬೇರ್ಪಡಿಸಿ 'ಹೋಯ್, ದೊಡ್‌ಕೊನೆ, ಗಟ್ಟಿ ನಿತ್ಕಳ್ಳಿ, ಬಣ್ಣದ ಮೇಲೆ ಪಲ್ಟಿ ಹೊಡ್ದೀರಾ' ಎಂದು ಹೇಳುತ್ತ, ಕತ್ತರಿಸದೆ ಉಳಿದ ಕೊನೆಯ ತೊಟ್ಟಿನ ಪಳೆಯುಳಿಕೆಯನ್ನು ಮರದಿಂದ ತೆಗೆದು, ಕೊನೆಯನ್ನ ತೊಡೆಯ ಮೇಲೆ ತೆಗೆದುಕೊಂಡು, ಮುಂದಿನ ವರ್ಷ ಇನ್ನೂ ಬಲ ವಾದ ಕೊನೆಯಿದೆ ಎಂಗುಕೊಂಡು ಹೊಸೆಯನ್ನ ಮಿದುವಾಗಿ ತಟ್ಟಿದ. ಕೊನೆ ಬರುವುದು ತಡವಿದೆ ಎಂದು ಬಾಗಿದ ರಾಯರ ಮಗನಿಗೆ ಕೊನೆ ಜರ್‍ರನೆ ಇಳಿಯುವುದು ಕಂಡು ಕಂಗಾಲಾಗಿ, ಅವಸರದಲ್ಲಿ ಕಾದಿಗೆಗೆ ಜಾರಿ ಪಲ್ಟಿಹೊಡೆದ. ಆತ ಕೈಯಲ್ಲಿ ಹಿಡಿದ ಹಗ್ಗ ಜಗ್ಗಿದಾಗ ಆಗ ತಾನೆ ಗಡಕಿನ ಮಣೆ

ತೆಗೆಯುತ್ತಿದ್ದ ಮಂಜನ ಸೊಂಟವು ಜಗ್ಗಿ ಓಡಿದ ಒಂದು ಕೈಯುಜಾರಿ ದಡ್ಡನೇ ಕೆಳಗಿನ ಬಾಳೇ ಮರದ ಮೇಲೆ ಬಿದ್ದು ಅದರೊಟ್ಟಿಗೇ ನೆಲಸೇರಿದ.

ಎಚ್ಚರಾದಾಗ ಇಡೀ ಭೂಮಿಯನ್ನು ಮೈಮೇಲೆ ಹೊತ್ತುಕೊಂಡಷ್ಟು ಭಾರ. ಮೈಯನ್ನು ಹರಿದಾಡಿಸಲು ಆಗಲಿಲ್ಲ. ನಿಧಾನಕ್ಕೆ ಕಣ್ಣೊಡೆದು ಕಣ್ಣುಬೇಳೆಯನ್ನು ಆಚೀಚೆ ಹೊರಳಿಸಿ ನೋಡಿದ. ಕಾಲಿನ ಬಳಿ ಕುಳಿತ ಶೆಟ್ಟಿ ಜಗ್ಗ ಬೀಡಿ ಎಳೆ ಯುತ್ತ ಕುಳಿತವನು ಇವನತ್ತ ನೋಡಿ, 'ಓ ಎಚ್ಚರಾಯ್ತ ಗೌಡ್ರೆ' ಎಂದು ತುಸು ಸಮೀಪ ಜರುಗಿ, ಏನ್ ಹೆದ್ರಬ್ಯಾಡಿ. ಪ್ರಾಣಕ್ಕೇನು ಅಪಾಯ ಇಲ್ಲಂತೆ. ಭಾರೀ ಗಟ್ಟಿ ಜೀವ ನಿಮ್ದು. ಓಟೆತ್ರದಿಂದ ಬಿದ್ರು... ಅದ್ ಹೌದು. ಅದ್ ಹ್ಯಾಂಗೆ ಬಿದ್ರೀ ನೀವು ಅಂತೀನಿ?' ಎಂದ. ಮಂಜ ಬರಿದೆ ನಕ್ಕ. ಹೌದು. ತಾನು ಬಿದ್ದುದಾದರು ಹೇಗೆ? ನಿನ್ನೆ ಮೊನ್ನೆ ಕಲಿತ ಕಸುಬೆ? 'ಅಯ್ ಬಿಡು ಜಗಣ್ಣಾ. ಬಿದ್ದದ್ ಹ್ಯಾಂಗೆ ಅಂತ ಈಗ ಮತ್ತೆ ಬಿದ್ದು ತೋರ್‍ಸೊಕೆ ಆತದಾ? ಏನೋ ನೋವ್ ತಿಂಬ ಶನಿ ಇತ್ತು. ಅದೂ ನಂಗ ಹುಷಾರಿಲ್ದೆ ಇರೊವಾಗ್ಲೆ ಹಿಂಗಾಪ್ಪ? ಎಲ್ಲ ಗ್ರಹಚಾರ.' ಗೋಡೆಯ ಮಗ್ಗುಲಲ್ಲಿ ಕುಳಿತು ಅಕ್ಕಿ ಆರಿಸುತ್ತಿದ್ದ ಗೌರಿ ಹೇಳಿದಳು. ನಿಜ. ತನಗೆ ನೋವು ತಿನ್ನುವ ಶನಿಯೇ. ಆದರೆ ಈ ಸಮಯದಲ್ಲಿ ಹೀಗೆ ಮಲಗಿದರೆ ಮುಂದೆ ಹೊಟ್ಟೆ ಪಾಡೇನು.... ದೇವರೇ....

ಕಟ್ಟು ಹಾಕಿದ್ದ ಕಾಲನ್ನ ಉದ್ದಕ್ಕೆ ನೀಡಿ ಗೋಡೆಗೆ ಒರಗಿ ರಸ್ತೆಯಲ್ಲಿ ಆಡುವ ಮಕ್ಕಳನ್ನ ನೋಡುತ್ತ ನಿಟ್ಟುಸಿರು ಬಿಟ್ಟ ಮಂಜನಿಗೆ ತನ್ನ ಬಗ್ಗೆಯೇ ಕ್ರೋಧ ಉಕ್ಕಿ ಬರುತ್ತಿತ್ತು. ಯಾಕೆ ನಿಶೆ ಏರಿದವನಂತೆ ತಾನು ಕೊನೆ ಕೆಳಗಿಳಿಯುವುದರ ಒಳಗೆ ಕಡಕಿನ ಮಣೆ ತೆಗೆದೆ ಎಂದು ನೂರಾ ಒಂದನೆಯ ಬಾರಿ ತನ್ನನ್ನ ಕೇಳಿಕೊಂಡ. ಇವಳ ಉಪಚಾರಕ್ಕೆಂದು ಎಲ್ಲರಿಂದ ಕೊನೆ ಕೊಯ್ಲಿನ ಅಡ್ವಾನ್ಸು ತೆಗೆದುಕೊಂಡಾಗಿದೆ. ಈಗ ಡಾಕ್ಟರಿಗೆ ಸುರಿಯಲು ಹಣ ಬೇಕು. ಮನೆಯಲ್ಲಿ ಸಾಮಾನಿಲ್ಲ. ಮಲಗಿ ವಾರವಾಗಿದೆ. ಎದ್ದು ಓಡಾಡುವಷ್ಟಾಗಲು ಇನ್ನೊಂದು ತಿಂಗಳು ಬೇಕಂತೆ. ಇವಳೇ ರಾಮ ಹೆಗಡೆಯವರಿಂದ, ವಸಂತ ಭಟ್ಟರಿಂದ ಇನ್ನೂರು ರೂಪಾಯಿ ತಂದು ಕಾಲಿಗೆ ಕಟ್ಟು ಹಾಕಿಸಿದ್ದಾಳಂತೆ. ಇವಳು ಹೋದರೆ ಇನ್ನೆಷ್ಟು ಹುಟ್ಟೀತು? ತಾನು ಓಡಾಡುವಷ್ಟಾದರೂ ಆದರೆ ಹೋಗಿ, ಕಾಲಿಗೆ ಬಿದ್ದು... ಆದರೆ ಹೇಗೆ ಹೋಗುವುದು. ಈಗ ಉಳಿದ ಧಾರಾಳಿಗಳೆಂದರೆ ಶಂಕರ ರಾಯರೊಬ್ಬರೇ. ಅವರು ಇಂದು ಬೆಳಿಗ್ಗೆಯಷ್ಟೆ ಮಣಿಪಾಲದಿಂದ ಬಂದರು ಎಂದು ಜಗ್ಗ ಹೇಳಿದ್ದ. ತಾನು ಬಿದ್ದುದು ಅವರ ಮಗ ಯಪರಾ ತಪರಾ ನೇಣು ಹಗ್ಗ ಜಗ್ಗಿದ್ದರಿಂದಲೇ ಅಲ್ಲವೆ? ಮನೆಗೆ ಬಂದ ತಕ್ಷಣ ಅವರಿಗೆ ತನ್ನ ಅವಸ್ಥೆ ಗೊತ್ತಾಗಿರುತ್ತದೆ. ಇಂದು ಸಂಜೆಯ ಒಳಗೆ ಬಂದೇ ಬರುತ್ತಾರೆ. ಹೇಗಾದರೂ ಒಮ್ಮೆ ದೊಡ್ಡಾಸ್ಪತ್ರೆಗೆ ಹೋಗಿ ಮತ್ತೆ ಕಾಲನ್ನ ಸರಿಪಡಿಸಿಕೊಂಡು ಜೀವನದ ಉದ್ಯೋಗವನ್ನು ಉಳಿಸಿಕೊಳ್ಳುವಂತಾದರೆ ಸಾಕು....

ಹೀಗೆ ಯೋಚಿಸುತ್ತ ಕುಳಿತ ಮಂಜನಿಗೆ ಹೊತ್ತು ಇಳಿದದ್ದು ಗೊತ್ತಾಗಿರಲಿಲ್ಲ- ಗೌರಿ ಬಂದು ಚಿಮಣಿ ಹಚ್ಚಿಡುವ ತನಕ. ಮತ್ತೆ ಎರಡು ಕ್ಷಣದಲ್ಲಿಯೆ ದಡದಡನೆ ಬಂದ ಗೌರಿ ಮೂಲೆಯಲ್ಲಿಟ್ಟ ಚಾಪೆ ಬಿಡಿಸಿ, 'ರಾಯರು ಬರ್‍ತಾ ಅವ್ರೆ' ಎಂದು ಪಿಸುಗುಟ್ಟಿ ಒಳನಡೆದಳು. ಶತಮಾನಗಳಿಂದ ನಿರೀಕ್ಷಿಸುತ್ತಿದ್ದ ಮಾತು ಕೇಳಿಸಿದಂತೆ ಪುಳಕಗೊಂಡ. 'ನನ್ನ ಮಗನ ಉಡಾಫೆಯಿಂದ ನಿನಗೆ ಇಂಥ ನೋವಿನ ಶನಿ ಬಂತಲ್ಲೊ ಮಾರಾಯ- ಹೆದ್ರಬೇಡ ನಾವಿದೇವೆ!' ಎಂಬ ರಾಯರ ಸಮಾಧಾನ ತನಗೆ ನೂರು ಆನೆಯ ಬಲ ತರಬಹುದೆಂದು ಕಾಯುತ್ತ ಪಂಚೆ ಸರಿಪಡಿಸಿಕೊಂಡು ಬಾಗಿಲಾಚೆಯ ಕತ್ತಲೆಗೆ ಕಣ್ಣು ಹೊಂದಿಸಿದ. ಅಷ್ಟರಲ್ಲಿ ಬಾಗಿಲ ಮೇಲಿನ ತೊಲೆಗೆ ಕೈಯೊತ್ತಿ ಒಳಗಿಣಕಿದ ರಾಯರನ್ನು ಕಂಡೊಡನೆ, 'ಬನ್ನಿ ಬನ್ನಿ. ರಾಯ್ರೆ ಇಕ ಇಲ್ಲಿ ಕೂರ್‍ಕಣಿ. ನನ ಗ್ರಹಚಾರ ಕಾಣಿ- ನೀವು ಬರೂದ್ರೊಳ್ಗೆ ನಿಮ್ ತೊಡುಕೊಯ್ಲು ಮುಗ್ಸಿಯೇ ಬಿಡ್ಕು ಅಂದ್ಕಂಡ್ರೆ....' ಎಂದ ಮಂಜನ ಮಾತಿಗೆ ಗಮನ ಕೊಡದವರಂತೆ ಒಳಬಂದ ರಾಯರು, 'ಕೂತ್ಗಂಡ್ರೆ ನಂ ಕೆಲ್ಸ ಆಗೂದು ಹ್ಯಾಂಗ್ ಮಂಜ. ನಿನ್ ದುಡುಕಿಂದ ನೇಣು ಹಿಡಿದ ನನ್ಮಗನ್ನ ಕೈನೂ ಉಳುಕಿಸ್ಟ- ಒಬ್ ಮಗ ತಲೆ ಒಡ್ದು ಆಸ್ಪತ್ರೇಲಿದಾನೆ- ಇವನು ಹೀಗೆ. ನಿನಗೆ ಅಡ್ವಾನ್ಸ್ ಕೊಟ್ಟ ಗ್ರಾಚಾರ

ಹಳೀತಾ ಸುಮ್ನೆ ಕೂತ್ಕಳ್ಳಕ್ಕೆ ಬರೂದಿಲ್ಲವಲ್ಲ- ಮತ್ತೊಂದು ಕೊನೇ ಗೌಡನ್ನ ಹುಡುಕ್ಕೊಂಡಾದ್ರು ಹೋಗ್ಬೇಕಲ್ಲ. ಗ್ರಾಚಾರ ನಿಂದಲ್ಲ-ನಂದು' ಎಂದರು. ರಾಯರ ಮಾತಿನ ಕಾವು ಬಿಸಿ ಎಣ್ಣೆ ಯಂತೆ ಕಿವಿಯಲ್ಲಿ ಸುರಿಯುತ್ತಲೆ ಮಂಜನ ಗಂಟಲು ಆರಿತು. ಸಾವರಿಸಿಕೊಂಡು 'ಇಲ್ಲ ರಾಯ್ರೆ, ಇನ್ನೊಂದು ತಿಂಗ್ಳು ಅಷ್ಟೇ ಅಂದವ್ರೆ ಡಾಕ್ಟರು. ಕೊಯ್ಲು ಕೊನೆ ಅರ್ಧ ಲೆಕ್ಕ ತಗೋಂತೀನಿ- ಗಂಜೀನಾರು ಕುಡ್ಸು ನಿಮ್ ಋಣಾ ತೀರಿಸ್ತೆ...' ಎಂದು ಆತ ಪೀಠಿಕೆ ಹಾಕು ತ್ತಿದ್ದಂತೆ 'ಏನ್ಮಾಡ್ತೀಯೋ ಮಾಡ್ಕೋ ಮುಖ್ಯ ನಂ ಗ್ರಹಚಾರ' ಎನ್ನುತ್ತ ರಾಯರು ಬಂದಂತೆಯೇ ತಿರುಗಿ ಕಣ್ಮರೆಯಾದರು. ಅವರ ಚಪ್ಪಲಿಯ ಚರ್‌ಚರ್ ಶಬ್ದ ಕೇಳುತ್ತ ನಿಟ್ಟುಸಿರು ಬಿಟ್ಟ ಮಂಜ ನನ್ನೆ 'ರಾಯರೆಲ್ಲಿ?' ಎಂದು ಹಾಲು ಹಿಡಿದು ನಿಂತ ಗೌರಿ ಕೇಳಿದಾಗ, ತಡಬಡಿಸಿ ಅವಳತ್ತ ಮಿಕಿ ಮಿಕಿ ನೋಡುತ್ತ 'ರಾಯರು ಬಂದಿದ್ದರೆ?' ಎಂದ. ರಾಯರು ಬಂದು ಹೋದುದು ನಿಜವಾದರೂ ಅವನ ನಿರೀಕ್ಷೆಯ ರಾಯರು ಅವರಾಗಿರಲಿಲ್ಲವಾಗಿ ಪಾರ್ಶ್ವ ಹೊಡೆದವನಂತೆ ಕುಳಿತಿದ್ದ ಮಂಜನ ಬಳಿ ಜಗ್ಗ ಬಂದು ಕುಳಿತು, 'ಕೇಳ್ತ ಮಂಜಣ್ಣ, ರಾಯರ ತಮ್ಮ ನಮ್ ನಾರಾಯಣನ್ನ ಕರ್ಕಂಬರಾಕೆ ಗಟ್ಟದ ಕೆಳ್ಗೆ ಹೋಗ ವ್ರಂತೆ-ಇಲ್ಲಿಯೇ ಅವರಿಗೆ ಬಿಡಾರ ಹಾಕ್ಕೊಂಡ್ತಾರಂತೆ' ಎಂದ. ಮಂಜನ ಮನಸ್ಸು ಕೆಲಸ ಮಾಡುವ ಸ್ಥಿತಿ ಕಳೆದುಕೊಂಡಿದ್ದರಿಂದ ಬಾಗಿಲ ಬಳಿ ನಿಂತು ಕತ್ತಲೆಯನ್ನು ನೋಡುತ್ತಿದ್ದ ಗೌರಿಯ ಸಂಭ್ರಮ, ಅವನಿಗೆ ಅರ್ಥವಾಗಲೇ ಇಲ್ಲ.

●

# ನೆನಪು ನೆರಳಿನಲ್ಲಿ...

ಚಿಕ್ಕವನಿದ್ದಾಗ ನನಗೆ ಸಿನಿಮಾ ನೋಡುವ ಹಂಬಲ. ಆದರೆ ಮನೆಯಲ್ಲಿ ಬಡತನದ ಛಾಯೆ ಮುಸುಕಿತ್ತು. ಅಪ್ಪ ಇಲ್ಲವಾದ ಕಾರಣ ಅವ್ವನೇ ಮನೆಯನ್ನು ನಡೆಸುತ್ತಿದ್ದಳು. ಒಮ್ಮೆ ಮನೆಯಲ್ಲಿದ್ದ ಒಂದು ರೂಪಾಯಿ ನನ್ನ ಕಣ್ಣಿಗೆ ಬಿತ್ತು. ಬಹುದಿನದ ಸಿನಿಮಾ ಆಸೆಯನ್ನು ಪೂರೈಸಿಕೊಂಡು ಕಳ್ಳ ಬೆಕ್ಕಿನಂತೆ ಬಂದು ಮಲಗಿದೆ.

ಅವ್ವ ಮುಂಜಾನೆ ಆ ಒಂದು ರೂಪಾಯಿಗಾಗಿ ಹುಡುಕಿದ್ದೇ ಹುಡುಕಿದ್ದು. ನನ್ನನ್ನು ಕೇಳಿದಾಗ, ಆಶ್ಚರ್ಯ ನಟಿಸಿ ಪಾರಾದೆ. ಆದರೆ ಆ ರೂಪಾಯಿಗಾಗಿ ಎಷ್ಟು ಕಷ್ಟಪಟ್ಟಿದ್ದಳೋ! ಈ ಘಟನೆ ನೆನಪಾದಾಗಲೆಲ್ಲ ದುಃಖ ಒತ್ತರಿಸಿ ಬರುತ್ತದೆ. ನಮ್ಮನ್ನು ಬಿಟ್ಟು ಶಾಶ್ವತ ಲೋಕಕ್ಕೆ ಹೊರಟು ಹೋಗಿರುವ ಆಕೆಯಲ್ಲಿ ಮೌನವಾಗಿ ಕ್ಷಮೆ ಕೋರುತ್ತೇನೆ.

● ಎಚ್.ಕೆ. ಆಲೂರು

ಹದಿನೈದು ವರ್ಷಗಳ ಹಿಂದೆ ನಾನು ಮಾಧ್ಯಮಿಕ ಶಾಲಾ ವಿದ್ಯಾರ್ಥಿ. ಹುಟ್ಟಿದ್ದು, ಬೆಳೆದದ್ದು ಬೆಂಗಳೂರಿನಲ್ಲಿ. ಆಗಲೂ ಬೆಂಗಳೂರಿನಲ್ಲಿ ಮೂಲಭೂತ ಸೌಕರ್ಯಗಳ ಕೊರತೆ ಇತ್ತು. ಪಡಿತರ ಚೀಟಿಗೆ ಬಹಳ ಮರ್ಯಾದೆ. ಅಕ್ಕಿ, ಸಕ್ಕರೆ, ಗೋದಿ, ಸೀಮೆಎಣ್ಣೆ, ಪಾಮ್‌ಎಣ್ಣೆ ಪಡೆಯಲು ನಮ್ಮಲ್ಲಿ ಪಡಿತರ ಚೀಟಿ ಇರಲಿಲ್ಲ. ನಾವು ಮುಂಜಾನೆ ಮತ್ತು ಸಂಜೆ ಪಡಿತರ ಅಂಗಡಿಯೆದುರು ನಿಲ್ಲಬೇಕು. ಅಂಗಡಿಯಾತ ಕರುಣೆಯಿಂದ ಕೊಟ್ಟರೆ ತರಬೇಕು; ಇಲ್ಲದಿದ್ದರೆ ಇಲ್ಲ. ಬರಿಗೈಯಲ್ಲಿ ಮನೆಗೆ ಬಂದರೆ ಅಮ್ಮನಿಂದ 'ಕೈಲಾಗದವನು', 'ಅವಿವೇಕಿ' ಇತ್ಯಾದಿ ಬೈಗುಳ ಕೇಳಬೇಕು. ಅಂಗಡಿಗೆ ಹೋಗದೆ ಎಲ್ಲೆಲ್ಲಿಯೋ ಆಟವಾಡಿ ಕಾಲಕಳೆದು ಮನೆಗೆ ಬಂದನೆಂದು ಆಕೆ ತಿಳಿದುಕೊಂಡಿರುತ್ತಿದ್ದಳು.

ರಾತ್ರಿ ಮನಸ್ಸಿಲ್ಲದ ಮನಸ್ಸಿನಿಂದ ಮರುದಿನದ ಶಾಲೆಗೆ ಹೊರಡಲು ತಯಾರಿ ಮಾಡಿಕೊಳ್ಳಬೇಕಾಗಿತ್ತು. ಅಕ್ಕಪಕ್ಕದ ಮನೆಯ ಹುಡುಗರು ಆಗಷ್ಟೇ ಆಟವಾಡಿ ಬಂದು ಅದನ್ನೇ ಮಾತನಾಡುತ್ತಿರುವಾಗ ಅಮ್ಮ ಬೈದದ್ದಕ್ಕಿಂತಲೂ, ಹೊಡೆದದ್ದಕ್ಕಿಂತಲೂ ಹೆಚ್ಚು ನೋವಾಗುತ್ತಿತ್ತು. ಬೆಳಕು ಹರಿದಾಗ ಶಾಲೆಗೆ ಮುನ್ನ ಪಡಿತರ ಅಂಗಡಿಗೆ ಹೋಗಲು ಮತ್ತೆ ಅಮ್ಮನಿಂದ ಆಜ್ಞೆ. ಕಾರ್ಡು ಇರುವವರು ಠಾಕುಠೀಕಾಗಿ ಬಂದು ಅಂಗಡಿಯವನಿಂದ ನಮಸ್ಕಾರ ಸ್ವೀಕರಿಸಿ ಸಾಮಾನು ಕೊಂಡೊಯ್ಯುವಾಗ ಸಿನಿಮಾ ಹೀರೋಗಳಂತೆ ಕಾಣುತ್ತಿದ್ದರು. ನಾನು ಮುಖ ಒಣಗಿಸಿಕೊಂಡು ನಿಂತಿರುತ್ತಿದ್ದೆ. ಒಮ್ಮೊಮ್ಮೆ ಅಂಗಡಿಯವ ನನ್ನನ್ನು ಗದರಿ ಕಳಿಸುತ್ತಿದ್ದ. ಕರುಣೆ ಹೆಚ್ಚಾದಾಗ ದಿನಸಿ ಕೊಟ್ಟುಬಿಡುತ್ತಿದ್ದ.

ಈಗ ನಮ್ಮ ಪರಿಸ್ಥಿತಿ ಸುಧಾರಿಸಿದೆ. ಉಂಡುಡಲು ಯೋಚನೆ ಇಲ್ಲ. ಆದರೆ ಒಮ್ಮೊಮ್ಮೆ ಪಡಿತರ ಅಂಗಡಿಯ ನೆನಪು ನನ್ನ ಹೃದಯವನ್ನು ಕಲಕುತ್ತಿರುತ್ತದೆ.

● ಗಂಗೇನಹಳ್ಳಿ ಲಕ್ಷ್ಮೀನಾರಾಯಣ

ನಮ್ಮ ಅಣ್ಣನ ಮಗ ಯತೀಂದ್ರನಿಗೆ ಅಜ್ಜಿ ಎಂದರೆ ಪ್ರಾಣ. ಅವನಿಗೆ ಸ್ನಾನ ಮಾಡಿಸಲು, ಮೈ ತೊಳೆಯಲು, ಕಥೆ ಹೇಳಿ ಮಲಗಿಸಲು ಹೀಗೆ ಪ್ರತಿಯೊಂದಕ್ಕೂ ಆಕೆಯೇ ಬೇಕು. ಹೀಗೊಮ್ಮೆ ನನ್ನ ತಮ್ಮನ ಹೆಂಡತಿಗೆ ಆರೋಗ್ಯ ಸರಿ ಇರಲಿಲ್ಲವಾದ ಕಾರಣ ಅಮ್ಮ ದಾವಣಗೆರೆಗೆ ಹೋದಳು. ಯತೀಂದ್ರ ಅತ್ತು ರಂಪ ಮಾಡಿದ. ನಂತರ ಅಳು

ನಿಲ್ಲಿಸಿದರೂ ತುಂಬ ಸಪ್ಪಗಿದ್ದ. ಸರಿಹೋಗುತ್ತಾನೆಂದು ನಾವು ಸುಮ್ಮನಾದೆವು.

ನಿತ್ಯದ ರಾತ್ರಿಯಂತೆ ಅಣ್ಣ ಹಾಲಿಗೆಂದು ಹಣ ವನ್ನು ತೆಗೆದಿಟ್ಟು ಅತ್ತಿಗೆಗೆ ಹೇಳಿ ಮಲಗಿದ. ಮರುದಿನ ಹಣ ನಾಪತ್ತೆ. ಎಷ್ಟು ಹುಡುಕಿದರೂ ಸಿಗಲಿಲ್ಲ. ಯತೀಂದ್ರನನ್ನು ಸ್ನಾನ ಮಾಡಿಸಲು ಕರೆ ದೊಯ್ದಾಗ ಬಟ್ಟೆ ಬಿಚ್ಚಿಸಿಕೊಳ್ಳಲು ನಿರಾಕರಿಸಿದ. ಬಲವಂತದಿಂದ ಅವನ ಅಂಗಿ ಬಿಚ್ಚಿದಾಗ ದುಡ್ಡು ಕೆಳಗೆ ಬಿತ್ತು. ಮಗನನ್ನು ಹೊಡೆಯಲು ಅಣ್ಣ ಎತ್ತಿದ ಕೈಯನ್ನು ತಡೆದೆ. ಯತೀಂದ್ರನನ್ನು ತೊಡೆ ಮೇಲೆ ಕುಳ್ಳಿರಿಸಿಕೊಂಡು ರಮಿಸಿ, "ಹಣ ಏಕೆ ತೆಗೆದುಕೊಂಡೆ?" ಎಂದು ಕೇಳಿದೆ. "ಅಜ್ಜಿ ಬೇಕು ಅದಕ್ಕೆ," ಅಂದ. "ಅಜ್ಜಿಗೂ ಈ ದುಡ್ಡಿಗೂ ಏನೋ ಸಂಬಂಧ?" ಎಂದು ನಕ್ಕೆ. ನನ್ನ ನಗು ವಿನಿಂದ ಉತ್ಸಾಹಿತನಾಗಿ ಅಳು ನಿಲ್ಲಿಸಿ, "ದಾವಣ ಗೆರೆಗೆ ಹೋಗಿ ಅಜ್ಜಿಯನ್ನು ಕರೆದುಕೊಂಡು ಬರು ತ್ತೇನೆ. ಬಸ್ಸಿಗೆ ದುಡ್ಡು ಬೇಡವಾ? ಅದಕ್ಕೇ ತಗೊಂಡೆ," ಅಂದ. ಅವನ ಕಣ್ಣುಗಳಲ್ಲಿ ನೀರು ಇಂಗಿದ್ದರೂ ಕಣ್ಣಿನಲ್ಲಿ ನೀರು ಬರುವ ಸರದಿ ನಮ್ಮ ದಾಗಿತ್ತು.

● ವತ್ಸಲಾ ಬೆಳಗಾಂವಕರ

೧೯೨೭-೨೮ರ ಬೇಸಿಗೆಯ ಒಂದು ಮಧ್ಯಾಹ್ನ. ಅವಿಭಕ್ತ ಕುಟುಂಬದ ಮಕ್ಕಳಾಗಿದ್ದ ನಾವು ಪರೀಕ್ಷೆಗಾಗಿ ತಯಾರಿ ನಡೆಸುತ್ತಿದ್ದೆವು. ಜಾನಕಿ ಚಿಕ್ಕಮ್ಮ ನಮಗೆಲ್ಲ ತಟ್ಟೆ ಹಾಕಿ ಊಟಕ್ಕೆ ಕರೆದಳು. ನಮ್ಮ ನಾಲಿಗೆ ಊಟದ ಸವಿಯನ್ನು ಆಸ್ವಾದಿಸುತ್ತಿದ್ದಂತೆಯೇ ಮನೆಯಲ್ಲಿ ಏನೋ ನೆರ ಳಾಡಿದಂತಾಯಿತು. ಮಾವನ ಮಗ ಶಿವು ಮೆಲ್ಲನೆ ಎದ್ದು ಹೊರಗೆ ಹೋಗಿ ನೋಡಿ, "ಅಯ್ಯೋ ಕಳ್ಳಾ...." ಎಂದು ಕಿರುಚಿದ. ಊಟ ಮಾಡು ತ್ತಿದ್ದವರಲ್ಲಿ ವೀರಾವೇಶ ತುಂಬಿತು. ಎಂಜಲು ಕೈ ಯಿಂದಲೇ ಎದ್ದು ಹೋಗಿ ಬಂದವನನ್ನು ಮುತ್ತಿ ಕೊಂಡು ಬಡಿದರು, ಬೈಗುಳ ಸುರಿಸಿದರು.

ಅಡಿಗೆ ಮನೆಯಲ್ಲಿದ್ದ ಚಿಕ್ಕಮ್ಮ, ಗಲಾಟೆ ಕೇಳಿ ಹೊರಗೆ ಓಡಿ ಬಂದು ಆ ಆಗಂತುಕನನ್ನು ಬಿಡಿಸಿ, ಹುಡುಗರನ್ನು ಗದರಿಸಿ ಒಳಗೆ ಕಳಿಸಿದಳು. ಬಂದಿದ್ದವನ ಕಷ್ಟ-ಸುಖ ವಿಚಾರಿಸುತ್ತಲೆ ಅವನ ಕೈಗೆ ನೀರು ಹಾಕಿ ಊಟ ಬಡಿಸಿದಳು. ಪಾಪ, ಹೊಟ್ಟೆಗಿಲ್ಲದೆ ಕಳ್ಳತನಕ್ಕಿಳಿದನೆಂದು ಅಲವತ್ತುಕೊಂಡಳು. "ಹುಡುಗರಿಗೆ ಗೊತ್ತಾಗುವು ದಿಲ್ಲಪ್ಪ, ನೊಂದುಕೋಬೇಡ" ಎಂದು ಬಂದಾತ ನಿಗೆ ಸಮಾಧಾನ ಹೇಳಿದಳು.

ಬಂದಾತನ ಹೆಸರು ಹುಚ್ಚಪ್ಪ. ತನ್ನ ದುರ ಭ್ಯಾಸಕ್ಕೆ ಇಂದೇ ಕೊನೆ, ಮುಂದೆಂದೂ ಹಾದಿ ತಪ್ಪುವುದಿಲ್ಲ ಎಂದು ಆಣೆ ಹಾಕಿದ. ಅದರಂತೆ ನಡೆದುಕೊಂಡ. ಸುಮಾರು ೩೫ ವರ್ಷಗಳ ಕಾಲ ನಮ್ಮ ಮನೆಗೆ ಬಂದು ತೆಂಗಿನಕಾಯಿ ಇಳಿಸುವುದು, ಸೌದೆ ಸೀಳು ವುದು, ಪಾತಿ ಮಾಡುವುದು ಇತ್ಯಾದಿ ಕೆಲಸ ಗಳನ್ನು ಯಾರ ಉಸ್ತುವಾರಿಯೂ ಇಲ್ಲದೆ ಅಚ್ಚುಕಟ್ಟಾಗಿ ನಡೆಸಿಕೊಡುತ್ತಿದ್ದ. ಈ ಘಟನೆ ನಡೆದು ಈಗ ಸುಮಾರು ಅರವತ್ತೈದು ವರ್ಷಗಳು ಸಂದಿವೆ ಯಾದರೂ ಅದು ನನ್ನ ಸುಖಾನುಭವಗಳಲ್ಲಿ ಒಂದಾಗಿದೆ.

● ಗೌರಮ್ಮ ಮೂರ್ತಿ

ಮೊನ್ನೆ ಮೊನ್ನೆ ಬಂಧುವೊಬ್ಬರ ಅಂತ್ಯಕ್ರಿಯೆ ಗಾಗಿ ಬೆಂಗಳೂರಿನ ವಿಲ್ಸನ್‌ಗಾರ್ಡನ್‌ನ ಸ್ಮಶಾನ ಕ್ಕೆ ಹೋಗಿದ್ದೆ. ಅಂತ್ಯಕ್ರಿಯೆಯ ಕೆಲಸ ಸಾಗಿ ದ್ದಂತೆಯೇ ಆಚೀಚೆ ನೋಡತೊಡಗಿದ ನನಗೆ ಒಂದು ಸಮಾಧಿಯ ಮೇಲಿನ ಫಲಕ ತುಂಬ ಸಂಕಟವುಂಟು ಮಾಡಿತು. ಮೃತರ ಹೆಸರು 'ಶಾಶ್ವತಿ'. ಜನನ: ೧೯೮೭ - ಮರಣ: ೧೯೯೨! ಅಯ್ಯೋ, ಕೇವಲ ಐದು ವರ್ಷದ ಮಗು! ತಂದೆ-ತಾಯಿ ಅದೆಷ್ಟು ಆಸೆಯಿಂದ ಮಗು ಚಿರಂಜೀವಿ ಯಾಗಲೆಂಬ ಅಭಿಲಾಷೆಯಿಂದ ಆ 'ಶಾಶ್ವತಿ' ಎಂಬ ಹೆಸರಿಟ್ಟಿದ್ದರೋ! ಆದರೆ ವಿಧಿ ಆ ಮಗು ವನ್ನು 'ಶಾಶ್ವತವಾಗಿ' ಮಲಗುವಂತೆ ಮಾಡಿ ತ್ತಲ್ಲ.... ಎಂದೆಲ್ಲ ಯೋಚಿಸುತ್ತಿದ್ದಂತೆಯೇ ನನ್ನ ಕಣ್ಣು ಹನಿಗೂಡಿತು.

● ಎಸ್.ಸಿ. ಶಿವನಂಜಪ್ಪ



# 'ಸಾಕ್ಷ್ಯ' ಅಂದರೇನು?

● ಎಸ್. ನಾರಾಯಣಮೂರ್ತಿ
ನಿವೃತ್ತ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶ,
ಬೆಂಗಳೂರು.

ನ್ಯಾಯಾಲಯದಲ್ಲಿ ಒಬ್ಬ ಸಾಕ್ಷಿಯ ಮುಖ್ಯ ವಿಚಾರಣೆ, ಅವನ ಪಾಟೀ ಸವಾಲು ಮತ್ತು ಅವನ ಪುನರ್ವಿಚಾರಣೆ ಈ ಮೂರು ವಿಧಾನದಲ್ಲಿ ಅವನ ಹೇಳಿಕೆಯಾದಲ್ಲಿ ಅದಕ್ಕೆ ಅವನ "ಸಾಕ್ಷ್ಯ"ವೆಂದು ಕರೆಯಲಾಗುತ್ತದೆ. ೧೮೭೨ರ ಭಾರತ ಸಾಕ್ಷ್ಯ ಅಧಿನಿಯಮದ ೧೩೭ ಮತ್ತು ೧೩೮ನೆ ಪ್ರಕರಣಗಳು ಸಾಕ್ಷಿಯ ವಿಚಾರಣಾ ಕ್ರಮದ ಬಗ್ಗೆ ಬೆಳಕನ್ನು ಚೆಲ್ಲುತ್ತವೆ.

ನ್ಯಾಯಾಲಯದಲ್ಲಿ ಒಬ್ಬ ಪಕ್ಷಕಾರ ಯಾವುದಾದರೂ ಸಂಗತಿಯ ರುಜುವಾತಿಗಾಗಿ ಸಾಕ್ಷ್ಯವನ್ನು ಕೊಡಲು ಒಬ್ಬ ಸಾಕ್ಷಿಯನ್ನು ಕರೆದುಕೊಂಡು ಅವನ ವಿಚಾರಣೆಯನ್ನು ಆ ಬಗ್ಗೆ ಮಾಡಿದರೆ ಅದು ಅವನ "ಮುಖ್ಯ ವಿಚಾರಣೆ" ಎಂದು ಕರೆಯಿಸಿಕೊಳ್ಳುತ್ತದೆ.

ಅದೇ ಸಾಕ್ಷಿಯನ್ನು ಎದುರು ಪಕ್ಷಕಾರ ವಿಚಾರಣೆ ಮಾಡಿದರೆ ಅದಕ್ಕೆ "ಪಾಟೀ ಸವಾಲು" ಎಂದು ಹೆಸರು.

ಪಾಟೀ ಸವಾಲು ಆದ ತರುವಾಯ ಯಾವ ಪಕ್ಷಕಾರನು ಆ ಸಾಕ್ಷಿಯನ್ನು ಕರೆಯಿಸಿದನೋ ಅವನು ಮಾಡುವ ಮತ್ತೊಂದು ವಿಚಾರಣೆ "ಪುನರ್ವಿಚಾರಣೆ" ಎಂದೆನ್ನಿಸಿಕೊಳ್ಳುತ್ತದೆ.

ಹೀಗೆ ಒಬ್ಬ ಸಾಕ್ಷಿಯ ಮುಖ್ಯ ವಿಚಾರಣೆ, ಪಾಟೀಸವಾಲು ಮತ್ತು ಪುನರ್ವಿಚಾರಣೆ ಇವುಗಳಿಂದ ಮುಪ್ಪುರಿಗೊಂಡ ಹೇಳಿಕೆ ನ್ಯಾಯಾಲಯದಲ್ಲಿ "ಸಾಕ್ಷ್ಯ"ವೆಂದು ಪರಿಗಣಿತವಾಗುತ್ತದೆ.

ಪ್ರಚಲಿತವಿರುವ ಸ್ವಭಾವಸಿದ್ಧ ನ್ಯಾಯದಂತೆ ಯಾರೇ ಆಗಲಿ ಅವನ ಬಗ್ಗೆ ಉದ್ಭವಿಸಿದ ವ್ಯಾಜ್ಯಕಾರಣದಲ್ಲಿ ತೀರ್ಮಾನವನ್ನು ತೆಗೆದುಕೊಳ್ಳಲು ಅವನೇ ನ್ಯಾಯಾಧೀಶನಾಗಿರಕೂಡದು; ಮತ್ತು ಯಾರೊಬ್ಬನನ್ನಾದರೂ ಸರಿಯೇ ಅವನನ್ನು ಆ ಬಗ್ಗೆ ವಿಚಾರಿಸದೆ ಖಂಡನೆಗೆ ಒಳಪಡಿಸತಕ್ಕದ್ದಲ್ಲ ಎಂಬ ಒಂದು ನ್ಯಾಯ ನೀತಿಯನ್ನು ಯಾರೂ ಅಲ್ಲಗಳೆಯತಕ್ಕದ್ದಲ್ಲ. ಆ ನ್ಯಾಯ ನೀತಿಗನುಸಾರವಾಗಿಯೇ ಯಾವುದಾದರೂ ಒಂದು ಪ್ರಕರಣದಲ್ಲಿ ತೀರ್ಮಾನವನ್ನು ತೆಗೆದುಕೊಳ್ಳಬೇಕಾದರೆ ಆ ಪ್ರಕರಣದ ಇಬ್ಬರೂ ಪಕ್ಷಕಾರರನ್ನು ಕೇಳಿಯೇ ತೀರಬೇಕಾಗುತ್ತದೆ; ಮತ್ತು ಆ ಇಬ್ಬರೂ ಪಕ್ಷಕಾರರು ಮುಂದೊಡ್ಡಿದ ಆಕ್ಷೇಪಗಳನ್ನು ಕೇಳಿ, ಅವುಗಳ ಬಗ್ಗೆ ಪರಿಶೀಲಿಸಿ, ನ್ಯಾಯಯುತವಾದ, ಸಮಂಜಸವಾದ ಆದೇಶವನ್ನು ನೀಡಬೇಕಾಗುತ್ತದೆ. ಆದ್ದರಿಂದಲೇ ಒಬ್ಬ ಪಕ್ಷಕಾರನ ಸಾಕ್ಷಿಯ ಮುಖ್ಯ ವಿಚಾರಣೆ ನಡೆದರೆ ಮಾತ್ರವೇ ಸಾಲದು; ಎದುರು ಪಕ್ಷಕಾರನ ಪಾಟೀ ಸವಾಲಿಗೂ ಅವಕಾಶವನ್ನೀಯಲೇಬೇಕಾಗುತ್ತದೆ. ಸಾಕ್ಷಿಯೊಬ್ಬನ ಬರೇ ಮುಖ್ಯ ವಿಚಾರಣೆಯೊಂದೇ ನ್ಯಾಯಾಲಯದಲ್ಲಿ ನಡೆದಿದ್ದರೆ ಪಾಟೀಸವಾಲಿನ ವೇಳೆ ಆ ಸಾಕ್ಷಿ ಸಿಗದಿದ್ದರೆ ಅಥವಾ ಅದಕ್ಕೆ ನಿರಾಕರಿಸಿದ್ದರೆ ಅದು ಅವನ ಪೂರ್ಣಗೊಂಡ ಸಾಕ್ಷ್ಯವೆಂದು ನ್ಯಾಯಾಲಯವು ಪರಿಗಣಿಸುವುದಿಲ್ಲವೆಂಬುದು ಖಚಿತ. ಸಾಕ್ಷಿಯ ಮುಖ್ಯ ವಿಚಾರಣೆಯಲ್ಲಿ ಕೊಡಲಾಗಿರುವ ಹೇಳಿಕೆಯು ಎದುರು ಪಕ್ಷದ ಟೀಕೆಗೆ, ವಿಮರ್ಶೆಗೆ ಮತ್ತು ಪರೀಕ್ಷಣಕ್ಕೆ ಪಕ್ಕಾಗಿರದಿದ್ದರೆ ಆ ಪ್ರಕರಣದಲ್ಲಿ ಪಕ್ಷಕಾರನಿಗೆ ಸ್ವಭಾವಜನ್ಯ ನ್ಯಾಯವನ್ನು ಒದಗಿಸಲಾಗಿಲ್ಲ ಎಂಬ ಅಪವಾದಕ್ಕೆ ಎಡೆಮಾಡಿಕೊಟ್ಟಂತಾಗುತ್ತದೆ.

ಭಾರತ ಸಂವಿಧಾನದ ೨೧ನೆ ವಿಧಿಯು ಪ್ರಚಲಿತ ಯಾವುದಾದರೂ ಕಾನೂನಿಗನುಗುಣವಾಗಿಯಲ್ಲದೆ, ಯಾವ ವ್ಯಕ್ತಿಯ ಪ್ರಾಣವನ್ನು ತೆಗೆಯಲಾಗಲೀ ಅಥವಾ ಅವನ ಜೀವಿಸುವ ಹಕ್ಕನ್ನು ನಿರಾಕರಿಸಲಾಗಲೀ ಸಾಧ್ಯವಿಲ್ಲವೆಂಬುದನ್ನು ಛತ್ರಿ ಹೇಳುತ್ತದೆ. ಆದ್ದರಿಂದಲೇ ಅಪರಾಧಿಕ ಕೃತ್ಯಗಳ ತನಿಖಾ ಕಾಲದಲ್ಲಿ ಕೂಡ ನ್ಯಾಯಾಲಯವು ಆರೋಪಿಗೆ ಅವನ ವಿರುದ್ಧದ ಸಾಕ್ಷ್ಯವನ್ನು ಟೀಕಿಸುವ ಮತ್ತು ಅದರ ಸಹಜಾಸಹಜತೆಯನ್ನು ಪ್ರಶ್ನಿಸುವ ಅವಕಾಶವನ್ನು ಕೊಡಲೇಬೇಕೆಂದಿದೆ. ಆ ಹಕ್ಕನ್ನು ಚಲಾಯಿಸಲು ಆರೋಪಿಗೆ ಅವಕಾಶವನ್ನು ಕೊಡಲಾಗಿಲ್ಲವೆಂದಾದರೆ ಆ ಎಲ್ಲ ಪ್ರಕರಣವು ದೋಷ ಭರಿತದ್ದೆಂದಾಗುತ್ತದೆ: ಅಂಥ ಸಂದರ್ಭದಲ್ಲಿ ನ್ಯಾಯಾಲಯುವೂ ಆರೋಪಿಯ ಸ್ವಭಾವಸಿದ್ಧ ಹಕ್ಕನ್ನು ಎತ್ತಿ ಹಿಡಿಯುತ್ತದೆ.

## ಪಾಟೀಸವಾಲಿನ ಕ್ಷೇತ್ರ

ಎದುರು ಪಕ್ಷಕಾರನು ತಾನು ಸಾಕ್ಷಿಯ ಮುಖ್ಯ ವಿಚಾರಣೆಯಲ್ಲಿ ಕೊಟ್ಟ ಹೇಳಿಕೆಯನ್ನು ಖಂಡಿಸುವ ಸಲುವಾಗಿ, ತನ್ನ ಮೇಲಿನ ಆರೋಪವನ್ನು ಅಲ್ಲಗಳೆಯುವ ಸಲುವಾಗಿ ಯಾವ ತರದ ಉತ್ತರ ಸೂಚಕ ಪ್ರಶ್ನೆಗಳನ್ನು ಬೇಕಾದರೂ ಮನಸೇಚ್ಛೆ ಕೇಳಬಹುದು. ಅವನು ಸಾಕ್ಷಿಯ ಮುಖ್ಯ ವಿಚಾರಣೆಯಲ್ಲಿ ಅಡಕವಾಗಿರುವ ಸಂಗತಿಗಳ ಮೇಲೆ ಮಾತ್ರವಲ್ಲದೆ ಇನ್ನೂ ಅನೇಕ ಸಂಗತಿಗಳ ಮೇಲೂ ವ್ಯಾಪಕವಾಗಿ ಪಾಟೀಸವಾಲನ್ನು ಮಾಡಬಹುದು; ಸಾಕ್ಷಿಯಾದವನ ಚಾರಿತ್ರ್ಯದ ಬಗ್ಗೆಯೂ ಅವನ ಗಣ್ಯತೆಯನ್ನು ಕಳಂಕಿಸುವ ಬಗ್ಗೆಯೂ ಪ್ರಶ್ನೆಗಳನ್ನು ಕೇಳಬಹುದು. ಆದರೆ ಅಂಥ ಪ್ರಶ್ನೆಗಳನ್ನು ಕೇಳುವಲ್ಲಿ ಅವನು ಸೌಜನ್ಯದ ಸೀಮಾರೇಖೆಯನ್ನು ಉಲ್ಲಂಘಿಸದಂತೆ ನೋಡಿಕೊಳ್ಳಬೇಕಾಗುತ್ತದೆ. ಅವನ ಪಾಟೀ ಸವಾಲಿನ ಪ್ರಶ್ನೆಗಳು ಸಭ್ಯತೆಯ ಗೆರೆಯನ್ನು ಮೀರುವಂತಿದ್ದರೆ ನ್ಯಾಯಾಧೀಶರು ಕೂಡಲೇ ಮಧ್ಯೆ ಪ್ರವೇಶಿಸಿ ಅವನ ಧಾರ್ಷ್ಟ್ಯ ಪ್ರದರ್ಶನವನ್ನು ನಿಲ್ಲಿಸಬಹುದು.

ಪಾಟೀ ಸವಾಲನ್ನು ಮಾಡುವ ವಕೀಲರು ತಮ್ಮ ಜಾಣ್ಮೆಯನ್ನೂ, ಪ್ರಾವೀಣ್ಯವನ್ನೂ ತೋರಿಸಬೇಕಾಗುತ್ತದೆ. ಯಾಕೆಂದರೆ, ಹೆಚ್ಚು ಹೆಚ್ಚು ಪ್ರಶ್ನೆಗಳನ್ನು ಕೇಳುತ್ತ ಹೋಗುವುದರಿಂದ ಸಾಕ್ಷಿಯು ತಾನು ಆ ಮೊದಲು ಹೇಳಿರುವುದನ್ನು ಹೆಚ್ಚು ಹೆಚ್ಚು ವಿಸ್ತಾರವಾಗಿ, ವಿವರವಾಗಿ ಬೆಳಿಸಿ ಹೇಳಲು ಅವನಿಗೆ ಅವಕಾಶ ಸಿಕ್ಕಂತಾಗುತ್ತದೆ. ಹಾಗಾದಾಗ, ಪಾಟೀ ಸವಾಲಿನಲ್ಲಿ ಪಡೆದ ವಿವರಗಳು ನೀರಸವಾಗಬಹುದು ಅಥವಾ ನಿಷ್ಪ್ರಯೋಜಕವೆನಿಸಬಹುದು. ಅವಿಚಾರದ, ಅಜಾಗರೂಕತೆಯ ಪಾಟೀ ಸವಾಲು ಅವನ ನಿಲುವಿನ ಸೌಧದಲ್ಲಿ ಬಿರುಕನ್ನು ಮೂಡಿಸಬಹುದು. ಅವನ ಮೇಲಿನ ಆರೋಪ ಬಲವತ್ತರವಾಗಿ ಬೆಳೆಯಬಹುದು. ಆದ್ದರಿಂದಲೇ ಪಾಟೀ ಸವಾಲು ಎನ್ನುವುದು ಹರಿತವಾದ ಚೂರಿಯಂತೆ ಎನ್ನುತ್ತಾರೆ. ಚೂರಿಯಿಂದ ತರಕಾರಿ ಹೆಚ್ಚಲೂಬಹುದು, ಕುತ್ತಿಗೆಯನ್ನು ಕುಯ್ಯಲೂ ಬರುವುದು. ಅದರಿಂದಾಗುವ ಉಪಕಾರ ಮತ್ತು ಅಪಕಾರವು ಅದನ್ನು ಉಪಯೋಗಿಸುವ ವಿಧಾನವನ್ನು ಹೊಂದಿಕೊಂಡಿದೆ. ಪಾಟೀ ಸವಾಲಿನಲ್ಲಿ ಮಾಡಲಾಗುವ ಅತಿ ಸ್ವಲ್ಪ ಪ್ರಶ್ನೆಗಳು ಆರೋಪಿಗೆ ತುಂಬಾ ಶ್ರೇಯಸ್ಕರವಾಗಿ ಪರಿಣಮಿಸುವ ಸಾಧ್ಯತೆಯಿದೆಯೆಂದು ಅನುಭವದಿಂದ ಕಂಡುಕೊಂಡ ವಿಷಯ. ಆದರೆ, ಯಾವುದಾದರೂ ಮುಖ್ಯ ಸಂಗತಿಯ ಮೇಲೆ ಪಾಟೀ ಸವಾಲನ್ನು ಮಾಡದೆ ಬಿಟ್ಟರೆ ಅವನಿಗೆ ಆ ಬಗ್ಗೆ ಯಾವ ಆಕ್ಷೇಪವೂ ಇಲ್ಲವೆಂದು ಅರ್ಥೈಸಬೇಕಾಗುತ್ತದೆ. ಒಬ್ಬ ಸಾಕ್ಷಿಯಾದವನ ನಿಜವಾದ ಬಣ್ಣವನ್ನು ಕಂಡುಕೊಳ್ಳಲು ಪಾಟೀ ಸವಾಲು ಒಂದು ಮಹತ್ತರವಾದ ಸಾಧನವಾಗಿರುತ್ತದೆ.

## ಪುನರ್ವಿಚಾರಣೆ

ಪಾಟೀ ಸವಾಲಿನಿಂದ ಹೊರಬಿದ್ದ ಯಾವುದಾದರೂ ಸಂಗತಿಯ ಬಗ್ಗೆ ಅನುಮಾನಾಸ್ಪದವಾದ ಅಥವಾ ಸಂಶಯಾತ್ಮಕ ವಿಷಯಗಳು ಕಂಡು ಬಂದಲ್ಲಿ ಅವುಗಳನ್ನು ನಿವಾರಿಸಲು ಮುಖ್ಯ ವಿಚಾರಣೆ ಮಾಡಿದ ಪಕ್ಷಕಾರ ಸಾಕ್ಷಿಯನ್ನು ಆ ಬಗ್ಗೆ ವಿಚಾರಿಸಿ, ವಿವರಗಳನ್ನು ಪಡೆಯಬಹುದು. ಆದರೆ ಪುನರ್ವಿಚಾರಣೆಯಲ್ಲಿ ಯಾವುದಾದರೂ ಹೊಸ ವಿಚಾರಗಳನ್ನು, ನ್ಯಾಯಾಧೀಶರ ಅನುಮತಿಯಿಲ್ಲದೆ,

ಕೇಳಕೂಡದೆಂದಿದೆ. ಅಂಥ ಸಾಕ್ಷಿಯ ಪುನರ್ವಿಚಾರಣೆ ಕಾಲದಲ್ಲಿ ಉತ್ತರವನ್ನು ಸೂಚಿಸುವ ರೂಪದ ಪ್ರಶ್ನೆಗಳನ್ನು ಕೇಳಲೇಕೂಡದು. ಆದರ ನ್ಯಾಯಾಲಯಕ್ಕೆ ಅಂಥ ಪ್ರಶ್ನೆಗಳನ್ನು ಕೇಳಲಿರುವ ಅವಶ್ಯಕತೆಯ ಬಗ್ಗೆ ಸಮಜಾಯಿಷಿ ಕೊಟ್ಟಲ್ಲಿ, ನ್ಯಾಯಾಲಯವು ಅದಕ್ಕೆ ಅನುಮತಿ ಕೊಡಬಹುದು. ಅಲ್ಲದೆ ಅಂಥ ಪ್ರಶ್ನೆಗಳಿಂದ ಉದ್ಭವಿಸಿದ ಸಂಗತಿಗಳ ಮೇಲೆ ಎದುರು ಪಕ್ಷಕಾರನಿಗೆ ಪಾಟೀ ಸವಾಲಿಗೆ ಅನುವು ಮಾಡಿ ಕೊಡಬೇಕಾಗುತ್ತದೆ. ಹೀಗೆ ಒಬ್ಬ ಸಾಕ್ಷಿಯ ಮುಖ್ಯ ವಿಚಾರಣೆ, ಪಾಟೀ ಸವಾಲು ಮತ್ತು ಪುನರ್ವಿಚಾರಣೆ ಪೂರ್ಣಗೊಂಡಾಗ ಅದು ಅವನ "ಸಾಕ್ಷ್ಯ"ವೆಂದು ನ್ಯಾಯಾಲಯವು ಮಾನ್ಯ ಮಾಡುತ್ತದೆ.

## ಪ್ರತಿಕೂಲ ಸಾಕ್ಷಿ

ಒಬ್ಬ ಸಾಕ್ಷಿಯನ್ನು ತನ್ನ ಪರವಾಗಿ ಹೇಳಿಕೆ ನೀಡಲು ನ್ಯಾಯಾಲಯಕ್ಕೆ ಕರೆದುಕೊಂಡು ಬಂದಾಗ ಅವನಿಗೆ ಉತ್ತರ ಸೂಚಿಸುವ ರೂಪದ ಪ್ರಶ್ನೆಗಳನ್ನು ಕೇಳಲು ಅವಕಾಶವೇ ಇಲ್ಲವೆಂಬುದು ಸ್ಪಷ್ಟ. ಆದರೆ, ಕೆಲವೊಂದು ವೇಳೆ ಹೀಗೂ ಆಗಬಹುದು. ಆದರೆ, ತನ್ನ ಪರವಾಗಿ ಸಾಕ್ಷ್ಯ ನುಡಿಯಲು ಕರೆದುಕೊಂಡು ಬಂದ ಸಾಕ್ಷಿ, ಸಾಕ್ಷಿ ನುಡಿಯಲೆಂದು ಸಾಕ್ಷಿ ಕಟ್ಟೆಯನ್ನು ಹತ್ತಿ ನಿಂತಾಗ ಅವನ ಪರ ಸಂಗತಿಗಳನ್ನು ಹೇಳುವುದನ್ನು ಬಿಟ್ಟು ವ್ಯತಿರಿಕ್ತವಾಗಿ ಉತ್ತರಿಸುವ ಸಾಕ್ಷಿದಾರರು ಅನೇಕರಿರುತ್ತಾರೆ. ಯಾವುದಾದರೂ ಒಂದು ಸಂಗತಿಯನ್ನು ಪೂರ್ಣವಾಗಿ ನೋಡಿದ್ದ ಆ ಸಾಕ್ಷಿ ವಿಚಾರಣೆ ಕಾಲದಲ್ಲಿ ತಾನು ಆ ಸಂಗತಿಯನ್ನು ನೋಡಿಯೇ ಇಲ್ಲವೆಂದು ಹೇಳಬಹುದು. ಅವನು ಎದುರು ಪಕ್ಷಕಾರನ ಆಮಿಷಕ್ಕೊಳಗಾಗಿಯೋ ಅಥವಾ ಭಯದಿಂದಲೋ ಸತ್ಯವನ್ನು ಮುಚ್ಚುಮರೆ ಮಾಡಿ ಬೇರೆಯೇ ಹೇಳುವುದಿದೆ. ಅಂಥ ಪ್ರಸಂಗವೊಂದು ಬಂದರೆ ಭಾರತ ಸಾಕ್ಷ್ಯ ಅಧಿನಿಯಮದ ೧೫೪ನೆ ಪ್ರಕರಣ ಅಂಥ ಸನ್ನಿವೇಶವನ್ನು ಹೇಗೆ ಎದುರಿಸಬೇಕೆಂದು ಬೆಳಕು ಚೆಲ್ಲುತ್ತದೆ. ಅಂಥ ಸಂದರ್ಭದಲ್ಲಿ ಅವನನ್ನು ಕರೆದುಕೊಂಡು ಬಂದ ಪಕ್ಷಕಾರನ ವತಿಯಿಂದ, ನ್ಯಾಯಾಲಯದ ಅನುಮತಿಯನ್ನು ಬೇಡಿ, ಅಂಥ ಸಾಕ್ಷಿಗೆ ಉತ್ತರವನ್ನು ಸೂಚಿಸುವ ರೂಪದ ಪ್ರಶ್ನೆಗಳನ್ನು ಕೇಳಬಹುದು. ಸಾಕ್ಷಿಯು ಕೇಳಿದ ಪ್ರಶ್ನೆಗಳಿಗೆ ಕೊಡುವ ಉತ್ತರವನ್ನು ಗಮನಿಸಿ ಅವನು ಬೇಕೆಂದೇ ಸತ್ಯ ಸಂಗತಿಯನ್ನು ಅದುಮಿ ಹಿಡಿದು ಉತ್ತರಿಸುತ್ತಾನೆಂದು ನ್ಯಾಯಾಲಯಕ್ಕೆ ಮನವರಿಕೆಯಾದರೆ ಅವನಿಗೆ ಉತ್ತರ ಸೂಚಕ ರೂಪದ ಪ್ರಶ್ನೆಗಳನ್ನು ಕೇಳಲು ಅನುಮತಿಯನ್ನೀಯುತ್ತದೆ. ಅಂಥ ಸಾಕ್ಷಿಗೆ ಪ್ರತಿಕೂಲ ಸಾಕ್ಷಿ ಎಂದು ಕರೆಯಲಾಗುತ್ತದೆ.

ಪ್ರತಿಕೂಲ ಸಾಕ್ಷಿಯೊಬ್ಬ ಕೊಡುವ ಹೇಳಿಕೆಯು ಪ್ರಕರಣದಲ್ಲಿ ಪೂರ್ಣವಾಗಿ ತ್ಯಾಜ್ಯವೆನಿಸುವುದಿಲ್ಲ. ಅವನ ಹೇಳಿಕೆಯಲ್ಲಿ ಉತ್ತಮಾಂಶಗಳು ಅಥವಾ ನಂಬಲರ್ಹವಾದ ಸಂಗತಿಗಳಿದ್ದಲ್ಲಿ ಅವುಗಳನ್ನು ನ್ಯಾಯಾಲಯವು, ಇತರ ಸಾಕ್ಷ್ಯಾಧಾರಗಳೊಡನೆ ತುಲನೆ ಮಾಡಿ ನೋಡಿ, ಬೆಲೆಯನ್ನು ಕಟ್ಟುತ್ತದೆ. ಪ್ರತಿಕೂಲ ಸಾಕ್ಷಿಯ ಸಾಕ್ಷ್ಯ ಮಾತ್ರದಿಂದಲೆ ನ್ಯಾಯಾಲಯವು ತನ್ನ ನಿರ್ಣಯ ಸೌಧವನ್ನು ಕಟ್ಟದು ಎಂಬುದು ಗಮನಿಸಲೇಬೇಕಾದ ಅಂಶ.

ಅಂತೂ ನ್ಯಾಯಾಲಯಗಳಲ್ಲಿ ತೀರ್ಮಾನಕ್ಕೆ ಬರುವ ಪ್ರಕರಣಗಳನ್ನು ತನ್ನ ಮುಂದಿರುವ ಮೌಖಿಕ ಮತ್ತು ದಸ್ತಾವೇಜಿಯ ಸಾಕ್ಷ್ಯಾಧಾರದ ಮೇಲಿಂದ ಪರಿಶೀಲಿಸಿ ಪಕ್ಷಕಾರರಿಗೆ ಯಥಾರ್ಥ ನಿರ್ಣಯವನ್ನು ಕೊಡುತ್ತದೆ. ●

## ಮರಣದ ಗಡಿಯಾರ

ಇದೇನಪ್ಪಾ ವಿಚಿತ್ರ ಗಡಿಯಾರವೆಂದು ನೀವು ಆಶ್ಚರ್ಯಪಡಬಹುದು. ಹೌದು. ಅಮೆರಿಕದ ಟೈಮ್ಸ್ ಚೌಕದಲ್ಲಿ ಸ್ಥಾಪಿಸಲಾಗಿರುವ ಈ 'ಮರಣದ ಗಡಿಯಾರ'ವು ಬಂದೂಕುಗಳು ಮತ್ತು ಬಂದೂಕುಗಳಿಂದ ಉಂಟಾಗುವ ಹತ್ಯೆ, ಕೊಲೆಗಳ ಬಗ್ಗೆ ಪ್ರತಿ ಕ್ಷಣದ ವಿವರ ನೀಡುತ್ತದೆಯಂತೆ !

ಸಂಗ್ರಹ: **ನಾರಾಯಣ ರೈ ಕುಕ್ಕುವಳ್ಳಿ**

**STATEMENT ABOUT OWNERSHIP AND OTHER PARTICULARS ABOUT MONTHLY KASTURI TO BE PUBLISHED IN THE FIRST ISSUE EVERY YEAR AFTER THE LAST DAY OF FEBRUARY**

# FORM IV

**(SEE RULE 8)**

| | | |
|---|---|---|
| 1. Place of Publication | : | Hubli |
| 2. Periodicity of its Publication | : | Monthly |
| 3. Printer's Name | : | S.K. Katote |
| Whether Citizen of India? | : | Yes |
| Address: | | Samyukta Karnataka,<br>Koppikar Road,<br>Hubli-580 020. |
| 4. Publisher's Name | : | S.K. Katote |
| Whether Citizen of India? | : | Yes |
| Address: | | Samyukta Karnataka,<br>Koppikar Road,<br>Hubli-580 020. |
| 5. Editor's Name | : | N.V. Joshi |
| Whether Citizen of India? | | Yes |
| Address: | | Samyukta Karnataka,<br>Koppikar Road,<br>Hubli-580 020. |
| 6. Name and address of Individuals who own the Newspapers and partners or Share-holders holding more than one percent of the total capital | : | Loka Shikshana Trust<br>Koppikar Road, Hubli.<br><br>Board of Trustees:<br>Sri B.D. Jatti, Chairman,<br>Sri A.R. Badarinarayan, Trustee,<br>Sri S.P. Bhat, Trustee,<br>Sri G.M. Patil, Trustee,<br>Sri Nittur Srinivas Rao, Trustee, |

I, S.K. Katote hereby declare that the particulars given above are true to the best of my knowledge and belief.

Hubli
Date: 1.3.1995

(S.K. KATOTE)
Signature of Publisher

ಹರಟೆ

ತಪ್ಪಿಸುವವರಿಗೇನೂ ಇಲ್ಲಿ ಕೊರತೆಯಿಲ್ಲ !

# ತಪ್ಪಿದ ದಾರಿ

● ಐ. ಶ್ರೀರಾಮು

ನಾನು 'ದಾರಿ ತಪ್ಪಿದ ಮನುಷ್ಯ' ಎಂದು ತಿಳಿಯಬೇಡಿ. ಬೆಂಗಳೂರು ಮಹಾನಗರದಲ್ಲಿ ಸರಿಯಾದ ದಾರಿಯನ್ನು ಕಂಡುಹಿಡಿಯುವ ಭಗೀರಥ ಪ್ರಯತ್ನದಲ್ಲಿ ತೊಡಗಿದ್ದ ನನಗೆ ಬಂದ ಕೆಲವು ಅಡ್ಡಿ-ಆತಂಕಗಳನ್ನು ನಿರೂಪಿಸುತ್ತಿದ್ದೇನೆ ಅಷ್ಟೇ. ಜಯನಗರ, ಪೀಣ್ಯ, ಯಲಹಂಕ, ಮಲ್ಲೇಶ್ವರಂ ಇತ್ಯಾದಿ ಬೆಂಗಳೂರಿನ ವಿವಿಧ ಕ್ಷೇತ್ರಗಳಲ್ಲಾದ ಅನುಭವದ ಚಿತ್ರಣ ಇಲ್ಲಿದೆ.

ಬೆಂಗಳೂರಿನಲ್ಲಿನ ವಿಳಾಸದ ವಿಷಯದಲ್ಲಿ ಮೊದಲನೆ ಪಾಠ: ಎಷ್ಟನೆ ನಂಬರಿನ ಮನೆ ಎಷ್ಟನೆ ಮೈನ್ ರೋಡಿನ ಎಷ್ಟನೆ ಕ್ರಾಸಿನಲ್ಲಿದೆ ಎಂಬುದನ್ನು ಖಚಿತಪಡಿಸಿಕೊಳ್ಳಬೇಕು. ಈ ಪಾಠ ಸರಿಯಾಗಿ ಮನದಟ್ಟಾದ ಮೇಲೆ 'ತ್ರೀ ಎ ಮೈನ್', 'ಸೆಕೆಂಡ್ ಬಿ ಕ್ರಾಸ್' ಇತ್ಯಾದಿ ಪದಗಳನ್ನು ಅರ್ಥ ಮಾಡಿಕೊಳ್ಳಲು ಕಷ್ಟವಾಗದು. ಆದರೆ 'ಫಸ್ಟ್ ಮೈನ್ ಲೇಔಟ್ ರೋಡ್' ಎಂದರೇನೆಂದು ತಿಳಿಯಲು ಇನ್ನಷ್ಟು ಹೆಚ್ಚು ಪರಿಣತಿ ಬೇಕು. 'ಗಣೇಶ್ ಬ್ಲಾಕ್ ಸೆಕೆಂಡ್ ಕ್ರಾಸ್' ಎಂದರೆ 'ಗಣೇಶ್ ಬ್ಲಾಕ್'ಗೆ ಹೋಗಿ ಅಲ್ಲಿ 'ಸೆಕೆಂಡ್ ಕ್ರಾಸ್'ನ್ನು ಅರಸಬೇಕೆಂದುಕೊಂಡಿದ್ದೆ. ಆದರೆ ಆ ಬೀದಿಯ ಹೆಸರೇ 'ಗಣೇಶ್ ಬ್ಲಾಕ್ ಸೆಕೆಂಡ್ ಕ್ರಾಸ್' ಎಂದಿರುವುದನ್ನು ಕಷ್ಟಪಟ್ಟು ಕಂಡುಹಿಡಿದಾಗ ಒಬ್ಬ ವಿಜ್ಞಾನಿಗೆ ತನ್ನ ಸಂಶೋಧನೆ ಯಶಸ್ವಿಯಾದಾಗ ಆಗಬಹುದಾದಷ್ಟು ಸಂತೋಷ ನನಗಾಗಿತ್ತು.

ಗಣಿತದಲ್ಲಿ ನಿಮಗಿರುವ ಪಾಂಡಿತ್ಯ ಇಲ್ಲಿ ಉಪಯೋಗಕ್ಕೆ ಬರುವುದಿಲ್ಲ. ೨೩ನೆ ನಂಬರಿನ ಮನೆಯ ಪಕ್ಕದಲ್ಲಿರುವುದು ೨೪ನೆ ನಂಬರಿನ ಮನೆ ಎಂದು ನೀವು ನಂಬಿದ್ದರೆ ಅದು ತಪ್ಪು. ಅದು ೧೪೭ನೆ ಮನೆಯಾಗಿರಬಹುದು. 'ಹಳೆಯ ನಂಬರು ೭೬' ಎಂಬ ಫಲಕವೂ ಅಲ್ಲಿರಬಹುದು.

ಬೆಂಗಳೂರಿನಲ್ಲಿ ದಾರಿ ಹೇಳುವವರ ಬಗ್ಗೆ ಒಂದು ಕಿವಿಮಾತು: ಇಲ್ಲಿನ ಜನರು ಸಭ್ಯರು. ಬೇರೆ ಕೆಲವು ಊರುಗಳಲ್ಲಿರುವಂತೆ ಅಲ್ಲ. "ಈ ವಿಳಾಸ ಎಲ್ಲಿ, ಸ್ವಲ್ಪ ಹೇಳ್ತೀರಾ?" ಎಂದು ಕೇಳಿದಾಗ, "ನೋಡಿ, 'ಕಲ್ಪನಾ' ಟಾಕೀಸಿನ ಬಳಿ ಎಡಕ್ಕೆ ತಿರುಗಿ ಮುಂದೆ ಹೋದರೆ ಅಲ್ಲಿ 'ಸಂಜೀವಿನಿ' ಕ್ಲಿನಿಕ್ ಇದೆ. ಅಲ್ಲಿ ಬಲಕ್ಕೆ ತಿರುಗಿ 'ಸರಸ್ವತಿ' ಬುಕ್ ಶಾಪಿನೆದುರು ಮೇಲಕ್ಕೆ ಹೋಗಿ ಅಶ್ವತ್ಥ ಮರದ ಪಕ್ಕದ ಓವರ್‌ಬ್ರಿಜ್‌ನಿಂದ ಕೆಳಗಿಳಿದು 'ಲಕ್ಷ್ಮೀ ಫೈನಾನ್ಸ್ ಲಿಮಿಟೆಡ್' ಆಫೀಸಿನ ಬಳಿ ಇರುವ 'ಹೋಟೇಲ್ ರುಚಿ'ಯ ಹಿಂಭಾಗದಲ್ಲಿ....." ಎಂದು ದಾರಿ ಹೇಳುವುದು ಹಲವು ಊರುಗಳಲ್ಲಿ ವಾಡಿಕೆ. ಅವರ ಈ ಮಾತಿನ ಪ್ರವಾಹಕ್ಕೆ ಸಿಕ್ಕಿ ನಾವು ಹಳಿ ತಪ್ಪಿ ಬೀಳುವ ಪ್ರಸಂಗಗಳೇ ಹೆಚ್ಚು. ಆದರೆ ಇಲ್ಲಿ ಹಾಗಲ್ಲ. "ನನಗೆ ಗೊತ್ತಿಲ್ಲ," ಎಂದು ಹೇಳಿ ಅವರು ನಿಮ್ಮನ್ನು ನಿರಾಶೆಗೊಳಿಸುವುದೂ ಇಲ್ಲ, ಉದ್ದವಾದ ಭಾಷಣದಿಂದ ನಿಮ್ಮನ್ನು ದಣಿಸುವುದೂ ಇಲ್ಲ. ಪೂರ್ವಾಭಿಮುಖವಾಗಿ ಹೋಗಬೇಕಾಗಿದ್ದ ನಿಮ್ಮನ್ನು "ಹೀಗೆ ಹೋಗಿ," ಎಂದು ಪಶ್ಚಿಮಾಭಿಮುಖವಾಗಿ ಹೋಗುವಂತೆ ಮಾಡುವ ಸಣ್ಣ ಪ್ರಮಾದಗಳಾಗುತ್ತವೆ ಅಷ್ಟೇ.

ಜಯನಗರದಲ್ಲಿ ನಮ್ಮ ಪರಿಚಯದವರೊಬ್ಬರ

ಮನೆಗೆ ಹೋಗಬೇಕಾಗಿತ್ತು. ಅವರು ಬಹಳ ವಿವರವಾಗಿ ತಮ್ಮ ಮನೆಗೆ ಮಾರ್ಗದರ್ಶನ ನೀಡಿದ್ದರು. "ಮನೆಯ ಎದುರುಗಡೆ ಒಂದು ಟೈಲರ್ ಶಾಪ್ ಇದೆ. ಸ್ವಲ್ಪ ಮುಂದೆ ಬಲಬದಿಯಲ್ಲಿ ಒಂದು ಮೈದಾನ, ಅಂಗಳದಲ್ಲಿ ಒಂದು ದಾಳಿಂಬೆಯ ಗಿಡ...." ಇತ್ಯಾದಿ ಉಪಯುಕ್ತ ಮಾಹಿತಿ ನೀಡಿದ್ದರು. "ಅಷ್ಟೆಲ್ಲ ಯಾಕೆ, ಬೆಂಗಳೂರಿನ ಪರಿಚಯ ನನಗೆ ಸಾಕಷ್ಟು ಇದೆಯಲ್ಲ?" ಎಂದು ಸಮಾಧಾನದ ಮಾತನ್ನು ಹೇಳಿದ್ದೆ. ಆದರೆ ಆ ಮನೆಯ ಹತ್ತಿರ ಬಂದ ಮೇಲೂ ಮನೆ ಕಾಣಿಸಲಿಲ್ಲ. ಅಲ್ಲಿ ಇಲ್ಲಿ ವಿಚಾರಿಸಿದಾಗ ಒಬ್ಬರು, "ಹೀಗೆ ನೆಟ್ಟಗೆ ಹೋಗಿ," ಎಂದು ನಾವು ಬಂದ ದಾರಿಯತ್ತ ಬೆರಳು ತೋರಿಸಿದರು! ಈ ಆತಂಕದಲ್ಲಿ ಪಿಳಿಪಿಳಿ ನೋಡುತ್ತಿದ್ದಾಗ ಇದ್ದಕ್ಕಿದ್ದಂತೆ ಅಲ್ಲಿ ಒಂದು



## ದುರ್ವಾಸೆ

"ಯಾಕಿಷ್ಟು ಹೊತ್ತು
ರಾತ್ರಿಯಾಗಿದ್ದು ಸಾಲದೆ?"
ಕೇಳಿದಳು ಆಕೆ.
ಉತ್ತರವಿಲ್ಲ ಈ
ದುರ್ವಾಸ-
ನಿಂದ.
ಉತ್ತರ ಸಿಕ್ಕಿದ್ದು
ದುರ್ವಾಸ-
ನೆಯಿಂದ!

• ಹಾಲಾಡಿ ಮಾರುತಿರಾವ್

ಮನೆಯ ಎದುರುಗಡೆ ಒಂದು ದಾಳಿಂಬೆಯ ಗಿಡ ಗೋಚರಿಸಿತು. ಅದೇ ಮನೆ! ಅಂದಿನಿಂದ ದಾಳಿಂಬೆಯ ಗಿಡದ ಮೇಲೆ ನನಗೆ ಅತ್ಯಂತ ಅಭಿಮಾನ. ನಮ್ಮ ಮನೆಯಂಗಳದಲ್ಲಿ ಜೀವಂತವಾಗಿ ತಲೆಯೆತ್ತಿ ನಿಂತಿರುವ ಮೂರು ದಾಳಿಂಬೆಯ ಗಿಡಗಳೇ ಈ ಅಭಿಮಾನಕ್ಕೆ ಸಾಕ್ಷಿ.

ನಮ್ಮ ಸಂಬಂಧಿಕರೊಬ್ಬರಿಗೆ ಮ್ಯೂಸಿಯಂ ರೋಡಿನಲ್ಲಿರುವ ಒಂದು ಕಚೇರಿಗೆ ಹೋಗಬೇಕಾಗಿ ಬಂತು. ಅದು ನನಗೆ ಚೆನ್ನಾಗಿ ಗೊತ್ತಿರುವ ಜಾಗ ಎಂದು ನಾನು ತಿಳಿದಿದ್ದೆ. ಬೆಂಗಳೂರಿನಲ್ಲಿ ವಿಶ್ವೇಶ್ವರಯ್ಯ ಮ್ಯೂಸಿಯಂ ಎಲ್ಲಿ ಎಂದು ಗೊತ್ತಿಲ್ಲದವರಾರು? ಆದರೆ ಮ್ಯೂಸಿಯಂನ ಅಕ್ಕಪಕ್ಕದಲ್ಲೆಲ್ಲಿಯೂ ಮ್ಯೂಸಿಯಂ ರೋಡಿನ ಪತ್ತೆಯೇ ಇಲ್ಲ! ವಿಚಾರಿಸಿದಾಗ ಮಹನೀಯರೊಬ್ಬರು, "ಮ್ಯೂಸಿಯಂ ರೋಡಿಗೂ ಮ್ಯೂಸಿಯಂಗೂ ಏನು ಸಂಬಂಧ?" ಎಂದು ಸಹಜವಾಗಿಯೇ ಕೇಳಿದರು. ಹೌದು. ಹೀಗೆ ಇಲ್ಲಸಲ್ಲದ ಸಂಬಂಧ ಕಲ್ಪಿಸುವುದು ತಪ್ಪಲ್ಲವೆ? ಕೊನೆಗೂ ಮ್ಯೂಸಿಯಂನಿಂದ ಒಂದು ಕಿಲೋಮೀಟರ್ ದೂರದಲ್ಲಿರುವ ಆ 'ಮ್ಯೂಸಿಯಂ ರೋಡ'ನ್ನು ಪತ್ತೆಹಚ್ಚಿಯೇಬಿಟ್ಟೆವು ಎಂದು ತಿಳಿಸಲು ನನಗೆ ಅತ್ಯಂತ ಹೆಮ್ಮೆಯಾಗುತ್ತದೆ.

ಪೀಣ್ಯದಲ್ಲಿ ವಿಳಾಸವನ್ನು ಹುಡುಕುವಾಗ ಹಲವಾರು ಅಪಾಯಕರ ಪ್ರಶ್ನೆಗಳು ಒಮ್ಮೆಲೆ ಎದುರಾಗುತ್ತವೆ.

"ಮೂರನೆ ಹಂತ (Phase)ವೇ ಅಥವಾ ಮೂರನೆ ಘಟ್ಟ (Stage)ವೆ?" ಹಂತ ಮತ್ತು ಘಟ್ಟಗಳ ನಡುವಿನ ಸೂಕ್ಷ್ಮ ವ್ಯತ್ಯಾಸದ ಅರಿವು ನಿಮಗಿದ್ದರೆ ಮುಂದಿನ ಪ್ರಶ್ನೆ:

"ಇಂಡಸ್ಟ್ರಿಯಲ್ ಎಸ್ಟೇಟೇ ಅಥವಾ ಇಂಡಸ್ಟ್ರಿಯಲ್ ಏರಿಯಾವೆ?"

ಈ ಪ್ರಶ್ನೆಯಿಂದಲೂ ಚೇತರಿಸಿಕೊಳ್ಳುವಷ್ಟು ಚೈತನ್ಯ ನಿಮ್ಮಲ್ಲಿದ್ದರೆ, (ಉದಾ: ಇಂಡಸ್ಟ್ರಿಯಲ್ ಏರಿಯಾ ಎಂದಿರಲಿ.)

"ನಂಬರು?"

"ಸಿ-೯೯."

"ಸಿ ಹ್ಯಾಗೇರಿ ಬರುತ್ತೆ, ಇಂಡಸ್ಟ್ರಿಯಲ್ ಎಸ್ಟೇಟಿನಲ್ಲಾದರೆ ಎ ಬಿ ಸಿ ಎಂದಿರುತ್ತೆ, ಇಂಡಸ್ಟ್ರೀಯಲ್ ಏರಿಯಾದಲ್ಲಿ ಹಾಗಿಲ್ಲವಲ್ಲ?"

ಧರ್ಮರಾಯನು ಯಕ್ಷಪ್ರಶ್ನೆಗೆ ಉತ್ತರಿಸಿದಂತೆ ಎಲ್ಲ ಪ್ರಶ್ನೆಗಳಿಗೂ ಸಮರ್ಪಕವಾಗಿ ಉತ್ತರಿಸಿದರೆ, "ನೀವು ಹೇಳಿದ್ದು ಹಳೆಯ ನಂಬರಿರಬೇಕು. ಹೊಸ ನಂಬರು ಹೇಳಿ." ಎಂಬ ಮಾತನ್ನು ಕೇಳಬೇಕಾಗಿ ಬಂದರೂ ವಿಶೇಷವಿಲ್ಲ.

ಯಲಹಂಕದಲ್ಲಿ ಒಂದು ವಿಳಾಸವನ್ನು ಹುಡುಕಬೇಕಾದ ಪ್ರಸಂಗ ಬಂತು. ಇಷ್ಟು ಚಿಕ್ಕ ಊರು, ಎಂದು ಹಳ್ಳಿ ಎಂದರೂ ತಪ್ಪಲ್ಲ. ಇಷ್ಟು ವರ್ಷಗಳಿಂದ ಇಲ್ಲೇ ವಾಸವಾಗಿರುವ ನನಗೆ ಇದರಲ್ಲೇನು ಕಷ್ಟ ಎಂದುಕೊಂಡೆ. (೧೧ನೆ ಬಿ ಮ್ಯೆನ್‌ನಲ್ಲಿರುವ ೧೯೯ನೆ ಮನೆ ಎಂದಿಟ್ಟುಕೊಳ್ಳಿ.) ಆದರೆ ಆ ರಸ್ತೆಯಲ್ಲಿ ಹೋಗಿ ನೋಡಿದರೆ ನೂರು ಸರಣಿಯ ಮನೆಗಳೇ ಅಲ್ಲಿಲ್ಲ. ನಾನ್ನೂರು ಮತ್ತು ಐನ್ನೂರು ಸರಣಿಯ ಮನೆಗಳು (ಉದಾ: ೪೨೧, ೪೨೨ ಇತ್ಯಾದಿ) ಮಾತ್ರವೇ ಇವೆ. ಸಾಕಷ್ಟು ಹುಡುಕಿ ಹುಡುಕಿ ದಣಿದ ಮೇಲೆ ಅಲ್ಲಿಂದ ಸ್ವಲ್ಪ ದೂರದಲ್ಲಿ ಅದೇ ನಂಬರಿನ (೧೧ನೆ ಬಿ ಮ್ಯೆನ್) ಇನ್ನೊಂದು ರಸ್ತೆ ಇದೆ ಎಂದು ಗೊತ್ತಾಯಿತು. ೧೯೯ನೆ ಮನೆ ಇರುವುದು ಈ ಡುಪ್ಲಿಕೇಟ್ ರಸ್ತೆಯಲ್ಲಿ. ಮರುದಿನ, ಅದೇ ರಸ್ತೆಯಲ್ಲಿರುವ ಒಂದು ವಿಳಾಸಕ್ಕೆ ಬಂದಿದ್ದ ಒಂದು ಪತ್ರವನ್ನು ಪೋಸ್ಟ್‌ಮನ್ ನಮ್ಮ ಮನೆಯಲ್ಲಿ ಎಸೆದು ಹೋಗಿದ್ದ. ಪಾಪ, ಆ ಬಡಪಾಯಿ ಪೋಸ್ಟ್‌ಮನ್ ದಾರಿ ಕಾಣದೆ, ಈ ವಿಳಾಸವನ್ನು ಕಂಡು

ಹಿಡಿಯುವ ಸಾಮರ್ಥ್ಯವಿರುವ 'ಕೊಲಂಬಸ್ ಮಹಾಶಯ' ನಾನೊಬ್ಬನೆ ಎಂದು ಭಾವಿಸಿ ನಮ್ಮ ಮನೆಯಲ್ಲಿ ಆ ಪತ್ರವನ್ನು ಹಾಕಿರಬೇಕು!

ಮಲ್ಲೇಶ್ವರಂನಲ್ಲಿನ ಒಂದು ವಿಳಾಸ: "ಅಲ್ಲೇರೀ, ಕೃಷ್ಣನ ಗುಡಿಯ ಪಕ್ಕದಲ್ಲಿ," ಎಂದರು. ನನಗೆ 'ಅಷ್ಟೂ ಗೊತ್ತಿಲ್ಲವೆ?' ಎಂಬಂತೆ. ಆದುದರಿಂದ ಇನ್ನಷ್ಟು ಹೆಚ್ಚು ವಿವರ ಕೇಳುವ ಉತ್ಸಾಹ ಕುಂದಿತು. ವಿವರವಾದ ವಿಳಾಸವಿದ್ದರೂ ಮನೆಯನ್ನು ಪತ್ತೆ ಹಚ್ಚುವುದು ಇಷ್ಟು ಕಠಿಣವಾಗಿರುವಾಗ ಕೃಷ್ಣನ ಗುಡಿಯ ಪಕ್ಕದ ಈ ಮನೆಯನ್ನು ಹೇಗಪ್ಪಾ ಪತ್ತೆ ಹಚ್ಚಲಿ ಎಂದು ಹಲುಬಿದೆ. 'ಕೃಷ್ಣ ಪರಮಾತ್ಮನೆ, ದಾರಿ ತೋರು' ಎಂದು ಮನಸಾರೆ ಪ್ರಾರ್ಥಿಸಿದೆ. ನಂಬಿದರೆ ನಂಬಿ, ಇಲ್ಲಗಿದ್ದರೆ ಬಿಡಿ. ಈ ಬಾರಿ ಪ್ರಪ್ರಥಮ ಪ್ರಯತ್ನದಲ್ಲೇ ಆ ಮನೆಯನ್ನು ಗುರುತಿಸಿ ವಿಶ್ವ ದಾಖಲೆಯನ್ನೇ ಸ್ಥಾಪಿಸಿದೆ!

ಬೆಂಗಳೂರಿನಲ್ಲಿನ ವಿಳಾಸದ ವಿಷಯದಲ್ಲಿ ನಿಮಗೆ ಸಾಕಷ್ಟು ಪರಿಣತಿ ಇದೆ ಎಂಬ ವಿಶ್ವಾಸವಿದ್ದರೆ ಈ ವಿಳಾಸವನ್ನು ಕಂಡುಹಿಡಿಯುವ ಪ್ರಯತ್ನ ಮಾಡಬಹುದು: ಏಳನೆ ಮೈನ್, ನಾಲ್ಕನೆ ಹಂತ, ಏಳನೆ ಬ್ಲಾಕ್, ಮೂರನೆ ಘಟ್ಟ, ಬನಶಂಕರಿ, ಬೆಂಗಳೂರು.

"ಸ್ವಾಮಿ, ಈ ವಿಳಾಸವೆಲ್ಲಿ ಎಂದು ಸ್ವಲ್ಪ ತಿಳಿಸುತ್ತೀರಾ?" ಎಂದು ಯಾರಾದರೂ ಕೇಳಿದರೆ ನನಗೆ ಅವರ ಬಗ್ಗೆ ಕನಿಕರ, ಸಹಾನುಭೂತಿ, ಕರುಣೆ ಮತ್ತು ಸಂತಾಪ ಉಕ್ಕಿ ಉಕ್ಕಿ ಬರುತ್ತವೆ. ಅವರ ಪ್ರಯತ್ನ ಸಫಲವಾಗಲೆಂದು ದೇವರಿಗೆ ಮೊರೆಯಿಡುತ್ತೇನೆ.

ಮೈನ್, ಕ್ರಾಸ್‌ಗಳ ನಡುವೆ ಸಿಕ್ಕಿ ಕಂಗೆಟ್ಟ ಬೆಂಗಳೂರಿನ ಪಥಿಕರೇ! ಹತಾಶರಾಗಬೇಡಿ. ಆಧುನಿಕ ಯುಗದಲ್ಲಿ ಸಾಧ್ಯವಾಗದುದು ಏನೂ ಇಲ್ಲ. ಇದು ಕಮಿಶನ್ ಏಜೆಂಟರ ಕಾಲ. ಮದುವೆಯಿಂದ ಹಿಡಿದು ವಿದೇಶ ಪ್ರಯಾಣದವರೆಗೆ ಪ್ರತಿಯೊಂದು ಕೆಲಸವೂ ಇವರ ಮೂಲಕ ಯಶಸ್ವಿಯಾಗಿ ನಡೆಯುತ್ತದೆ. ಹಾಗೆಯೇ, ಸರಿದಾರಿ ತೋರಿಸುವ ಮಾರ್ಗದರ್ಶಿ ಏಜೆಂಟರೂ ಸದ್ಯದಲ್ಲಿಯೇ ಬರುವುದು ಖಂಡಿತ. ●



## ಬಲೂನು !

೧೯೬೭ರ ಬೇಸಿಗೆಯಲ್ಲಿ ಫೀಲ್ಡ್ ಮಾರ್ಷಲ್ ಜ. ಕಾರಿಯಪ್ಪನವರು ನಮ್ಮ (ಬಳ್ಳಾರಿ ವೈದ್ಯಕೀಯ) ಕಾಲೇಜಿಗೆ ಭೇಟಿ ನೀಡಿದಾಗ ನಡೆದ ಘಟನೆ. ದೇಶ ಪ್ರೇಮ, ಶಿಸ್ತು, ಸಂಯಮ ಮುಂತಾದವುಗಳ ಕುರಿತು ಹೃದಯಂಗಮವಾಗಿ ಮಾತನಾಡಿದ ಕಾರಿಯಪ್ಪನವರು ವೇದಿಕೆಯಿಂದ ಕೆಳಗಿಳಿಯುತ್ತಿದ್ದಂತೆಯೆ ನಮ್ಮ ಕಾಲೇಜಿನ ಕ್ಯಾಂಟೀನ್ ಹುಡುಗ ಅವರ ಟೇಬಲ್ ಮೇಲಿಟ್ಟಿದ್ದ ನೀರಿನ ಗ್ಲಾಸನ್ನು ತೆಗೆದೊಯ್ಯಲು ಧಡಕ್ಕನೆ ವೇದಿಕೆ ಏರಿ ಬಂದೇ ಬಿಟ್ಟ. "ಏಯ್, ಸರಿಯೋ" ಎಂದು ನಾವೆಲ್ಲಾ ಅವನನ್ನು ಆಚೆಗೆ ಕರೆದೊಯ್ಯುತ್ತಿದ್ದಂತೆ ಆ ಹುಡುಗನನ್ನು ಹತ್ತಿರ ಬರುವಂತೆ ಕಾರಿಯಪ್ಪನವರು ಕಣ್ಸನ್ನೆ ಮಾಡಿದರು. ಮುಂದೇನಾಗಬಹುದೆಂದು ನಾವು ಊಹಿಸುವಷ್ಟರಲ್ಲಿ ಜನರಲ್‌ರ ಜೇಬಿನಿಂದ ಒಂದು ಬಲೂನಿನ ಕಟ್ಟೇ ಹೊರಬಂದಿತು. ಹತ್ತಿರ ಬಂದ ಆ ಹುಡುಗನ ಮೈ ನೇವರಿಸಿ ಆ ಬಲೂನಿನ ಕಟ್ಟನ್ನು ಅವನಿಗೆ ಕೊಡುತ್ತ ವೇದಿಕೆಯಿಂದ ಇಳಿದು ಬಂದರು. "ಬಳ್ಳಾರಿಗೆ ಬರುತ್ತಿದ್ದಾಗ ಪಾಪನಾಯಕನ ಹಳ್ಳಿಯ ಹತ್ತಿರದ ರಸ್ತೆ ಜಾತ್ರೆಯೊಂದರಲ್ಲಿ ಇದನ್ನು ಕೊಂಡುಕೊಂಡಿದ್ದೆ" ಎಂದು ತಮ್ಮಲ್ಲಿ ತಾವೇ ಮಾತನಾಡಿಕೊಂಡಂತೆ ಗುಣುಗುಣಿಸುತ್ತ ಕಾರು ಹತ್ತಿ ಹೊರಟೇ ಹೋದರು.

● ಡಾ. ಪ್ರಭಾಕರ ಹೊಸಪಟ್ಟಣಕರ




ಲಾಸ್‌ವೆಗಾಸಿನ ಭವ್ಯ ಹೊಟೇಲಿನ ಮೇಲಂತಸ್ತಿನಲ್ಲೊಂದು ಕೋಣೆ. ಹೊಟೇಲು ಭವ್ಯವಾಗಿದೆ ಯಾದರೂ ಆ ಕೋಣೆ ಮಾತ್ರ ಸಾಧಾರಣವಾಗಿಯೇ ಇದೆ. ಹೊರಗಿನ ಬೆಳಕು ಬಾರದಹಾಗೆ ಕಿಟಕಿಗಳನ್ನೆಲ್ಲ ಮುಚ್ಚಲಾಗಿದೆ. ಒಳಗಿನ ಮಂದ ಪ್ರಕಾಶದಲ್ಲಿ ಸಣಕಲು ಶರೀರದ ವ್ಯಕ್ತಿಯೊಬ್ಬ ತದೇಕಚಿತ್ತನಾಗಿ ಸಿನೆಮಾ ವೀಕ್ಷಿಸುತ್ತಿದ್ದಾನೆ. ಮಾನ ಮುಚ್ಚಿಕೊಳ್ಳಲು ಸಾಕಾಗುವಷ್ಟು ಬಟ್ಟೆಗಳನ್ನು ಬಿಟ್ಟರೆ ಮೈಮೇಲೆ ಅರಿವೆಗಳೇ ಇಲ್ಲ. ಎಷ್ಟೋ ತಿಂಗಳುಗಳಿಂದ ಕ್ಷೌರವನ್ನೇ ಮಾಡಿಸಿಕೊಳ್ಳದ್ದರಿಂದ ಗಡ್ಡ ಸೊಂಟದವರೆಗೂ ಬಂದಿದೆ. ತಲೆ ಎಣ್ಣೆಯನ್ನು ಕಾಣದೆ ವರ್ಷಗಳೇ ಸರಿದುಹೋದವು.

ಆತನ ಕೈಯಲ್ಲೊಂದು ಬೌಲು. ಬೌಲಿನಲ್ಲಿ ಒಂದಿಷ್ಟು ಚಿಕನ್ ಸೂಪ್. ಸಿನೆಮಾ ಸ್ವಾರಸ್ಯಕರವಾದುದರಿಂದ ಸೂಪ್ ಸವೆಯುತ್ತಲೇ ಇಲ್ಲ. ಆದರೆ ತಣ್ಣನೆಯ ಸೂಪ್ ಎಂದರೆ ಅವನಿಗೆ ಆಗದು. ಯಾವಾಗಲೂ ಬಿಸಿಬಿಸಿಯಾದ ಸೂಪೇ ಬೇಕು. ಒಡೆಯನ ಇಚ್ಛೆಯನ್ನು ಪೂರೈಸಲು ಆಗಾಗ ಸೇವಕರು ಸ್ವಲ್ಪ ಸ್ವಲ್ಪ ಬಿಸಿ ಸೂಪ್ ಬಡಿಸುವರು. ಬೌಲಿನಲ್ಲಿನ ಸೂಪನ್ನು ಬಿಸಿ ಮಾಡಿ

ತಂದುಕೊಡುವರು. ಅಂತೂ ಮೂರು ಗಂಟೆಗಳ ಸಿನೆಮಾ ಮುಗಿಯಿತು. ಅದರೊಟ್ಟಿಗೆ ಅವನು ಸೂಪ್ ತಿನ್ನುವುದೂ ಮುಗಿಯಿತು. ಈ ಮೂರು ಗಂಟೆಗಳ ಅವಧಿಯಲ್ಲಿ ಆತ ತಿಂದದ್ದು ಒಂದೇ ಬೌಲಿನಷ್ಟು ಸೂಪು.

ಊಟವಾದ ಕೂಡಲೆ ನೆಲವನ್ನಷ್ಟೇ ಅಲ್ಲ, ಮೇಜು, ಕುರ್ಚಿ, ಗೋಡೆಗಳನ್ನೂ ಟಿಶ್ಯೂ ಪೇಪರಿನಿಂದ ಒರೆಸುವ ಶಾಸ್ತ್ರ. ಒರೆಸದಿದ್ದರೆ ರೋಗಾಣುಗಳು ಕೋಣೆಯನ್ನೆಲ್ಲ ವ್ಯಾಪಿಸಿ ತನ್ನನ್ನೇ ಆಹುತಿ ತೆಗೆದುಕೊಂಡರೆ ಹೇಗೆ? ಎಂಬ ಆತಂಕ ಆ ಕೋಣೆಯ ಒಡೆಯನಿಗೆ. ಕೋಣೆ ಸ್ವಚ್ಛವಾದದ್ದನ್ನೆಲ್ಲ ಖಚಿತಪಡಿಸಿಕೊಂಡು ಆ ಸಣಕಲು ಶರೀರದ ಮನುಷ್ಯ ನಿದ್ದೆಹೋದ. ಅಘಟಿತ ಘಟನಾಮಯ ಜೀವನದ ಮತ್ತೊಂದು ದಿನ ಕಾಲದ ನೇಪಥ್ಯದ ಹಿಂದೆ ಸರಿದುಹೋಯಿತು. ಹೌದು, ಅವನಿಗೆ ಇಂಥ ಜೀವನವೇ ಇಷ್ಟ. ಪ್ರಚಾರವೆಂದರೇ ಅವನಿಗಾಗದು. ಕೀರ್ತಿಯಿಂದ ಆತ ಗಾವುದದಷ್ಟು ದೂರ. ಪ್ರಚಾರವಾಗಲಿ ಕೀರ್ತಿಯಾಗಲಿ ಅರಸಿಕೊಂಡು ಬಂದೀತೆಂಬ ಆತಂಕದಿಂದಲೇ ಈ ಬಗೆಯ ಜೀವನವನ್ನಾತ ಆಶ್ರಯಿಸಿದ್ದ.

ಸಂಪತ್ತು ಕೆಲವರ ತಲೆತಿರುಗಿಸಿದರೆ ಮತ್ತೆ ಕೆಲವರನ್ನು ವಿಕ್ಷಿಪ್ತರನ್ನಾಗಿಸುತ್ತದೆಯೆನ್ನುವುದು ಸುಳ್ಳಲ್ಲ. ಆದರೆ ಎಲ್ಲರಂತಿದ್ದ ಹೋವರ್ಡ್ ಹ್ಯೂ

# ವಿಕ್ಷಿಪ್ತ ಮನಸ್ಸಿನ ಹೋವರ್ಡ್ ಹ್ಯೂ

● 'ಕಸ್ತೂರಿಮೃಗ'

ವಿಕ್ಷಿಪ್ತನೇಕಾದನೆನ್ನುವುದು ಬಿಡಿಸಲಾರದ ರಹಸ್ಯ.

ಅಮೆರಿಕದಲ್ಲಿ ತೈಲ ನಿಕ್ಷೇಪ ಇರುವುದು ಪತ್ತೆಯಾದ ಹೊಸದರಲ್ಲಿ ಹೋವರ್ಡನ ತಂದೆ ಭೈರಿಗೆಗಳನ್ನು ಉತ್ಪಾದಿಸುವ ಕಂಪನಿ ತೆಗೆದು ಶ್ರೀಮಂತನಾದ. ತಂದೆ ತೀರಿಕೊಂಡ ನಂತರ ಸ್ವಾಭಾವಿಕವಾಗಿಯೆ ಆ ಕಂಪನಿ ಹೋವರ್ಡನ ಕೈಗೆ ಬಂತು. ಕಂಪನಿಯಿಂದ ಸಾಕಷ್ಟು ಲಾಭ ಬರುತ್ತಿತ್ತು. ಆದರೆ ಬರಿ ಲಾಭದಿಂದ ಏನು ಪ್ರಯೋಜನ? ಸಾಹಸವೇ ಜೀವನ, ರೋಮಾಂಚನವೇ ಜೀವನದ ಉಸಿರು. ಇವೆರಡೂ ಇಲ್ಲದ ಈ ಕಾರಖಾನೆಯಲ್ಲಿ ಸುಮ್ಮನೆ ಲಾಭವನ್ನು ತಿನ್ನುತ್ತ ಕುಳಿತರೇನು ಬಂತು? ಎಂದು ಆ ಕಾರಖಾನೆಯನ್ನು ನೋಡಿಕೊಳ್ಳಲು ಆಪ್ತ ವರ್ಗದವರೊಬ್ಬರನ್ನು ನಿಯಮಿಸಿ ಹೋವರ್ಡ್ ಹ್ಯೂ ಕ್ಯಾಲಿಫೋರ್ನಿಯಾಕ್ಕೆಹೋದ.

ಸಿನೆಮಾರಂಗ ಆಗತಾನೆ ಭರಾಟೆಗೆ ಬರುತ್ತಿದ್ದ ಕಾಲ. ಒಂದೇ ವರ್ಷದಲ್ಲಿ ಸಿನೆಮಾರಂಗದ ಒಳಹೊರಗನ್ನೆಲ್ಲ ಕರತಲಾಮಲಕ ಮಾಡಿಕೊಂಡ ಆತ ಎರಡೇ ವರ್ಷಗಳಲ್ಲಿ ರೌಡಿಗಳ ಜಗತ್ತನ್ನು ನಿರೂಪಿಸುವ 'ಸರ್‌ಫೇಸ್' ಚಿತ್ರವನ್ನು ತೆಗೆದು ಅಕಾದೆಮಿಯ ಬಹುಮಾನ ಗಿಟ್ಟಿಸಿದ. 'ಹೆಲ್ಸ್ ಏಂಜೆಲ್ಸ್' ತೆಗೆದು ಜೀನ್ ಹ್ಯಾರ್ಲೋಳಂಥ ಸುಂದರಿಯನ್ನು ಜಗತ್ತಿಗೆ ಪರಿಚಯಿಸಿದ.

ಅವನ ಚಿತ್ರಗಳೆಲ್ಲ ಯಶಸ್ವಿಯಾಗುತ್ತಿದ್ದಂತೆ ಹಣದ ಹೊಳೆಯೇ ಹರಿದುಬರತೊಡಗಿತು. ಬಂದ ಹಣವನ್ನೆಲ್ಲ ಆತ ಧಾರಾಳವಾಗಿ ವ್ಯಯಿಸತೊಡಗಿದ. ನೋಡುವುದಕ್ಕೆ ಸ್ಫುರದ್ರೂಪಿ ಬೇರೆ. ಅಂದಮೇಲೆ ಕೇಳುವುದೇನು? ಸುಂದರಿಯರ ವಲಯವೇ ಅವನನ್ನು ಯಾವಾಗಲೂ ಸುತ್ತುವರೆದಿರುತ್ತಿತ್ತು.

ಹೋವರ್ಡ್ ಹ್ಯೂನ ಖಯಾಲಿ ಯಾರ ಮೇಲೆ ಹೇಗೆ ತಿರುಗುತ್ತದೆ ಎನ್ನುವುದನ್ನು ಹೇಳುವಂತಿರಲಿಲ್ಲ. ಜೀನ್ ಹ್ಯಾರ್ಲೋಳ ಬಗ್ಗೆ ಮತ್ತೇರಿಸಿಕೊಂಡ ಆತ ಅವಳಿಗಾಗಿ ಭವ್ಯವಾದ ಬಂಗಲೆಯನ್ನೇ ಕೊಂಡುಕೊಟ್ಟ. ಆದರೆ ಎಷ್ಟು ಬೇಗ ಮತ್ತೇರಿಸಿಕೊಂಡಿದ್ದನೋ ಅಷ್ಟು ಬೇಗ ಅವಳನ್ನು ಮರೆತೂಬಿಟ್ಟ.

ಅವನ ಸಂಗವನ್ನು ಬಯಸಿ ನಾ ಮುಂದು ತಾ ಮುಂದು ಎಂದು ಕ್ಯಾಲಿಫೋರ್ನಿಯಾದ ತಾರೆ

ಯರು ಮುಗಿಬೀಳುತ್ತಿದ್ದರೂ ಈತ ಮಾತ್ರ ದಿವ್ಯ ನಿರ್ಲಕ್ಷ್ಯದಿಂದಲೇ ಇದ್ದ. ಆದರೆ ಯಾರೇ ಆತನ ಬಳಿ ಬರಲಿ, ಆದರದ ಆತಿಥ್ಯವಿಲ್ಲದೆ ಹಿಂದಿರುಗು ತ್ತಿರಲಿಲ್ಲ.

ಜೊತೆಗಾತಿಯಾಗಲು ಬಯಸಿದವರಿಗೆ ಹೋವರ್ಡ್ ಹ್ಯೂ ವಿಧಿಸುತ್ತಿದ್ದ ಶರತ್ತುಗಳು ಎರಡೇ ಎರಡು: ತನಗೆ ಯಾವ ಪ್ರಶ್ನೆಗಳನ್ನೂ ಕೇಳ ಕೂಡದು. ತಾನು ಯಾವಾಗ ಮನೆಗೆ ಬಂದರೂ ಆಕೆ ಮನೆ ಯಲ್ಲೇ ಇರಬೇಕು.

ಇಂಥ ಶರತ್ತುಗಳೇನು ಮಹಾ! ಎಂಬ ವಿಚಾರ ಜೇನ್ ಪೀಟರ್ಸ್ ಎಂಬ ಕ್ಯಾಲಿಫೋರ್ನಿಯಾದ ಚೆಲುವೆಗೆ ಬಂತು. ಎಲಿಜಬೆತ್ ಟೇಲರ್ ಳಂಥವರೂ ಅಸೂಯೆಪಡುವಷ್ಟು ರೂಪರಾಶಿ ಅವಳದು. ಹೋವರ್ಡ್ ಹ್ಯೂನೂ ಅವಳಲ್ಲಿ ಅನು ರಕ್ತನಾದ. ವಿವಾಹವೂ ನಿಶ್ಚ ಯಿಸಲ್ಪಟ್ಟಿತು.

ವಿವಾಹಕ್ಕಿಂತ ಮೊದಲು ಈಕೆಗಾಗಿ ಆತ ಬೆನ್ ಏರ್ಸ್ ಅರಮನೆಯನ್ನೇ ಕೊಂಡುಕೊಟ್ಟ. ಆದರೆ ಆತ ಎಷ್ಟು ವಿಕ್ಷಿಪ್ತನೆನ್ನುವುದು ವಿವಾಹವಾದ ಮೊದಲ ರಾತ್ರಿಯೇ ಜೇನ್ ಪೀಟರ್ಸಳ ಅನು ಭವಕ್ಕೆ ಬಂತು. ಮಲಗುವ ಕೋಣೆಯನ್ನಾಕೆ ಪ್ರವೇ ಶಿಸಿದಾಗ ಎರಡು ದೊಡ್ಡ ಮಂಚಗಳನ್ನು ಕಂಡು, "ಎರಡು ಮಂಚಗಳೇಕೆ?- ಅದೂ ಒಂದೊಂದು ಮಂಚವೂ ಇಷ್ಟು ವಿಶಾಲವಾಗಿರುವಾಗ?" ಎಂದಳು ಆಕೆ ಆಸೆಗಣ್ಣುಗಳಿಂದ. "ಹೌದು. ಒಂದು ಮಂಚ ನನಗೆ, ಮತ್ತೊಂದು ಮಂಚ ನಿನಗೆ. ಎಲ್ಲಾ ('ಎಲ್ಲಾ ರೈಸ್' ಎನ್ನುವುದು ಅವನ ಮೊದಲ ಹೆಂಡತಿಯ ಹೆಸರು) ನಾನೂ ಮಲ ಗುವುದು ಹಾಗೆಯೆ," ಎಂದ ಹೋವರ್ಡ್ ಹ್ಯೂ. ನವವಧುವೋ ಸುಸ್ತೋ ಸುಸ್ತು. ಮರುದಿನದಿಂದ ಮಲಗಲು ಅವನಿಗೊಂದು ಕೋಣೆ, ಹೆಂಡತಿಗೊಂದು ಕೋಣೆ!

ಮನೆಯಲ್ಲಿ ತನಗೊಂದು, ತನ್ನ ಹೆಂಡತಿಗೊಂದು ಎಂದು ಎರಡು ರೆಫ್ರಿಜರೇಟರುಗಳು. ಒಬ್ಬರ ರೆಫ್ರಿ ಜರೇಟರನ್ನು ಇನ್ನೊಬ್ಬರು ಮುಟ್ಟುವಂತಿಲ್ಲ. ಅವನ ಊಟ ಯಾವಾಗಲೂ ಸೀದಾಸಾದಾ- ತರಕಾರಿಗಳ ಒಂದಿಷ್ಟು ಪಚ್ಚಡಿ. ಕಡಲೆಯ ಉಸುಳಿ ಹಾಗೂ ಸ್ವಲ್ಪ ಬೇಯಿಸಿದ ಮಾಂಸ. ಹೆಂಡತಿಗೂ ಅವನಿಗೂ ಒಂದೇ ಬಗೆಯ ಊಟ. ಆದರೆ ತನ್ನ ಊಟವನ್ನು ಹೆಂಡತಿ ಮುಟ್ಟುವಂತಿಲ್ಲ; ಹೆಂಡತಿಯ ಊಟವನ್ನು ತಾನು ಮುಟ್ಟುವಂತಿಲ್ಲ. ಮುಟ್ಟಿದರೆ ಆಕಸ್ಮಾತ್ತಾಗಿ ರೋಗಾಣುಗಳು ಸೇರಿ ಕೊಂಡು ಬೇನೆ ಬಂದರೆ ಹೇಗೆ ಎಂಬ ಭಯ ಆತನಿಗೆ. ಉಸುಳಿಗೆ ಚಿಕ್ಕಗಾತ್ರದ ಕಡಲೆಯೇ ಆಗ ಬೇಕು. ದೊಡ್ಡ ಗಾತ್ರದ ಕಾಳುಗಳನ್ನು ಫೋರ್ಕಿ ನಿಂದ ಪ್ರತ್ಯೇಕಿಸುತ್ತ ಚಿಕ್ಕ ಕಾಳುಗಳನ್ನಷ್ಟೇ ತಿನ್ನು ತ್ತಿದ್ದ. ಆತ ಬಂದಾಗಲೆಲ್ಲ ತಾನು ಮನೆಯಲ್ಲಿ ಇರ ಬೇಕಾದುದರಿಂದ ಜೇನ್ ಪೀಟರ್ಸ್ ಹೊರಗೆ ಹೋಗುವಂತೆಯೂ ಇರಲಿಲ್ಲ. ಬಂಗಾರದ ಅರ ಗಿಣಿಯಾಗಿರಲು ಅವಳಿಂದ ಸಾಧ್ಯ ವಾಗಲಿಲ್ಲ. ಕೊನೆಗೊಂದು ದಿನ, "ಇಂಥಾ ಜೀವನ ನನ್ನಿಂದ ಸಾಧ್ಯವಿಲ್ಲ ಪ್ರಿಯಾ," ಎಂದಳು ಆಕೆ ನಿರಾಶೆ ಯಿಂದ. "ಇಲ್ಲವಾದರೆ ಇಲ್ಲ. ನಿನ್ನಷ್ಟಕ್ಕೆ ನೀನಿರು; ನನ್ನಷ್ಟಕ್ಕೆ ನಾನಿರುತ್ತೇನೆ," ಎಂದ ಹೋವರ್ಡ್ ಹ್ಯೂ. ಒಂದು ವರ್ಷದ ಅವರ ಸಂಸಾರಕ್ಕೆ ಅಂದೇ ಕೊನೆಯ ಪರದೆ ಬಿತ್ತು. ಆದರೆ ವಿವಾಹ ವಿಚ್ಛೇದನ ಪಡೆಯುವಾಗಲೂ ಆತ ಔದಾರ್ಯ ವನ್ನೇ ಮೆರೆದ- ಐವತ್ತರ ಅಗ್ಗದ ಕಾಲದಲ್ಲೂ ಹೋವರ್ಡ್ ಹ್ಯೂ ಹತ್ತು ಲಕ್ಷ ಡಾಲರುಗಳನ್ನು ಅವಳಿಗೆ ಜೀವನಾಂಶವಾಗಿ ಕೊಟ್ಟ!

ಮೂವತ್ತರ ದಶಕದಲ್ಲಿ 'ಹ್ಯೂ ಏರ್‌ಕ್ರಾಫ್ಟ್' ಹಾಗೂ 'ಟ್ರಾನ್ಸ್ ವರ್ಲ್ಡ್ ಏರ್‌ಲೈನ್ಸ್' (TWA) ಎಂಬ ಎರಡು ವಾಯುಯಾನ ಸಂಸ್ಥೆಗಳನ್ನು ತೆರೆದ. ದ್ವಿತೀಯ ಮಹಾಯುದ್ಧ ಬಂತು. 'ದೇಶ ಕ್ಕಾಗಿ ನಾನೂ ಏನಾದರೂ ಮಾಡಬೇಕು' ಎಂದು ಕೊಂಡು ಏಕಕಾಲಕ್ಕೆ ೭೦೦ ಜನರನ್ನು ಹೊತ್ತೊಯ್ಯ ಬಲ್ಲ ಎಂಟು ಇಂಜಿನ್ನುಗಳ ವಿಮಾನವನ್ನು ತಯಾರಿಸಿದ. ಆದರೆ ಒಮ್ಮೆ ಹಾರಿದ ವಿಮಾನ ಮತ್ತೊಮ್ಮೆ ಹಾರಲಿಲ್ಲ. ಆದರೇನಂತೆ? "ಶತ್ರು ಪ್ರದೇಶದಲ್ಲಿ ನುಗ್ಗಿ ಸರ್ವೇಕ್ಷಣೆ ನಡೆಸಬಲ್ಲ ವಿಮಾನವನ್ನು ತಯಾರಿಸಿದರಾಯಿತು," ಎಂದು ಅಂತಹ ವಿಮಾನವನ್ನೇ ತಯಾರಿಸಿದ. ಪ್ರಯೋ ಗಾರ್ಥವಾಗಿ ಅದರಲ್ಲೇರಿದಾಗ ಅಪಘಾತಕ್ಕೀ ಡಾಗಿ ಕೊನೆಯವರೆಗೂ ಔಷಧಗಳನ್ನು ಸೇವಿಸುವ ಪ್ರಸಂಗವನ್ನು ತಂದುಕೊಂಡ.

ಜೇನ್ ಪೀಟರ್ಸ್ ಜೊತೆಗೆ ವಿವಾಹ ವಿಚ್ಛೇದನ

ಪಡೆದ ನಂತರ ಹೋವರ್ಡ್ ಹ್ಯೂ ಅಂತ ರ್ಮುಖಿಯೇ ಆಗಿ ಜನರಿಂದ ಆದಷ್ಟು ದೂರ ವಾಗಿ ಏಕಾಕಿಯಾಗಿ ಜೀವಿಸತೊಡಗಿದ. ಜನಸಂಪರ್ಕ ಅಸಹನೀಯವೆನಿಸಿದಾಗ ಲಾಸ್ ವೆಗಾಸಿನ ಮರಳುಗಾಡಿನಲ್ಲೆ ಒಂದು ಬಂಗಲೆ ಯನ್ನು ಕಟ್ಟಿಸಿಕೊಂಡ. ತಾನು ಕೋಟ್ಯನಾಧೀಶ ನಾದದ್ದು ಎಲ್ಲರಿಗೂ ಗೊತ್ತಾಗಿದ್ದರಿಂದ ಹಣ ಕ್ಕಾಗಿ ಯಾರಾದರೂ ಜೀವ ತೆಗೆದರೆ ಏನು ಗತಿ?



ಈತ ಸಂಶಯರೋಗ ಪೀಡಿತನಾಗಿ ತನ್ನನ್ನೇ ತಾ ದುಃಖಕ್ಕೀಡುಮಾಡಿಕೊಂಡ.

ಎಂಬ ಭಯ ಮುತ್ತಿದಾಗ ಹೋವರ್ಡ್ ಹ್ಯೂ ತನ್ನ ಬಳಿ ಹಣ ಇಟ್ಟುಕೊಳ್ಳುವು ದನ್ನೇ ಬಿಟ್ಟ. ಟ್ಯಾಕ್ಸಿ ಡ್ರೈವರರಾಗಲಿ ಹಣ್ಣುಹಂಪಲಗಳನ್ನು ಮಾರುವವ ರಾಗಲಿ ಚೆಕ್ ಮೂಲಕವೇ ಹಣ ಪಡೆಯ ಬೇಕಿತ್ತು.

ಇಂಥಾ ವಿಕ್ಷಿಪ್ತತೆಯಲ್ಲೂ ಹೋವರ್ಡ್ ಹ್ಯೂ ವ್ಯಾವಹಾರಿಕ ಪ್ರಜ್ಞೆಯನ್ನು ಕಳೆದುಕೊಂಡಿರಲಿಲ್ಲ. ಆ ಮರಳುಗಾಡಿನ ಮನೆಯಿಂದಲೆ ಕೋಟಿಗಟ್ಟಲೆ ವ್ಯವಹಾರವನ್ನು ನಿಭಾಯಿಸುತ್ತಿದ್ದ. ಮಹತ್ವದ ನಿರ್ಣಯಗಳನ್ನು ತೆಗೆದುಕೊಳ್ಳಬೇಕಾದಾಗ ಸಮಾ ಲೋಚಿಸಲು ಕಂಪನಿಯ ಹಿರಿಯ ಅಧಿಕಾರಿ ಗಳನ್ನು ತನ್ನಲ್ಲಿಗೇ ಕರೆಸಿಕೊಳ್ಳುತ್ತಿದ್ದ.

ಹೀಗೆ ಸಮಾಲೋಚನೆ ನಡೆಸುವಾಗ ಏನೇನು ಮಾತುಕತೆ ನಡೆಯುತ್ತಿದೆ ಎಂಬುದನ್ನು ತಿಳಿದು ಕೊಳ್ಳಲು ಪ್ರತಿಸ್ಪರ್ಧಿ ಕಂಪನಿಗಳು ಮನೆಯಲ್ಲಿ ರಹಸ್ಯವಾಗಿ ಮೈಕ್ರೋಫೋನುಗಳನ್ನು ಅಳವಡಿಸಿರ ಬಹುದೆಂಬ ಸಂಶಯ ಅವನಿಗೆ ಬಂದಾಗ ಅಧಿ ಕಾರಿಗಳೊಡನೆ ಮನೆಯ ಬದಲು ಕಾರಿನಲ್ಲೆ ಸಮಾ ಲೋಚಿಸುವುದೆಂದು ನಿರ್ಧರಿಸಿ ಇಪ್ಪತ್ತು ಶೆವರ್ಲೆಟ್ ಕಾರುಗಳಿಗೆ ಆರ್ಡರ್ ಕೊಟ್ಟ. "ಇಪ್ಪತ್ತೇಕೆ, ಒಂದೇ ಕಾರು ಸಾಕಾಗು ತ್ತಿರಲಿಲ್ಲವೆ?" ಎಂದು ಯಾರೋ ಒಬ್ಬರು ಕೇಳಿ ದಾಗ, "ಒಂದು ಕಾರನ್ನಿಟ್ಟರೆ ಆ ಕಾರಿನಲ್ಲಿಯೂ ಯಾರಾದರೂ ಮೈಕ್ರೋಫೋನನ್ನು ಅಳ ವಡಿಸಬಹುದು. ಆದರೆ ಇಪ್ಪತ್ತು ಕಾರುಗಳನ್ನಿಟ್ಟರೆ ಆ ಎಲ್ಲ ಕಾರುಗಳಲ್ಲಿಯೂ ಮೈಕ್ರೋಫೋನನ್ನು ಅಳವಡಿಸಲು ಸಾಧ್ಯವಿಲ್ಲ. ಒಂದು ವೇಳೆ ಸಾಧ್ಯ ವಾದರೂ ನಾನು ಯಾವಾಗ ಯಾವ ಕಾರನ್ನು ಮಾತುಕತೆಗಾಗಿ ಬಳಸುತ್ತೇನೆನ್ನುವುದನ್ನು ಕಂಡು ಕೊಳ್ಳಲು ಯಾರಿಗೂ ಸಾಧ್ಯವಿಲ್ಲ. ಹೀಗೆ ಕಂಪ ನಿಯ ಗೌಪ್ಯವನ್ನು ಕಾಯ್ದುಕೊಳ್ಳಲು ಅನುವಾಗುತ್ತದೆಂದೇ ಇಪ್ಪತ್ತು ಕಾರುಗಳನ್ನು ಕೊಳ್ಳುತ್ತೇನೆ," ಎಂದ ಹೋವರ್ಡ್ ಹ್ಯೂ.

ಐವತ್ತರ ಅಂಚನ್ನು ಸಮೀಪಿಸುತ್ತಿದ್ದ ಹಾಗೆ ಜಗತ್ತಿನ ಸಂಪರ್ಕವನ್ನು ಸಂಪೂರ್ಣವಾಗಿ ಕಡಿದು ಕೊಳ್ಳ ಬೇಕೆಂಬ ಇಚ್ಛೆ ಅವನಲ್ಲಿ ಪ್ರಬಲ ವಾಗತೊಡಗಿತು. ಒಂದೇ ಸ್ಥಳದಲ್ಲಿದ್ದರೆ ನಾಲ್ಕು ಜನರ ಗಮನಕ್ಕೆ ಬಂದೇನೆಂದು ಆತ ವಾಸಕ್ಕಾಗಿ ದೇಶಗಳನ್ನೇ ಬದಲಿಸತೊಡಗಿದ. ಎಲ್ಲಿ ಹೋದರೂ ಐಷಾರಾಮಿ ಹೊಟೇಲುಗಳಲ್ಲೆ ತಂಗುತ್ತಿದ್ದ. ಹೊಟೇಲಿಗೆ ಹೆಚ್ಚು ಹೆಚ್ಚು ಅಂತಸ್ತು ಗಳಿದ್ದ ಹಾಗೆ ಇವನ ನೆಮ್ಮದಿಯೂ ಹೆಚ್ಚುತ್ತಿತ್ತು- ಅಷ್ಟು ಅಂತಸ್ತುಗಳನ್ನೇರಿ ತನ್ನನ್ನು ನೋಡಲು ಯಾರೂ ಬರುವುದಿಲ್ಲವಲ್ಲ ಎಂಬ ಭರವಸೆ ಯಿಂದ.

ಜನರ ದೃಷ್ಟಿಗೆ ಬೀಳಬಾರದೆಂದು ರಾತ್ರಿಯೇ ಹೊಟೇಲಿನಿಂದ ಹೊರಬಿದ್ದು, ಕಿಟಕಿಗಳು

ಮುಚ್ಚಿದ ಕಾರಿನಲ್ಲಿ ವಿಮಾನ ನಿಲ್ದಾಣಕ್ಕೆ ಸಾಗಿ, ತನಗಾಗಿಯೆ ಕಾಯುತ್ತಿದ್ದ ವಿಮಾನವನ್ನೇರುತ್ತಿದ್ದ. ಹಿಂದಿರುಗಿ ನೋಡಬಾರದೆಂಬ ಕಟ್ಟಪ್ಪಣೆ ವಿಮಾನ ಚಾಲಕರಿಗಿರುತ್ತಿತ್ತು. ಬಳಗಾಗುವುದರೊಳಗೆ ಆತ ಇನ್ನೊಂದು ದೇಶವನ್ನು ಸೇರಿ ಮೊದಲೆ ಗೊತ್ತುಪಡಿಸಲಾದ ಮೇಲಂತಸ್ತಿನ ರೂಮಿನಲ್ಲಿ ಸೇರಿಕೊಳ್ಳುತ್ತಿದ್ದ.

ಆದಕ್ಕಾಗಿ ಆತ ಬರುವ ಮೊದಲೆ ಕಿಟಕಿಗಳಿಗೆ ದಪ್ಪವಾದ ಪರದೆಗಳನ್ನು ಹಾಕಲಾಗಿರುತ್ತಿತ್ತು. ಒಳಗೆ ಒಂದು ಟಿ.ವಿ., ಒಂದು ಚಿಕ್ಕ ಪ್ರೊಜೆಕ್ಟರ್ ಹಾಗೂ ಸಿನೆಮಾ ನೋಡಲು ಚಿಕ್ಕದಾದ ಸ್ಕ್ರೀನ್, ಮಲಗಲು ಒಂದು ಮಂಚ, ಆಪ್ತವರ್ಗದವರು ಕೂಡಲು ಒಂದೆರಡು ಪೀಠೋಪಕರಣಗಳು, ಓದಲು ಒಂದೆರಡು ಮ್ಯಾಗಜಿನ್‌ಗಳನ್ನು ಬಿಟ್ಟರೆ ಕೋಣೆಯಲ್ಲಿ ಬೇರೇನೂ ಇರುತ್ತಿರಲಿಲ್ಲ.

ಹೋವರ್ಡ್ ಹ್ಯೂ ಎಲ್ಲಿದ್ದಾನೆ ಎನ್ನುವುದನ್ನು ಕಂಡುಹಿಡಿಯುವುದೇ ಅಮೆರಿಕದಲ್ಲಿ ಒಂದು ರಾಷ್ಟ್ರೀಯ ಹವ್ಯಾಸವಾಗಿ ಬೆಳೆಯಿತು. ಈ ಹವ್ಯಾಸ ಬೆಳೆದಂತೆಲ್ಲ ಹೋವರ್ಡ್ ಹ್ಯೂನ ಕಪ್ಪೆ ಚಿಪ್ಪಿನ ಪ್ರವೃತ್ತಿಯೂ ಬಲಿಯಿತು. ಈತ ಎಲ್ಲಿದ್ದಾನೆನ್ನುವುದನ್ನು ಈತನ ಸೇವಕರನ್ನು ಗುರುತಿಸುವ ಮೂಲಕ ಯಾರಾದರೂ ಊಹಿಸಬಹುದಾದ್ದರಿಂದ ಅವನ ಸೇವಕರೂ ತಲೆಮರೆಸಿಕೊಂಡೇ ಇರಬೇಕಾಗುತ್ತಿತ್ತು. ಅವರು ಹೊರಗೆ ಹೋಗಲು ಹೊಟೇಲಿನ ಹಿಂಬದಿಯನ್ನೋ ಅಡುಗೆಮನೆಯ ಹಿಂಬಾಗಿಲನ್ನೋ ಆಶ್ರಯಿಸಬೇಕಾಗುತ್ತಿತ್ತು. ಅವರು ಅನಾಮಧೇಯರಾಗಿ ಉಳಿಯಲು ಪಡುವ ತಾಪತ್ರಯಕ್ಕಾಗಿ ಹೋವರ್ಡ್ ಹ್ಯೂ ಅವರಿಗೆ ಹೆಚ್ಚು ಸಂಬಳವನ್ನೇ ಕೊಡುತ್ತಿದ್ದ.

೧೯೭೨ರ ಡಿಸೆಂಬರಿನಲ್ಲಾತ ನಿಕರಾಗುವಾದ ಹೊಟೇಲೊಂದರಲ್ಲಿದ್ದಾಗ ಭೀಕರವಾದ ಭೂಕಂಪವಾಯಿತು. ಈತ ಇದ್ದದ್ದು ಹೊಟೇಲಿನ ಕೊನೆಯ ಅಂತಸ್ತಿನಲ್ಲಿ. ಹೊಟೇಲು ಎಲ್ಲಿ ಕಡಿದುಕೊಂಡು ಬೀಳುತ್ತದೋ ಎನ್ನುವ ಪರಿಸ್ಥಿತಿ. ಆಪ್ತ ಸೇವಕರು ಓಡೋಡುತ್ತ ಬಂದು ನೋಡಿದಾಗ ಹ್ಯೂನ ಮೈಮೇಲೆ ತುಂಡು ಬಟ್ಟೆಯೂ ಇರಲಿಲ್ಲ. ಅಂಥಾ ಸ್ಥಿತಿಯಲ್ಲೇ ಅವರು ಓಡಿ ಹೋಗಿ ಒಂದು ಹಳೆ ಪ್ಯಾಂಟ್ ತಂದು ಹ್ಯೂಗೆ ತೊಡಿಸಿ ಅವನನ್ನು ಹೊಟೇಲಿನಿಂದ ಪಾರು ಮಾಡಿದರು. ಭೂಕಂಪವಾಗುತ್ತಿದ್ದಾಗ ಎಲ್ಲಿ ಹೊಟೇಲು ಮುಗ್ಗರಿಸುತ್ತದೋ ಎಂಬ ಆತಂಕದ ಸ್ಥಿತಿ. ಆದರೆ ಹೋವರ್ಡ್ ಹ್ಯೂ ಮಾತ್ರ ನಿರ್ವಿಕಾರನಾಗಿಯೇ ಇದ್ದ.

ಅಲ್ಲಿಂದ ನೇರ ಲಂಡನ್ನಿಗೆ ಪ್ರಯಾಣ. 'ಇನ್ ಆನ್ ದಿ ಪಾರ್ಕ್'ನಲ್ಲಿ ವಾಸ. ಈ ಸ್ಥಳವೂ ಬೇಸರಿಕೆ ತರಿಸಿದಾಗ "ನಾಲ್ಕಾರು ದಿನ ಬಿಟ್ಟು ಬಹಾಮಾ ದ್ವೀಪಕ್ಕೆ ಹೋಗುವಾ," ಅಂದ. ಮೂರು-ನಾಲ್ಕು ವರ್ಷಗಳಿಂದ ಆತ ಕ್ಷೌರವನ್ನೇ ಮಾಡಿಸಿಕೊಳ್ಳದ್ದರಿಂದ ಗಡ್ಡ ಹಾಗೂ ತಲೆಗೂದಲು ಸೊಂಟದವರೆಗೆ ಬಂದಿದ್ದವು. "ಹಾಗೇ ಆಗಲಿ ಧಣಿ; ಆದರೆ ಅದಕ್ಕಿಂತ ಮೊದಲು ಒಂದಿಷ್ಟು ನಾಯಿಂದನನ್ನು ಕರೆದರೆ ಹೇಗೆ?" ಅಂದ ಸೇವಕನೊಬ್ಬ. ಹೋವರ್ಡ್ ಹ್ಯೂನಿಗೆ ಸಲಹೆ ಸರಿಯೆನಿಸಿತು. ಧಣಿ 'ಟ್ರಿಮ್' ಆಗಲು ಒಪ್ಪಿದ್ದಕ್ಕೆ ಸೇವಕರಿಗೆಲ್ಲ ಖುಷಿಯೋ ಖುಷಿ.

ಹ್ಯೂನಿಗೆ ರೋಗಾಣುಗಳ ಬಗೆಗೆ ವಿಪರೀತ ಭಯವಿದ್ದುದರಿಂದ ಕೈಗವಚಗಳನ್ನು ಧರಿಸಿಯೇ ಕ್ಷೌರ ಮಾಡಬೇಕೆಂದು ಸೇವಕರು ಕ್ಷೌರಿಕನನ್ನು ಕೋಣೆಗೆ ಕರೆತಂದರು. ಇದಾವುದೂ ಗೊತ್ತಿರದ ಹ್ಯೂ ನಿರಾತಂಕವಾಗಿ ಕ್ಷೌರ ಮಾಡಿಸಿಕೊಳ್ಳುತ್ತಿದ್ದ. ಅಕಸ್ಮಾತ್ತಾಗಿ ಅವನ ದೃಷ್ಟಿ ಕ್ಷೌರಿಕನ ಕೈಗಳತ್ತ ಹೋದದ್ದೇ ತಡ, ಕೈಗವಚಗಳನ್ನು ನೋಡಿ, "ಎಂಥಾ ಹಜಾಮನೋ ನೀನು! ಹೇಗೆ ಕ್ಷೌರ ಮಾಡಬೇಕೆನ್ನುವುದೂ ಗೊತ್ತಿಲ್ಲ. ಹೊಟ್ಟೆ ಕೊಯ್ಯುವ ಸರ್ಜನ್ನನ ಹಾಗೆ ಗ್ಲೋವ್ ಹಾಕಿಕೊಂಡು ಹಜಾಮತಿ ಮಾಡುತ್ತೀ? ಹೋಗು, ಹೋಗು ಆ ಗ್ಲೋವ್ ಒಗೆದು ಬಾ," ಎಂದು ಅಬ್ಬರಿಸಿದ. ಕೈಗವಚ ತೆಗೆದ ಮೇಲೆಯೆ ಆತ ಕ್ಷೌರ ಮುಂದುವರೆಸಲು ಒಪ್ಪಿದ್ದು. ಇದಾದ ಕೆಲವು ದಿನಗಳಲ್ಲೆ ಹ್ಯೂ ಜಾರಿಬಿದ್ದು ಕಾಲು ಮುರಿದುಕೊಂಡ. ಮುಂದೆಂದೂ ನಡೆಯಲು ಅವನಿಗೆ ಸಾಧ್ಯವಾಗಲಿಲ್ಲ.

ಅಲ್ಲಿಂದ ಬಹಾಮಾ ದ್ವೀಪಕ್ಕೆ ಪ್ರಯಾಣ. ಡೇನಿಯಲ್ ಲುಡ್‌ವಿಗ್ ಎಂಬ ಕೋಟ್ಯಧೀಶ ಕಟ್ಟಿಸಿದ ಕ್ಸಾನಾಡು ಹೊಟೇಲಿನ ಮೇಲಂತಸ್ತಿನಲ್ಲಿ ವಾಸ. ಎಲ್ಲೆ ಹೋದರೂ ಕತ್ತಲು ಕೋಣೆಯಲ್ಲೆ ವಾಸವು

ತ್ತಿದ್ದ ಆತ. ಈ ಹೊಟೇಲು ಉಳಿದ ಹೊಟೇಲುಗಳಿಗಿಂತ ಚೆನ್ನಾಗಿದ್ದುದನ್ನು ಹೇಗೆ ಕಂಡುಹಿಡಿದನೋ ಆ ದೇವರೇ ಬಲ್ಲ. ಲುಡ್‌ವಿಗ್‌ನನ್ನು ಕರೆಸಿ, ವ್ಯಾಪಾರವನ್ನು ಕುದುರಿಸಿ ಆ ಹೋಟೇಲನ್ನು ಕೊಂಡೇಬಿಟ್ಟ.

ಈಗಾತ ಟಿ.ವಿ. ಕಾರ್ಯಕ್ರಮಗಳನ್ನು ನೋಡುವುದನ್ನು ನಿಲ್ಲಿಸಿದ್ದರಿಂದ ಹೊರಜಗತ್ತಿನ ಸಂಪರ್ಕವನ್ನು ಸಂಪೂರ್ಣವಾಗಿ ಕಡಿದುಕೊಂಡಿದ್ದ. ತಿಂಗಳು ಯಾವುದೆಂಬುದಾಗಲಿ, ವಾರ ಯಾವುದೆಂಬುದಾಗಲಿ, ಕೊನೆಗೆ ದಿನ ಯಾವುದೆಂಬುದಾಗಲಿ ಅವನಿಗೆ ಗೊತ್ತೇ ಆಗುತ್ತಿರಲಿಲ್ಲ. ಆದರೆ ಸಾಹಸಭರಿತ ಸಿನೆಮಾ ನೋಡುವುದೆಂದರೆ ಅವನಿಗೆ ಎಲ್ಲಿಲ್ಲದ ಖುಷಿ. 'ಐಸ್ ಸ್ಟೇಶನ್ ಜೇಬ್ರಾ'ವನ್ನಂತೂ ಆತ ನೂರೈವತ್ತು ಸಲ ನೋಡಿದ್ದನಂತೆ.

ಕ್ಸಾನಾಡು ಹೊಟೇಲೂ ಹೋವರ್ಡ್ ಹ್ಯೂನಿಗೆ ಬೇಸರ ತಂದಿತು. ನಮ್ಮಲ್ಲಿ ಕಾಶ್ಮೀರ ಹೇಗೋ, ಮೆಕ್ಸಿಕೋದಲ್ಲಿ ಅಕ್ಕಾಪುಲ್ಕೋ. ವೇಳೆಯನ್ನು ಮಜವಾಗಿ ಕಳೆಯಲು ಶ್ರೀಮಂತರಿಗೆ ಹೇಳಿ ಮಾಡಿಸಿದ ಸ್ಥಳ. "ನಾವೂ ಅಕ್ಕಾಪುಲ್ಕೋಕ್ಕೇ ಹೋಗುವಾ." ಅಂದ ಹೋವರ್ಡ್ ಹ್ಯೂ. ಒಂದು ಜೆಟ್ ವಿಮಾನವನ್ನು ಬಾಡಿಗೆ ಹಿಡಿದು ನೀರವ ರಾತ್ರಿಯಲ್ಲಿ ಅವನ ಸೇವಕರು ಸ್ಟ್ರೆಚರ್ ಮೇಲೆ ಹೊತ್ತು ಕಾರಿನ ಮೂಲಕ ವಿಮಾನಕ್ಕೆ ಸಾಗಿಸಿದರು. ಬೆಳಗಾಗುವುದರೊಳಗೆ ವಿಮಾನ ಅಕ್ಕಾಪುಲ್ಕೋದಲ್ಲಿತ್ತು. ಅವರು ಅಲ್ಲಿಗೆ ಹೋದದ್ದು ಯಾರಿಗೂ ಗೊತ್ತಾಗಬಾರದಲ್ಲ!

ಅವನಿಗಾಗ ಎಪ್ಪತ್ತರಷ್ಟು ವಯಸ್ಸು. ಇತ್ತಿತ್ತಲಾಗಿ- ಅದನ್ನು ಊಟ ಎಂದು ಕರೆಯಬಹುದಾದರೆ- ಊಟ ಮಾಡುವುದನ್ನೇ ಬಿಟ್ಟಿದ್ದ. ಗಡ್ಡ ಮತ್ತೆ ಸೊಂಟದವರೆಗೆ ಬೆಳೆದಿತ್ತು. ತಲೆಯಂತೂ ಎಷ್ಟೋ ವರ್ಷಗಳಿಂದ ಎಣ್ಣೆಯನ್ನೇ ಕಂಡಿರಲಿಲ್ಲ. ದೇಹದ ತೂಕ ೯೦ ಪೌಂಡಿಗೆ ಇಳಿದಿತ್ತು. ಸೊಂಟ ಬಾಗಿತ್ತು. ಮೈನೋವಿನ ಶಮನಕ್ಕಾಗಿ ಆತ ಔಷಧಿಗಳನ್ನೇ ಅವಲಂಬಿಸಬೇಕಾಗಿತ್ತು.

ದಿನೇ ದಿನೇ ಶರೀರ ಕ್ಷೀಣಿಸುತ್ತಿದ್ದುದನ್ನು ಕಂಡು ಗಾಬರಿಯಾದ ಸೇವಕರು ಹ್ಯೂ ಏನೆಂದರೂ ಸರಿ, ಡಾಕ್ಟರರನ್ನು ಕರೆಸಿಯೇ ಬಿಡುವುದೆಂದು ನಿರ್ಧರಿಸಿದರು. ಡಾಕ್ಟರರು ಅವನನ್ನು ಪರೀಕ್ಷಿಸಿ, "ಹೊಟ್ಟೆಗಿಲ್ಲದೆ ಹೀಗಾದದ್ದು. ಸಾಲದ್ದಕ್ಕೆ ಇಷ್ಟು ವರ್ಷಗಳಿಂದ ಔಷಧಿಗಳನ್ನು ಬೇರೆ ನುಂಗಿದ್ದಾನೆ. ಈ ಪರಿಸ್ಥಿತಿಯಲ್ಲಿ ನಾವಾದರೂ ಏನು ಮಾಡಲಿಕ್ಕಾಗುತ್ತದೆ?" ಅಂದರು. ಆ 'ಹೊಟ್ಟೆಗಿಲ್ಲದವ' ಜಗತ್ತಿನ ಅತಿ ಶ್ರೀಮಂತರಲ್ಲಿ ಒಬ್ಬನೆನ್ನುವುದು ಅವರಿಗಾದರೂ ಹೇಗೆ ಗೊತ್ತಾಗಬೇಕು?

ಅವನ ಪ್ರಾಣವನ್ನುಳಿಸಲು ಅಮೆರಿಕದಲ್ಲಾದರೂ ಸಾಧ್ಯವಾಗಬಹುದೆಂದು ಅವನ ಆಪ್ತವರ್ಗದವರು ಒಂದು ವಿಮಾನವನ್ನು ಗೊತ್ತುಪಡಿಸಿದರು. ಆದರೆ ತಾಯ್ನಾಡನ್ನು ಕಾಣುವ ಯೋಗ ಹೋವರ್ಡ್ ಹ್ಯೂನಿಗೆ ಇರಲಿಲ್ಲ.

●

## ಅತಿ ಚಿಕ್ಕ ಕುರಾನ್

ಎರಡು ಸೆಂಟಿಮೀಟರ್ ಉದ್ದ, ಒಂದೂವರೆ ಸೆಂಟಿಮೀಟರ್ ಅಗಲ ಹಾಗೂ ಒಂದು ಸೆಂಟಿಮೀಟರ್ ದಪ್ಪದ ಪವಿತ್ರ ಕುರಾನ್ ಕಾಸರಗೋಡಿನ ಬೇಕಲ ಸಮೀಪದ ಕೆ. ರಿಯಾಜ್ ಎಂಬುವರ ಬಳಿ ಇದೆ. ತನಗೆ ತಿಳಿದಿರುವಂತೆ ಇದು ಅತಿ ಚಿಕ್ಕ ಕುರಾನ್ ಆಗಿದೆಯೆಂದು ಕೆ. ರಿಯಾಜ್ ಹೇಳುತ್ತಾರೆ. ಸಾಮಾನ್ಯ ಇದೇ ಗಾತ್ರದ ಚಿಕ್ಕ ಹಿತ್ತಾಳೆ ಪೆಟ್ಟಿಗೆಯೂ ಇದರೊಂದಿಗೆ ಇದ್ದು, ಅದನ್ನು ಇದರಲ್ಲಿ ಸಂರಕ್ಷಿಸಿಡಲಾಗಿದೆ. ಸುಮಾರು ೫೦೦ ಪುಟದ ಈ ಮಿನಿ ಗ್ರಂಥವನ್ನು ಈಜಿಪ್ಟ್‌ನಲ್ಲಿ ಮುದ್ರಿಸಿರುವ ಬಗ್ಗೆ ಪುಸ್ತಕದಲ್ಲಿ ದಾಖಲೆಯಿದೆ. ಇದನ್ನು ಪಠಿಸಲು ಭೂತಕನ್ನಡಿಯ ನೆರವೇ ಬೇಕೆನ್ನುತ್ತಾರೆ ರಿಯಾಜ್.

ಸಂಗ್ರಹ: **ನಾರಾಯಣ ರೈ ಕುಕ್ಕುವಳ್ಳಿ**



# ಬೇಂದ್ರೆ ನೆನಪು

# ಯೋಗಾಯೋಗದ ಭೇಟಿ, ಯೋಗೇಶ್ವರನ ಧಾಟಿ

● ಅನಂತ ಕಲ್ಲೋಳ

೧೯೭೨-೭೩ರಲ್ಲಿ ನಾನು ಬೆಳಗಾವಿಯಲ್ಲಿ ಕೇಂದ್ರ ಅಬ್ಕಾರಿ ಇಲಾಖೆಯಲ್ಲಿ ನಿರೀಕ್ಷಕನಾಗಿ ಕಾರ್ಯನಿರತನಾಗಿದ್ದ. ಕಳ್ಳಸಾಗಣೆ ಪತ್ತೆಗಾಗಿ ಆಗಾಗ ಕೇಂದ್ರೀಯ ಬಸ್ ನಿಲ್ದಾಣಕ್ಕೆ ತನಿಖೆಗಾಗಿ ಹೋಗಬೇಕಾಗುತ್ತಿತ್ತು. ಒಂದು ಸಲ ಹೀಗೆ ಬೆಳಗಾವಿಯ ಬಸ್ ನಿಲ್ದಾಣದಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಮಧ್ಯಾಹ್ನ ಒಂದೂವರೆ ಸುಮಾರಿಗೆ ಪುಣೆ-ಹುಬ್ಬಳ್ಳಿಯ ಬಸ್ಸು ಬಂದು ತಂಗಿತು. ಯಥಾಪ್ರಕಾರ ನಾವು ಇಬ್ಬರು ಮೂವರು ಜನ ಸಹೋದ್ಯೋಗಿಗಳು ಆ ಬಸ್ ಪ್ರವೇಶಿಸಿ ಕಾರ್ಯಾಚರಣೆ ನಡೆಸಿದೆವು. ಬಸ್ಸಿನಲ್ಲಿ ಅಂಥ ಜನದಟ್ಟಣೆ ಇರಲಿಲ್ಲ. ಹಲಕೆಲವರು ಊಟಕ್ಕೆ, ಫಲಹಾರಕ್ಕೆ ಎಂದು ಬಸ್ಸಿನಿಂದ ಇಳಿದಿದ್ದರು. ಕೆಲವೇ ಕೆಲವು ಪಯಣಿಗರು ಮಾತ್ರ ಆ ಬಸ್ಸಿನಲ್ಲಿ ಉಳಿದಿದ್ದರು. ಬಸ್ಸಿನಲ್ಲಿದ್ದವರನ್ನೆಲ್ಲ ನಿರುಕಿಸುತ್ತಿದ್ದಂತೇ ಮುಂದಿನ ಸಾಲಿನ ಪೀಠದಲ್ಲಿ ಕಿಟಕಿಯ ಪಕ್ಕದಲ್ಲಿ ಓರ್ವ ಹಿರಿಯರನ್ನು ಕಂಡೆ. ಬೆಚ್ಚನೆ ಕೋಟು, ಅರ್ಧ ತಲೆ ತೋರುವ ರಟ್ಟಿನ ಟೋಪಿ ನೆತ್ತಿಯ ಮೇಲೆ, ಟೋಪಿಯ ಸಂದಿನಿಂದ ಹಿಂಬದಿಗೆ ಮೋಟು ಬಿಳಲುಗಳಂತೆ ಇಳಿಬಿದ್ದ ತಲೆಗೂದಲು. ಮೂಗಿನ ಮೇಲಣ ಕನ್ನಡಕದಿಂದ ಕಣ್ ಪಿಳುಕಿಸದೇ ನೆಟ್ಟನೆ ದೃಷ್ಟಿಯಿಂದ ಸುತ್ತೆಲ್ಲ ನೋಡುತ್ತ ಕುಳಿತಿದ್ದರು ವರ ಕವಿ ದ.ರಾ: ಬೇಂದ್ರೆ!

ಅವರ ಬಳಿ ಹೋಗಿ ನಮಸ್ಕರಿಸಿದೆ.

"ಏನು ಸರ್? ಈ ವಯಸ್ಸಿನಲ್ಲಿ ಪುಣೆಯಿಂದ ಹುಬ್ಬಳ್ಳಿ-ಧಾರವಾಡದವರೆಗೆ ಈ ಸಾದಾ ಬಸ್ಸಿನಲ್ಲಿ ಪಯಣಿಸಿ ಹಣ್ಣಾಗುವುದೇ? ಯಾವಾಗ ಬೆಳಿಗ್ಗೆ ಐದು-ಐದೂವರೆ ಗಂಟೆಗೆ ಪುಣೆ ಬಿಟ್ಟಿರಬೇಕಲ್ಲ? ಚಹ, ತಿಂಡಿ ತರ್ರೇನೆ. ನೀವು ಕೆಳಗೆ ಇಳಿದಂತೆ ಕಾಣಲಿಲ್ಲ...." ಹಿರಿಯ ಕವಿಯನ್ನು ಇಷ್ಟೊಂದು ಹತ್ತಿರದಿಂದ ನೋಡಿದ್ದಕ್ಕಾಗಿ ಹಾಗೂ ಸಲೀಸಾಗಿ ಅವರೊಡನೆ ಮಾತನಾಡಲು ಅವಕಾಶ ದೊರಕಿದ್ದಕ್ಕಾಗಿ ಹರ್ಷಭರಿತನಾಗಿ ಒಂದೇ ಉಸುರಿನಲ್ಲಿ ಮಾತನಾಡಿದೆ. (ಹಿಂದಿನ ದಿನವೇ ಒಂದು ಮರಾಠಿ ಪತ್ರಿಕೆಯಲ್ಲಿ ಅವರು ಪುಣೆಯಲ್ಲಿನ ತಮ್ಮ ವ್ಯಾಖ್ಯಾನದಲ್ಲಿ "ಕನ್ನಡವು ಯೋಗದ ಭಾಷೆ" ಎಂದು ಸಾರಿದ್ದ ವರದಿ ಓದಿದ್ದು ನನ್ನ ಮನಸ್ಸಿನಲ್ಲಿನ್ನೂ ತಾಜಾ ಆಗಿತ್ತು.)

ಇದು ವರಕವಿ ಡಾ. ದತ್ತಾತ್ರೇಯ ರಾಮಚಂದ್ರ ಬೇಂದ್ರೆಯವರ ಜನ್ಮಶತಮಾನೋತ್ಸವ ವರ್ಷ. ಆ ಶಬ್ದಗಾರುಡಿಗನೊಂದಿಗೆ ನೀವು ಒಂದಷ್ಟಾದರೂ ಸಮಯ ಕಳೆದಿರಬೇಕಲ್ಲವೆ? ನಿಮ್ಮ ನೆನಪುಗಳನ್ನು ದಯವಿಟ್ಟು ನಮಗೆ ಚಿಕ್ಕದಾಗಿ ಬರೆದು ಕಳಿಸಿ.

● ಸಂಪಾದಕ

"ಚಹಾ, ಕಾಫಿ ಏನೇನೂ ಬ್ಯಾಡ. ಇನ್ನೇನು, ಒಂದೆರಡು ಘಳಿಗ್ಯಾಗs ಧಾರವಾಡ ಬರ್ತದಲ್ಲ" ಅಂತಂದು ನನ್ನ ಹೆಸರು, ಉದ್ಯೋಗ ಮುಂತಾಗಿ ಲೋಕಾಭಿರಾಮದ ಪ್ರಶ್ನೆ ಕೇಳಿದರು.

"ಸರ್, ಈ ಬಸ್ಸು ಕನಿಷ್ಟ ಅರ್ಧ ತಾಸು ನಿಲ್ಲತದ ಇಲ್ಲಿ, ಅಷ್ಟರಾಗs ಸ್ಪೇಷಲ್ ಚಹಾ ಮಾಡಿಸಿಕೊಂಡು ತರ್ತೀನಿ" ಎಂದೆ.

ಬೇಡವೆಂಬಂತೆ ತಲೆಯಾಡಿಸಿದರು.

"ಏನೂ ಬ್ಯಾಡಂದ್ರ ಹ್ಯಾಂಗ? ಹಣ್ಣು ತಗೊಂಡು ಬರ್ತೀನಿ" ಎಂದು ನಾನು ಮುಂದಡಿ ಇಟ್ಟೆ.

"ಹಾಂಗಾದ್ರ ಹಣ್ಣಿನ ಬದಲೀ ಪೆಪ್ಪರಮಿಂಟ್ ತಗೊಂಡು ಬಾ" ಎಂದರು ಕಣ್ಣಲ್ಲಿ ತುಂಟತನ ತುಳುಕಿಸುತ್ತ. ನಾನು ಸಂತೋಷಗೊಂಡು ಕೆಳಗಿಳಿದು ಹೋಗಿ ಪೆಪ್ಪರಮಿಂಟ್ ಪೊಟ್ಟಣವನ್ನು ಕಟ್ಟಿಸಿಕೊಂಡು ಬಂದೆ. ಅದನ್ನು ಅವರ ಕೈಗೆ ಕೊಡುತ್ತಿದ್ದಂತೆಯೆ ಒಂದು ಬಗೆಯ ಸಾರ್ಥಕ್ಯಭಾವ ಆವರಿಸಿತು.

"ಹೂಂ, ಹಿಡಿ" ಅವರು ಆ ಪೊಟ್ಟಣ ಬಿಡಿಸಿ ನನಗೇ ಮೊದಲ ಪೆಪ್ಪರಮಿಂಟು ನೀಡಿದರು. ನಂತರ ಹಿಂದಿನ ಸಾಲಿನಲ್ಲಿ ಅಲ್ಲಲ್ಲಿ ಕುಳಿತಿದ್ದವರಿಗೂ ಪೆಪ್ಪರಮಿಂಟು ಹಂಚಿದರು. ತಾವೂ ಬಾಯಲ್ಲಿ ಒಂದನ್ನು ಹಾಕಿಕೊಂಡು ಚಪ್ಪರಿಸತೊಡಗಿದರು.

"ಸರ್, ನೀವು ಮೊನ್ನೆ ಪುಣೇದಾಗ ಭಾಷಣ ಮಾಡಿದ್ರೆಲ್ಲಾ, ಆಗ 'ಕನ್ನಡವೆಂದರೆ ಯೋಗದ ಭಾಷೆ' ಅಂತ ಹೇಳಿದ್ರಿ ಅಂತ ಪತ್ರಿಕೆಯೊಳಗೆ ವರದಿ ಓದೇನಿ. 'ಕನ್ನಡ ಭಾಷೆ ಅಂತಂದ್ರ ಯೋಗದ ಭಾಷೆ' ಹ್ಯಾಂಗ?" ನಾನು ಕೇಳಿದೆ. ಕ್ಷಣ ಹೊತ್ತು ನನ್ನನ್ನು ದಿಟ್ಟಿಸಿ ನೋಡಿದ ನಂತರ ನನ್ನ ಬೆನ್ನ ಮೇಲೆ ಕೈ ಸವರುತ್ತ....

"ನಾನು ನಿನ್ನ ಬೆನ್ನು ಚಪ್ಪರಿಸ್ತಿದ್ದೀನಿ. ನಿನ್ನ ಬಾಯಿ ಪೆಪ್ಪರ್‌ಮಿಂಟು ಚಪ್ಪರಿಸ್ಲಿಕ್ಕೆ ಹತ್ತೇದ...." ಎಂದಂದು ಮುಗುಳ್ನಕ್ಕರು. 'ಚಪ್ಪರಿಸು' ಎಂಬ ಕ್ರಿಯಾಪದದ ಶ್ಲೇಷಾರ್ಥದ ಚಮತ್ಕಾರದಲ್ಲಿ ನನ್ನನ್ನು ಸಿಲುಕಿಸಿದ ಆ ಶಬ್ದ ಗಾರುಡಿಗ ತಮ್ಮ ಆ ಪುಣೆಯ ವಕ್ತವ್ಯವನ್ನು ನನಗೆ ಹ್ಯಾಗೆ ತಿಳಿಸಿ ಹೇಳಬೇಕು ಎಂದು ಯೋಚಿಸುತ್ತಿದ್ದಂತೆ ಕಂಡಿತು. ಮರುಕ್ಷಣವೇ ಮುಂದುವರಿಯಿತು ಅವರ ಮಾತಿನ ಮೋಡಿ.

"....ನೋಡು, ಕನ್ನಡದಾಗಿನ ಕ್ರಿಯಾಪದಗಳನ್ನು ಹೇಳು ನೋಡೋಣ ನಾಲ್ಕಾರು?" ಅವರಲ್ಲಿಯ ಮಾಸ್ತರ ಸದಾ ಜಾಗೃತ!

"ಮಾಡು, ತಿಳಿ, ಅರಿ, ಹೊಳೆ, ತೆರೆ, ಕರೆ, ಕಾಡು, ಕೂಡು...."

"ಸಾಕು, ಸಾಕು, ಇವೆಲ್ಲ ನಾಮಪದಾನೂ ಆಗ್ತಾವ ಹೌದಲ್ಲೋ?"

"ಪಡೆ, ಹೊಡೆ, ಕಡೆ, ನಡೆ....."

"ಇವೂ ಎಲ್ಲ ನಾಮಪದ ಸಹ ಆಗ್ತಾವ. ಇದs ಕನ್ನಡ ಭಾಷೆಯ ವಿಶೇಷತೆ. ಕ್ರಿಯೆ ಮತ್ತು ನಾಮ ಒಗ್ಗೂಡಿದ ಅಖಂಡವಾದ ನುಡಿ ಕನ್ನಡ. ಈ ನುಡಿ ಸಹ ಕ್ರಿಯಾಪದನೂ ಅದss ನಾಮಪದವೂ ಆಗೇದ. ಇಂಥ ಭಾಷೆ ಬೇರೊಂದಿಲ್ಲ. 'ಯೋಗದ ಭಾಷೆ' ಅಂತಂದ್ರ 'ಕೂಡಿಸೋ ಭಾಷೆ.' ಕ್ರಿಯೆ ಮತ್ತು ನಾಮ ಸಂಯುಕ್ತ; ಕರ್ತೃ, ಕರ್ಮ, ಕ್ರಿಯಾಪದ ಅವಿಭಕ್ತ...."

ಅಷ್ಟರಲ್ಲಿ ಬಸ್ ಬಿಡುವ ಹೊತ್ತಾಯಿತು.

ಬೆಳಗಾವಿ ಬಸ್ ನಿಲ್ದಾಣದಲ್ಲಿ ನಿಂತ ಸಾರಿಗೆ ಬಂಡಿಯೊಳಗೆ ಹೀಗೆ ಬೇಂದ್ರೆಯವರ ಕೊರಳಿನಿಂದ ಅಂಬಿಕಾತನಯ ಸಾರುತ್ತಿದ್ದಾಗ ನನ್ನ ಗತಿ ಕುರುಕ್ಷೇತ್ರದಲ್ಲಿ ರಥದಲ್ಲಿ ಕುಳಿತ ಯೋಗೇಶ್ವರನೆದುರಿನ ಅರ್ಜುನನ ಸ್ಥಿತಿಯೇ ಆಗಿತ್ತು. ಪುಣೆಯಲ್ಲಿ ಅವರು ಆ ವಕ್ತವ್ಯ ನೀಡಿದ್ದಾಗ ಯಾವ ಸಂದರ್ಭವಿತ್ತೋ ಏನೋ, ಆದರೆ ಇಲ್ಲಿ ನಾನು ಪ್ರದರ್ಶಿಸಿದ ಜಿಜ್ಞಾಸೆಗೆ ಅವರಲ್ಲಿ ತತ್‌ಕ್ಷಣದ ಪ್ರಜ್ಞಾವಂತಿಕೆ ಪ್ರಜ್ವಲಿಸಿ ಈ ವಿಚಾರವನ್ನು ಪ್ರಕಟಿಸಿದ್ದು ನನ್ನ ಮನದಲ್ಲಿನ್ನೂ ಹಚ್ಚಹಸರಾಗಿ ಉಳಿದಿದೆ. ಅಷ್ಟೇ ಅಲ್ಲ, ಮನದ ಜಿಡ್ಡನ್ನು ಕೆತ್ತಿ ಹಾಕುವ ಉಳಿಯಂತೆ ಆಗಾಗ ಉಪಯೋಗಕ್ಕೆ ಬಂದಿದೆ.

# ಎರಡು ವರ್ಷ ಶವವನ್ನು ಉಪಚರಿಸಿದ ಮಡದಿ

• ಉತ್ತಂಗಿವಾಲಾ

**ಸಾ**ವಿತ್ರಿ.....

ಹೆಸರು ಕೇಳಿರಬೇಕಲ್ಲವೆ? ಅದೇ... ಯಮನ ಬೆನ್ನುಬಿದ್ದು ಗಂಡನನ್ನು ಮರಳಿ ಪಡೆದಾಕೆ. ಚಂಡೀಗಢದಲ್ಲಿ ಆ ಸಾವಿತ್ರಿಯನ್ನೂ ಮೀರಿಸುವಂಥ ಪತ್ನಿಯೊಬ್ಬಾಕೆ ಇದ್ದಾಳೆ. ಆದರೆ ಆಕೆ ಯಮದೇವನನ್ನು ಹಿಂಬಾಲಿಸಿ ಮುತ್ತೈದೆತನ ಕರುಣಿಸೆಂದು ಗೋಗರೆಯಲಿಲ್ಲ. ಬದಲಾಗಿ ಇಪ್ಪತ್ತೆರಡು ತಿಂಗಳುಗಳ ಕಾಲ ಗಂಡನ ಕಳೇವರ ವನ್ನು ಜೋಪಾನ ಮಾಡಿದಳು. ಜೀವ ಈಗ ಮರಳೀತು, ಇನ್ನೊಂದು ಕ್ಷಣಕ್ಕೆ ಮರಳೀತು ಎಂದು ಕಾದೇ ಕಾದಳು. ಪೊಲೀಸರು ಬರದಿದ್ದರೆ ಆಕೆಯ 'ವ್ರತ' ಇನ್ನೂ ಎಷ್ಟು ದಿನ ಮುಂದುವರಿಯುತ್ತಿತ್ತೋ?

"ನಗರದ ಎಂಟನೆ ವಿಭಾಗದ ಮನೆಯೊಂದರಲ್ಲಿ 'ಅಧ್ಯಾತ್ಮಿಕ ಸುಪ್ತಾವಸ್ಥೆ' (Spiritual Coma)ಯಲ್ಲಿರುವ ಶವವನ್ನು ಗೃಹಿಣಿಯೊಬ್ಬಳು ಉಪಚರಿಸುತ್ತಿದ್ದಾಳೆ" ಎಂಬ ಸುದ್ದಿಯನ್ನು ಹೀಗೊಂದು ದಿನ ಚಂಡೀಗಢದ ಪತ್ರಿಕೆಗಳು ಹರಿಬಿಟ್ಟವು. ಪತ್ರಿಕಾ ವರದಿಗಳನ್ನು ಓದಿದ ಕೆಲವರಿಗೆ ಕುತೂಹಲ, ಕೆಲವರಿಗೆ ಜಿಗುಪ್ಸೆ, ಮತ್ತೆ ಕೆಲವರಿಗೆ



ಸಿಟ್ಟು ಬಂದದ್ದು ಸಹಜ. ಅವರೆಲ್ಲರೂ ಬಲದೇವ್ ಸಿಂಗ್‌ನ ಮನೆಯತ್ತ ದೌಡಾಯಿಸಿ ಬಂದರು. ತಾವು ಓದಿದ್ದನ್ನು, ಕೇಳಿದ್ದನ್ನು ದೃಢಪಡಿಸಿ ಕೊಳ್ಳುವುದರೊಂದಿಗೆ ಹೆಚ್ಚಿನ ವಿವರಗಳನ್ನು ತಿಳಿಯುವುದು ಅವರ ಉದ್ದೇಶವಾಗಿತ್ತು. ಈ ಬಲದೇವ್‌ಸಿಂಗ್ ಸಂಸ್ಕಾರ ಕಾಣದೆ ಮಲಗಿದ್ದ ಎಸ್.ಆರ್. ದತ್ತನ ಆಪ್ತಮಿತ್ರ.. ಪಡಿತರ ಅಂಗಡಿಗಳ ಮುಂದೆಯೂ ಇಲ್ಲದಷ್ಟು ಸಂದಣಿ ನೆರೆಯಿತು.

"ಹೆಣವನ್ನು ತೋರಿಸುವುದಿಲ್ಲ" ಎಂದು ಸಿಂಗ್‌ನ ಕುಟುಂಬದವರು ಕೈ ಅಲ್ಲಾಡಿಸಿದಾಗ ನೆರೆದ ಜನ ಉದ್ರಿಕ್ತರಾದರು. ಒಳಗೆ ಬಿಡದಿದ್ದರೆ ಬಲಾತ್ಕಾರದಿಂದಲಾದರೂ ಪ್ರವೇಶಿಸಿ ತಾವು ಹೆಣವನ್ನು ನೋಡುವವರೇ ಎಂದು ಗುಂಪು ಬೆದರಿಕೆ ಹಾಕಿತು. ಯಾರೋ ೧೦೦ ಸಂಖ್ಯೆಗೆ ಫೋನಾಯಿಸಿದರು. ಗಡಬಡಿಸಿ ಬಂದ ಪೊಲೀಸರು ಬಲದೇವ್ ಸಿಂಗ್‌ನ ಮನೆಯಿಂದ ಎಸ್.ಆರ್. ದತ್ತನ ಸುಗಂಧಲೇಪಿತ ಕಳೇವರವನ್ನು ವಶಪಡಿಸಿಕೊಂಡರು. ಆ ಕ್ಷಣದಿಂದಲೆ ಕುತೂಹಲ ಭರಿತ ಪ್ರಕರಣವೊಂದರ ನಿಗೂಢ ಸಂಗತಿಗಳು ಒಂದೊಂದಾಗಿ ಅನಾವರಣಗೊಳ್ಳತೊಡಗಿದವು.

ಇದಕ್ಕೆ ಕೆಲವೇ ದಿನಗಳ ಮುಂಚೆ ಹಿಮಾಚಲ ಪ್ರದೇಶದ ಡೆಪ್ಯುಟಿ ಎಸ್.ಪಿ. ದೇಸ್ರಾಜ್ ಶರ್ಮಾ ಚಂಡೀಗಢಕ್ಕೆ ಬಂದಿದ್ದರು (೧ ಮೇ, ೧೯೮೭). ೧೯೮೫ರ ಜೂನ್ ತಿಂಗಳಿನಿಂದ ಅನಧಿಕೃತವಾಗಿ ಗೈರು ಹಾಜರಾಗಿದ್ದ ಅರಣ್ಯಾಧಿಕಾರಿ ಎಸ್.ಆರ್. ದತ್ತ ಕೆಲಸಕ್ಕೆ ಮರಳಲಿಲ್ಲವೇಕೆಂಬುದರ ತನಿಖೆ ನಡೆಸುವುದು ಅವರ ಭೇಟಿಯ ಉದ್ದೇಶ. ಈ ಮಧ್ಯೆ ತನ್ನ ಗಂಡನ ರಜೆಯನ್ನು ವಿಸ್ತರಿಸುವಂತೆ ಶ್ರೀಮತಿ ಕಮಲೇಶ್ ಒಂದಲ್ಲ ಒಂದು ಸಬೂಬು ಹೇಳಿ ಮನವಿಗಳನ್ನು ಕಳಿಸುತ್ತಲೇ ಇದ್ದಳು. ದೇಸ್ರಾಜ್ ಶರ್ಮಾ ಅವರ ತನಿಖೆಗೆ ಶ್ರೀಮತಿ ಕಮಲೇಶ ಸಹಕರಿಸಲೇ ಇಲ್ಲ. ತನ್ನ ಗಂಡ 'ಆಧ್ಯಾತ್ಮಿಕ ಸುಪ್ತಾವಸ್ಥೆ'ಯಲ್ಲಿದ್ದಾನೆಂದೇ ಆಕೆಯ ವಾದ. ಶರ್ಮಾ ಎಷ್ಟು ಕೋರಿಕೊಂಡರೂ ಆಕೆ ಗಂಡನನ್ನು ತೋರಿಸಲೊಪ್ಪಲಿಲ್ಲ. ಮನೆಯೊಳಕ್ಕೆ ಹೊರಗಿನ ಒಂದು ನರಪಿಳ್ಳೆಯನ್ನೂ ಬಿಡಬೇಡ ಎಂದು ತನ್ನ ಗುರು ಅಮೀರಚಂದ ಕೌಶಲ್ ಕಟ್ಟುನಿಟ್ಟಾಗಿ ತಾಕೀತು ಮಾಡಿದ್ದಾರೆಂದು ಆಕೆ ವಾದಿಸಿದಳು. ಶರ್ಮಾಗೆ ಅನುಮಾನ ಹುಟ್ಟಲು ಇನ್ನೇನು ಬೇಕು? ಈ ಘಟನೆಯ ಬೆನ್ನಲ್ಲೇ ಶವ ಶುಶ್ರೂಷೆಯ ವರದಿಗಳು ಪ್ರಕಟವಾಗಿ ಪೊಲೀಸರ ಮತ್ತು ಸಾರ್ವಜನಿಕರ ಹುಬ್ಬುಗಳು ಹಣೆಗೇರಿ ನಿಂತವು.

ತನ್ನ ಸೋದರನನ್ನು ಕೊಲೆಗೈಯಲಾಗಿದೆ ಎಂದು ಅನಿಲ್ ದತ್ತ ಹಿರಿಯ ಪೊಲೀಸು ಅಧಿಕಾರಿ ಆರ್.ಕೆ. ನಿಯೋಗಿ ಅವರಿಗೆ ನೀಡಿದ ದೂರನ್ನು ಆಧರಿಸಿ ಚಂಡೀಗಢದ ಪೊಲೀಸರು ಕಾರ್ಯಾಚರಣೆಗಿಳಿದರು. ದತ್ತನ ಅಸ್ಥಿಪಂಜರವನ್ನು ವಶಪಡಿಸಿಕೊಳ್ಳಲಾಯಿತು. ದತ್ತನನ್ನು ಕೊಂದು ಸಾಕ್ಷ್ಯಾಧಾರಗಳನ್ನು ನಾಶಪಡಿಸಲು ಹುನ್ನಾರ ಮಾಡಿದ, ಶವವನ್ನು ಅಕ್ರಮವಾಗಿ ಮನೆಯಲ್ಲಿಟ್ಟುಕೊಂಡ ಆರೋಪದ ಮೇಲೆ ಅಮೀರಚಂದ್ ಕೌಶಲ್, ಬಲದೇವ್ ಸಿಂಗ್ ಮತ್ತು ಆತನ ಪತ್ನಿ ದಲಜೀತ್ ಕೌರ್ ಅವರಿಗೆ ಕೋಳ ತೊಡಿಸಿದರು.

ಶ್ರೀಮತಿ ಕಮಲೇಶ್ ಮೇಲೆ ಪೊಲೀಸರು ಯಾವೊಂದು ಕ್ರಮವನ್ನೂ ತೆಗೆದುಕೊಳ್ಳಲಿಲ್ಲ. ಅನಿಲ್‌ದತ್ತ ನೀಡಿದ ದೂರಿನಲ್ಲಿ ಆಕೆಯ ಹೆಸರನ್ನು ಉಲ್ಲೇಖಿಸದಿರದಿದ್ದುದು ಇದಕ್ಕೆ ಮುಖ್ಯ ಕಾರಣವಾದರೆ, "ಬಂಧಿತರಾದ ಮೂವರು ಆರೋಪಿಗಳು ನನ್ನ ಗಂಡ ಜೀವಂತವಾಗಿದ್ದಾ

> ಮೂರು ವರ್ಷಗಳ ಹಿಂದೆ ಕಲಕತ್ತಾದಲ್ಲಿ ಬಾಲಕ ಬ್ರಹ್ಮಚಾರಿಯ ಶರೀರಕ್ಕೆ ಅಂತ್ಯಸಂಸ್ಕಾರ ಮಾಡಲು ಆತನ ಅನುಯಾಯಿಗಳು ಪ್ರಬಲ ವಿರೋಧ ವ್ಯಕ್ತಪಡಿಸಿದ್ದರು. ಆತ ಇಹಲೋಕ ತ್ಯಜಿಸಿ ಕೆಲವೇ ದಿನಗಳಾಗಿತ್ತು. ಆದರೆ ಚಂಡೀಗಢದಲ್ಲಿ ಶವವೊಂದು ಎರಡು ವರ್ಷ ಆರೈಕೆ ಮಾಡಲ್ಪಟ್ಟ ನಿಜ ಸಂಗತಿಯನ್ನು ನಂಬುವುದು ಕಷ್ಟ.

ನೆಂದು ನನ್ನನ್ನು ನಂಬಿಸಿದರು" ಎಂದು ಆಕೆ ಹೇಳಿಕೆ ನೀಡಿದ್ದು ಇನ್ನೊಂದು ಕಾರಣ.

"ನಾನು ಗಂಡ ಮತ್ತು ಮಕ್ಕಳೊಡನೆ ಬಲದೇವ್ ಸಿಂಗ್‌ನ ಮನೆಯಲ್ಲಿ ಇರತೊಡಗಿದಾಗಲೆ ನಮಗೆ ದುರ್ದೆಶೆ ಪ್ರಾರಂಭವಾಗಿತ್ತು. ನನ್ನ ಗಂಡನ ಕತ್ತಿನ ಹಿಂದೆ ಎದ್ದ ಕುರುವೊಂದು ತುಂಬಾ ನೋವು ಕೊಡುವಂಥದು. ಅದು ವಾಸಿಯಾಗುವ ಲಕ್ಷಣಗಳು ಕ್ಷೀಣಿಸತೊಡಗಿದಾಗ ಬಲದೇವನನ್ನು ಕಂಡೆವು. ಗುರು ಕೌಶಲರಿಂದ ಆಧ್ಯಾತ್ಮಿಕ ಚಿಕಿತ್ಸೆ ಪಡೆದುಕೊಳ್ಳುವಂತೆ ಆತ ಸಲಹೆ ಮಾಡಿದ. ಕೌಶಲರ ಸೂಚನೆಯ ಮೇರೆಗೆ ನನ್ನವರು ಯಾವ ಔಷಧ ಸ್ವೀಕರಿಸಲೂ ಒಲ್ಲೆನೆಂದರು. ಕುರು ಮಾತ್ರ ಏಕಪ್ರಕಾರವಾಗಿ ದೊಡ್ಡದಾಗುತ್ತಲೆ ಇತ್ತು. ೧೯೮೫ ಜೂನ್ ೧೮ರಂದು ಪರಿಸ್ಥಿತಿ ಬಿಗಡಾಯಿಸಿತು. ಅವತ್ತು ನನ್ನವರು ಕುಸಿದು ಬಿದ್ದರು. ನನಗೆ ಭಯದಿಂದ, ಅಸಹಾಯಕತೆಯಿಂದ ಕೈಕಾಲೇ ಆಡಲಿಲ್ಲ. ಬಲದೇವ್‌ನನ್ನು ಕರೆಸಿಕೊಂಡೆ. ಗುರೂಜಿಯನ್ನು ಕಾಣುವಂತೆ ಆತ ಹೇಳಿದ. ಛೆ, ಛೆ, ಗಾಬರಿಪಡುವಂಥದ್ದೇನಿಲ್ಲ. ನಿನ್ನ ಗಂಡ ಸುಪ್ತಾವಸ್ಥೆಯಲ್ಲಿದ್ದಾನೆ ಎಂದು ಗುರೂಜಿ ಧೈರ್ಯ ತುಂಬಲು ಯತ್ನಿಸಿದರು. ಆದರೆ ನನ್ನವರ ನಾಡಿ ಮಿಡಿಯುತ್ತಿಲ್ಲ, ಉಸಿರಾಟ ನಡೆಯುತ್ತಿಲ್ಲ ಎಂಬುದು ನನ್ನರಿವಿಗೆ ಬಂದಿತ್ತು..." ಎಂದು ಶ್ರೀಮತಿ ಕಮಲೇಶ್ ಒಂದೊಂದೇ ಘಟನೆಗಳನ್ನು ನೆನಪಿಗೆ ತಂದುಕೊಳ್ಳುತ್ತಾಳೆ.

ಗುರುವಿನಲ್ಲಿಟ್ಟಿದ್ದ ಅತೀವ ವಿಶ್ವಾಸದಿಂದಾಗಿ ಆಕೆ ತನ್ನ ಗಂಡನ ಉಪಚಾರವನ್ನು ಮುಂದುವರಿಸಿದಳು. ಗಂಡನಲ್ಲಿ ಜೀವ ಸಂಚಾರವಾಯಿತೆ ಎಂದು ದಿನಕ್ಕೆ ಹಲವಾರು ಬಾರಿ ಪರೀಕ್ಷಿಸಿದಳು. ಅವನಿಗೆ ಎಚ್ಚರ ಬಂದು ಏನಾದರೂ ಕೇಳಿಯಾನೆಂದು ಗಂಡನ ಹಾಸಿಗೆಯಲ್ಲೇ ಮಲಗಿದಳು. ದಿನಕ್ಕೆರಡು ಬಾರಿಯಂತೆ ಅವನಿಗೆ ಸ್ನಾನ ಮಾಡಿಸಿದಳು. ಆ ಶರೀರದಿಂದ ಯಾವ ಪ್ರತಿಕ್ರಿಯೆ ವ್ಯಕ್ತವಾಗದಿದ್ದರೂ ಆಕೆ ಮತ್ತು ಮಕ್ಕಳು ಅವನಿಗೆ ಏನಾದರೂ ಹೇಳುವುದಿತ್ತು. ಮಕ್ಕಳ ಯಾವ ಆಟಕ್ಕೂ ಭಂಗ ಬರಲಿಲ್ಲ. ಅಪ್ಪನ ಮೇಲೆ ಹೊದಿಸಲಾದ ಬಟ್ಟೆಯ ಕೆಳಗೆ ಅವಿತುಕೊಂಡು ಅವು ಕಣ್ಣಾಮುಚ್ಚಾಲೆ ಆಡಿದ್ದು ಎಷ್ಟು

## ಮೊನ್ನೆ ಮೊನ್ನೆ......

ಇಂಥ ಇನ್ನೊಂದು ಘಟನೆ ನಡೆದ ವರದಿ ಇತ್ತೀಚೆ ಬಂದಿದೆ.

ಅಸಿಸ್ಟಂಟ್ ಸಬ್ ಇನ್‌ಸ್ಪೆಕ್ಟರ್ ಸುರೇಶಕುಮಾರ ೧೯೯೩ರ ಮೇ ತಿಂಗಳಲ್ಲಿ ಮೃತಪಟ್ಟರು. ಇದೇ ದೇಹದಲ್ಲಿ ಸುರೇಶಕುಮಾರ ಬದುಕಿ ಬರುವರೆಂದು ಮಂತ್ರವಾದಿಯೊಬ್ಬ ಹೇಳಿದ್ದರಿಂದ ಅವರ ಪತ್ನಿ ಕಮಲೇಶ ಅಂತ್ಯಸಂಸ್ಕಾರ ಮಾಡದೆ ಶವವನ್ನು ಕಾಯ್ದಿರಿಸಿದಳು.

ಅಸ್ಥಿಪಂಜರವಾಗಿದ್ದ ಶವವನ್ನು ಪೊಲೀಸರು ಮೊನ್ನೆ ಜನವರಿ ೧೪ರ ರಾತ್ರಿ ವಶಪಡಿಸಿಕೊಂಡರು. ಶವವನ್ನು ಒಪ್ಪಿಸುವಂತೆ ಪತ್ನಿಯ ಮನವೊಲಿಸಲು ಪೊಲೀಸರು ಸಾಕಷ್ಟು ಶ್ರಮಿಸಬೇಕಾಯಿತು.

ಕಮಲೇಶ ಪ್ರತಿದಿನ ಬೆಳಗ್ಗೆ ಪತಿಯ ಶವವನ್ನು ಪೂಜಿಸುತ್ತಿದ್ದಳು. ಗಂಡನ ದಿನಕರ್ಮವನ್ನು ಆಕೆ ಮಾಡಿದ್ದಳಾದರೂ ಶವದ ಅಂತ್ಯ ಸಂಸ್ಕಾರ ಮಾಡಿರಲಿಲ್ಲ.

ಹರಿನಗರ ಪ್ರದೇಶದ ಗುರುನಾನಕಪುರದ ಒಂದು ಕೋಣೆಯ ಚಿಕ್ಕಮನೆಯಲ್ಲಿ ವಾಸಿಸುತ್ತಿರುವ ಈ ಕುಟುಂಬ ಕೊಳೆತ ಶವವನ್ನು ಹಾಸಿಗೆ ಮೇಲಿರಿಸಿಕೊಂಡು ಸುಮಾರು ಎರಡು ವರ್ಷಕಾಲ ಹೇಗೆ ಕಾಲ ಕಳೆಯಿತೆಂಬುದು ಮಾತ್ರ ನಿಗೂಢವೆ.

ದಿವಂಗತ ಪೊಲೀಸನ ಗೈರು ಹಾಜರಿ ಬಗ್ಗೆ ವಿಚಾರಿಸಲು ಆತನ ಸಹೋದ್ಯೋಗಿಗಳು ಈ ಮನೆಗೆ ಕನಿಷ್ಠ ಮೂರು ಬಾರಿ ಭೇಟ್ಟಿ ಕೊಟ್ಟಿದ್ದರು. ಆದರೆ ಶವ ಮನೆಯಲ್ಲಿರುವದನ್ನು ಅವರು ಗಮನಿಸದಿದ್ದುದು ಇನ್ನೂ ವಿಚಿತ್ರ.

ಸುರೇಶಕುಮಾರರ ೨೦ ವರ್ಷದ ಮಗಳು ಪೊಲೀಸ್ ನಿಯಂತ್ರಣ ಕಚೇರಿಗೆ ತಿಳಿಸಿದಾಗ ವಿಷಯ ಬಹಿರಂಗವಾಯಿತು. ಸುರೇಶಕುಮಾರ ಕೊನೆಯುಸಿರೆಳೆದ ಮಂಚದ ಮೇಲೆಯೇ ಅವರ ಶವ ಕಳೆದ ೧೮ ತಿಂಗಳಿಂದ ಇತ್ತಂತೆ!

ಸಲವೋ?

ಮಕ್ಕಳೊಂದಿಗೆ ತಾನಾಯಿತು, ತನ್ನ ಮನೆಯಾಯಿತು ಎಂಬಂತೆ ಇದ್ದವಳು ಕಮಲೇಶ್. ಅವಳ ಚಿಕ್ಕಮಕ್ಕಳಿಗೆ ಶಾಲೆಯಲ್ಲಿ ಗೆಳೆಯ-ಗೆಳತಿಯರಿರಲಿಲ್ಲ. ಒಬ್ಬ ಮಗಳು ಕಾಲೇಜಿಗೆ ಹೋಗುತ್ತಿದ್ದಳಾದರೂ ಅವಳು ಯಾರೊಂದಿಗೂ ಬೆರೆಯಲಿಚ್ಛಿಸದ ಅಂತರ್ಮುಖಿ. ಆ ಕುಟುಂಬ ಆಳು-ಕಾಳುಗಳನ್ನಿಟ್ಟುಕೊಳ್ಳುವಷ್ಟು ಸ್ಥಿತಿವಂತವಾಗಿರಲಿಲ್ಲ. ಒಟ್ಟಿನಲ್ಲಿ ಆ ಪರಿವಾರ ಸಾಮಾಜಿಕ ಸಂಬಂಧಗಳೆಲ್ಲವನ್ನೂ ಕಳಚಿಕೊಂಡಂಥ ದ್ವೀಪವಾಗಿತ್ತು. ಹೀಗಾಗಿ ತಮ್ಮ ಪಕ್ಕದ ಮನೆಯಲ್ಲಿಯೇ ಘಟಿಸಿದ್ದ ಸಂಗತಿಯೊಂದು ನೆರೆಹೊರೆಯವರ ಗಮನಕ್ಕೆ ಬರಲು ಸಾಧ್ಯವಾಗಲಿಲ್ಲ. ದತ್ತನ ಶರೀರದ ಮೇಲೆ ಸುಗಂಧ ದ್ರವ್ಯಗಳನ್ನು ಹರಡಿದ್ದರಿಂದ ಯಾರ ನಾಸಿಕವೂ ದುರ್ನಾತವನ್ನು ಗಣಿಸಲಿಲ್ಲ.

ಚಂಡೀಗಢದ ಸ್ನಾತಕೋತ್ತರ ಔಷಧಿ ಸಂಸ್ಥೆಯ ತಜ್ಞರು ಡಾ. ಇಂದ್ರಜಿತ್ ದೇವನ್ ನೇತೃತ್ವದಲ್ಲಿ ಶವಪರೀಕ್ಷೆ ನಡೆಸಿದರು. ಬೆಚ್ಚನೆಯ ಹವೆ, ಗಾಳಿಯಾಡುವ ಕೋಣೆ ಇದ್ದುದರಿಂದ ಮತ್ತು ಪರಿಮಳ ಲೇಪಿಸಿದ್ದರಿಂದ ಶವದಿಂದ ದುರ್ವಾಸನೆ ಬರಲಿಲ್ಲ. ಇದರಲ್ಲಿ ಪವಾಡ ಅನ್ನುವಂಥದ್ದೇನೂ ಇಲ್ಲವೆಂದು ತಜ್ಞರು ಹೇಳಿದರು.

ತನಿಖೆ ಮುಂದುವರಿದಂತೆ ಬಲದೇವ ಸಿಂಗ್, ಶ್ರೀಮತಿ ಕಮಲೇಶ್ ಮತ್ತು ಶ್ರೀಮತಿ ದಲಜೀತ್ ಕೌರ್ ಅದು ಹೇಗೆ ಅಮೀರಚಂದ್ ಕೌಶಲ್‌ನಿಂದ ಮೋಸಕ್ಕೊಳಗಾಗಿದ್ದರೆಂಬ ವಿಷಯ ಬಯಲಾಯಿತು. ಮೊದಲು ಶಾಲಾ ಶಿಕ್ಷಕನಾಗಿದ್ದ ಕೌಶಲ್ ಮತ್ತು ಬಲದೇವ್ ನಡುವೆ ಸಂಪರ್ಕವೇರ್ಪಟ್ಟು ಸುಮಾರು ಎಂಟು ವರ್ಷಗಳಾಗಿದ್ದವು. ಗುರೂಜಿಯ 'ಆಧ್ಯಾತ್ಮಿಕ ಬಲ' ಬಲದೇವ್‌ನ ಮೇಲೆ ಪರಿಣಾಮಬೀರಿತ್ತು. ಪುಪ್ಪುಸ ರೋಗದಿಂದ ಬಳಲುತ್ತಿದ್ದ ತನಗೆ ಕೌಶಲ್ ನವಜೀವನ ನೀಡಿದ್ದಾನೆ ಮತ್ತು ಪದೇ ಪದೇ ಗರ್ಭಸ್ರಾವವಾಗುತ್ತಿದ್ದ ತನ್ನಾಕೆಗೆ ಗುರೂಜಿಯ ಮಂತ್ರಶಕ್ತಿಯಿಂದ ಹೊಟ್ಟೆ ನಿಂತಿದೆ ಎಂದು ಬಲದೇವ್ ವಾದಿಸಿದ್ದ.



**ಕೊಲೆ ಆಪಾದನೆ ಸಿದ್ಧವಾದ ಮೇಲೆ ಪೊಲೀಸರಿಂದ ಬಂಧಿಸಲ್ಪಟ್ಟ ಕೌಶಲ್ ಮತ್ತು ಬಲದೇವ್ ಸಿಂಗ್**

ಆದರೆ ಒಂಬತ್ತು ತಿಂಗಳು ಕಳೆದರೂ ದಲಜೀತ್ ಕೌರ್‌ಗೆ ಹೆರಿಗೆ ಬೇನೆ ಕಾಣಿಸಿಕೊಳ್ಳಲಿಲ್ಲ. ಗುರೂಜಿಯನ್ನು ಕಂಡರು. ಕಣ್ಣು ಮುಚ್ಚಿ ಏನನ್ನೋ ಗುಣುಗುಣಿಸಿದ ಗುರೂಜಿ, "ದತ್ ಗುಣವಾದ ಬಳಿಕವೇ ನೀವು ತಂದೆ-ತಾಯಿಯಾಗುವುದು" ಎಂದು 'ಆಶೀರ್ವಚನ' ನೀಡಿದ. ಅಂದರೆ ಅವರಿಗೆ ಮಗುವಾಗಬೇಕೆಂದರೆ ದತ್ ಬದುಕಬೇಕಾಗಿತ್ತು. ಆದ್ದರಿಂದ ದತ್ತನ ಹೆಣವನ್ನು ತೆಗೆಯಲು ಶ್ರೀಮತಿ ಕಮಲೇಶ್‌ಗೆ ಆ ದಂಪತಿ ಅವಕಾಶವನ್ನೇ ಕೊಡಲಿಲ್ಲ. ನಂಬಿಕೆ ಹುಟ್ಟಿಸಿ ದತ್ತನ ಶವವನ್ನು ಕಮಲೇಶ್ ಶುಶ್ರೂಷೆಗೈಯುವಂತೆ ಮಾಡುವಲ್ಲಿ ಅವರು ಸಫಲರಾದರು.

ಚಂಡೀಗಢದ ಸುತ್ತಮುತ್ತಲಿನ ಪ್ರದೇಶಗಳಲ್ಲಿ ದೊಡ್ಡ ಸಂಖ್ಯೆಯ ಅನುಯಾಯಿಗಳನ್ನು ಹೊಂದಿದ್ದ ಮಾಜಿ ಶಿಕ್ಷಕ ಈ ಕೌಶಲ್. ಭೋಪಾಲ್ ಅನಿಲ ದುರಂತದ ಸಾವಿರಾರು ನತದೃಷ್ಟರನ್ನು ಗುಣಪಡಿಸಿ ಸಂಕಷ್ಟದಿಂದ ಪಾರು ಮಾಡಿದೆನೆಂದು ಹೇಳಿಕೊಂಡಿದ್ದ 'ಪವಾಡ ಪುರುಷ.' ಕೊನೆಗೂ ಕೌಶಲ್ ಸೆರೆಮನೆಯ ಸರಳುಗಳ ಹಿಂದೆ ತನ್ನ ಮಿತಿಗಳನ್ನು ಒಪ್ಪಿಕೊಂಡ.

"ದತ್ ಸತ್ತಿದ್ದಾನೆಂಬುದು ಮತ್ತು ಅವನು ಮತ್ತೆ ಎದ್ದು ಬರಲಾರನೆಂಬುದು ನನಗೆ ಗೊತ್ತಿತ್ತು. ಆದರೆ ಇದನ್ನು ಶ್ರೀಮತಿ ದತ್‌ಗೆ ಹೇಳಲಿಲ್ಲ. ಏಕೆಂದರೆ ನಾನು ಪವಾಡಗಳನ್ನು ಮಾಡುತ್ತೇನೆಂದು ಆಕೆ ನಂಬಿದ್ದಳು. ಆ ನಂಬಿಕೆಯನ್ನು ನಾನು ಉಳಿಸಿಕೊಳ್ಳಬೇಕಾಗಿತ್ತು."

'ಆಧ್ಯಾತ್ಮಿಕ ಸುಪ್ತಾವಸ್ಥೆ'ಯಲ್ಲಿದ್ದ ಕಳೇಬರದ ಹಿನ್ನೆಲೆಯನ್ನು ಭೇದಿಸಿದ ಪೊಲೀಸರಿಗೆ ದತ್ ಸಾವಿಗೆ ಕಾರಣವೇನೆಂಬುದನ್ನು ಪತ್ತೆ ಮಾಡಲಾಗಲಿಲ್ಲ. ಕುರುವಿನಲ್ಲಿದ್ದ ಕೀವು ದೇಹವನ್ನೆಲ್ಲ ವ್ಯಾಪಿಸಿ ಸಾವು ಸಂಭವಿಸಿರಬೇಕೆಂದು ವೈದ್ಯರು ಅಭಿಪ್ರಾಯಪಟ್ಟರು. ಇದರಲ್ಲಿ ನಿರ್ಲಕ್ಷ್ಯದ ಪಾತ್ರವೂ ಇದ್ದಿತೆಂಬುದನ್ನು ಅಲ್ಲಗಳೆಯಲಾಗದು.

ಚಂಡೀಗಢದ ಸೆಶನ್ಸ್ ನ್ಯಾಯಾಲಯದಲ್ಲಿ ವಿಚಾರಣೆ ನಡೆದಾಗ ಶ್ರೀಮತಿ ಕಮಲೇಶ್ ದತ್ತ ನ್ಯಾಯಾಧೀಶ ಎಚ್.ಎಲ್. ರಣದೇವ್ ಅವರಿಗೆ ತನ್ನ ಹೇಳಿಕೆಯನ್ನು ನೀಡಿದಳು. ಅದನ್ನು ನ್ಯಾಯಾಲಯದಲ್ಲಿ ಗಟ್ಟಿಯಾಗಿ ಓದಲಾಯಿತು. ತನ್ನ ಗಂಡ ೧೯ ಜೂನ್, ೧೯೮೫ರಂದು ಸತ್ತದ್ದು ತನ್ನರಿವಿಗೆ ಬಂದಿತ್ತೆಂಬುದನ್ನು ಮತ್ತು ಕೌಶಲ್ ತನಗೆ ಹಣ ಮತ್ತು ಆಭರಣಗಳ ಪ್ರಲೋಭನೆಯನ್ನೊಡ್ಡಿದ್ದನೆಂಬುದನ್ನು ಕಮಲೇಶ್ ಒಪ್ಪಿಕೊಂಡಳು. "ನನ್ನ ಗಂಡನ ಕತ್ತಿನ ಮೇಲೆ ಎದ್ದಿದ್ದ ಬೊಕ್ಕೆಯನ್ನು ಗುಣಪಡಿಸಿಕೊಳ್ಳಲೋಸುಗ ಚಂಡೀಗಢದಲ್ಲಿದ್ದ ಬಲದೇವ ಸಿಂಗ್‌ನ ಮನೆಯಲ್ಲಿ ಇಳಿದುಕೊಂಡೆವು. ನಮಗೆ ಈ ಮೊದಲೆ ಆತನ ಪರಿಚಯವಿತ್ತು. ಬಲದೇವ ನನ್ನ ಗಂಡನ ಚಿಕಿತ್ಸೆ ಕುರಿತಂತೆ ಗುರು ಕೌಶಲ್‌ನನ್ನು ಭೇಟಿಯಾದ. ಕೌಶಲ್ ಕೊಟ್ಟ ಪುಡಿಯನ್ನು ಸ್ವೀಕರಿಸಿದ ನನ್ನ ಗಂಡನಿಗೆ ವಾಂತಿ ಶುರುವಾಯಿತು. ಅದು ನಿಲ್ಲಲೇ ಇಲ್ಲ. ೧೯೮೫ರ ಜೂನ್ ೧೯ರಂದು ಆತ ಕೊನೆಯುಸಿರೆಳೆದ. ಶವವನ್ನು ಪೂಜಿಸಿದರೆ ನಿನ್ನ ಹೆಂಡತಿ ಗರ್ಭಧಾರಣೆ ಮಾಡುತ್ತಾಳೆಂದು ಬಲದೇವನಿಗೆ ಗುರೂಜಿ ಹೇಳಿದ್ದನಂತೆ. ಹೀಗಾಗಿ ಆ ಮನೆಯಲ್ಲಿಯೇ ನನ್ನ ಗಂಡನ ಶವವನ್ನು ರಕ್ಷಿಸಿಟ್ಟು ಪೂಜಾವಿಧಿಗಳನ್ನು ನೆರವೇರಿಸಲಾಯಿತು. ನನ್ನ ಆಭರಣಗಳ ಮೇಲೂ ಗುರೂಜಿಯ ಕಣ್ಣಿತ್ತು. 'ನಿನ್ನ ಗಂಡನಲ್ಲಿ ಮತ್ತೆ ಜೀವ ಸಂಚಾರವಾಗಬೇಕಾದರೆ ಈ ಆಭರಣಗಳನ್ನು ಬಡಬಗ್ಗರಿಗೆ ದಾನ ಮಾಡಬೇಕು ಎಂದು ನನ್ನನ್ನು ನಂಬಿಸಿದ್ದ.'...."

●

---

ಯಾವುದೇ ಕಾರ್ಯದಲ್ಲಿ ಯಶಸ್ವಿಯಾಗಬೇಕೆಂದರೂ ಏಕಾಗ್ರಚಿತ್ತ ಅವಶ್ಯ. ಸುತ್ತೆಲ್ಲ ಲಕ್ಷ್ಯ ಹರಿಸುತ್ತ ಕೆಲಸ ಮಾಡಲು ತೊಡಗಿದರೆ ಅತ್ತ ಕೆಲಸವೂ ಆಗುವುದಿಲ್ಲ, ಇತ್ತ ಸುತ್ತಲಿನ ವಿದ್ಯಮಾನದ ಅರಿವೂ ಉಂಟಾಗುವುದಿಲ್ಲ.

● ಮಾರ್ಲೋ

# ಚಾರ್ವಾಕ ಸಿದ್ಧಾಂತ

**ಸಾಂಪ್ರದಾಯಿಕ ಜ್ಞಾನವನ್ನು ಪ್ರಾಚೀನ ಕಾಲದಲ್ಲೇ ಸಮಗ್ರ ವಿಮರ್ಶೆಗೆ ಗುರಿಪಡಿಸಿದ ಸ್ವತಂತ್ರ-ವೈಚಾರಿಕ ಮನಸ್ಸುಗಳು ರೂಪಿಸಿದ ಸಿದ್ಧಾಂತವಿದು.**

● ಬಿ. ಎಸ್. ಚಂದ್ರಶೇಖರ

ಜಗತ್ತಿನಲ್ಲಿ ಕಂಡುಬರುವ ಎಲ್ಲವೂ ಭೌತ ವಸ್ತುಗಳು ಮತ್ತು ಅವುಗಳ ರೂಪಾಂತರ ಅಥವಾ ಸ್ಥಳಾಂತರ; ಅದನ್ನುಳಿದು ಬೇರೆ ಏನೂ ಇಲ್ಲ-ಎನ್ನುವ ನಿಲುವುಳ್ಳ ಭೌತವಾದ ಆಧುನಿಕ ಯುಗದಲ್ಲಿ ಸಾಕಷ್ಟು ಜನಪ್ರಿಯವಾಗಿದೆ. ವಿಜ್ಞಾನದ ಈವರೆಗಿನ ಶೋಧಗಳು ಈ ನಿಲುವನ್ನೇ ಹೆಚ್ಚು ಹೆಚ್ಚು ಸಮರ್ಥಿಸುವಂತೆ ತೋರುತ್ತವೆ. ಭೌತವಲ್ಲದ, ಇಂದ್ರಿಯಗೋಚರವಲ್ಲದ ಸಂಗತಿಗಳು ಕೇವಲ ಕಲ್ಪನೆಗಳು ಅಥವಾ ಭ್ರಮೆ; ಅಸ್ತಿತ್ವವಿರುವುದು ಭೌತವಸ್ತುಗಳಿಗೆ ಮಾತ್ರ ಎಂಬ ಸಿದ್ಧಾಂತ ಬಹುತೇಕ ವಿಚಾರವಾದಿಗಳಿಗೆ ಒಪ್ಪಿಗೆಯಾಗುತ್ತದೆ. ಸ್ವರ್ಗ, ನರಕ ಮುಂತಾದ ಕಲ್ಪನೆಗಳೆಲ್ಲ ಬಲು ಹಿಂದೆಯೇ ನಿರಾಕರಿಸಲ್ಪಟ್ಟವು. ದೇವರು, ಆತ್ಮ ಇಂಥವು ಕೇವಲ ಕಾಲ್ಪನಿಕ ಎನ್ನುವ ನಂಬಿಕೆ ಈ ಯುಗದಲ್ಲಿ ಬಲವಾಗಿದೆ. ಆಸ್ತಿಕವಾದಗಳು ಪ್ರಭಾವಶಾಲಿಯಾಗಿದ್ದ ಭಾರತದಂಥ ದೇಶಗಳಲ್ಲೂ ಪಾಶ್ಚಾತ್ಯ ಚಿಂತನೆಯ ನಿಚ್ಚಳ ಪ್ರಭಾವ ಕಾಣಿಸಿದೆ. ಆದರೆ ಬಲು ಹಿಂದೆಯೇ ಭಾರತದಲ್ಲಿ ಇಂಥ ವಿಚಾರಗಳು ಜನ ಪ್ರಿಯವಾಗಿದ್ದವು, ಒಂದು ಸಿದ್ಧಾಂತವಾಗಿ ರೂಪುಗೊಂಡಿತ್ತು; ಅದೇ ಚಾರ್ವಾಕ ಸಿದ್ಧಾಂತ.

ಚಾರ್ವಾಕ್ ಎಂದರೆ ಸುಂದರವಾದ (ಚಾರು) ಮಾತು (ವಾಕ್) ಉಳ್ಳವನು ಎಂದರ್ಥ. ಜನ ಪ್ರಿಯ ವಾದ ಈ ಮತದ ಆಚಾರ್ಯನಿಗೆ ಚಾರ್ವಾಕ್ ಎಂದು ಹೆಸರು ಬರಲು ಕಾರಣವಿದೆ. ಭೋಗಾಸಕ್ತಿಗೆ ಈ ಸಿದ್ಧಾಂತ ಒತ್ತು ನೀಡುವುದರಿಂದ 'ಚರ್ವಣ ಮಾಡುವವರು ಚಾರ್ವಾಕರು' ಎಂದೂ ಅರ್ಥೈಸಲಾಗಿದೆ. (ಚರ್ವಣ-ಅಗಿಯುವುದು) ಚಾರ್ವಾಕ ಮತಕ್ಕೆ ಲೋಕಾಯತ ಮತ ಎಂಬ ಇನ್ನೊಂದು ಹೆಸರೂ ಇದೆ. ಲೋಕಾಯತ ಎಂದರೆ ಲೋಕದಲ್ಲಿ ವ್ಯಾಪಿಸಿರುವುದು ಎಂದು. ಈ ಮಾತುಗಳಿಂದ ಪ್ರಾಚೀನ ಭಾರತದಲ್ಲಿ ಚಾರ್ವಾಕಮತದ ಪ್ರಾಬಲ್ಯವನ್ನು ಊಹಿಸಿಕೊಳ್ಳಬಹುದು.

ಬೃಹ್ಮಣಸ್ಪತಿ ಅಥವಾ ಬೃಹಸ್ಪತಿ ಲೌಕ್ಯನು ಲೋಕಾಯತವಾದದ ಆದ್ಯ ಪ್ರವರ್ತಕನೆನ್ನಲಾಗಿದೆ. "ಅಸತಃ ಸದಜಾಯತ" (ಅಸತ್ತಿನಿಂದ ಸತ್ಯ ಹುಟ್ಟಿತು) ಎಂಬ ಋಗ್ವೇದ ಸೂಕ್ತವನ್ನು ಆಧರಿಸಿ ಜಡ ಪ್ರಕೃತಿಯೇ ಪರಮಸತ್ಯವೆಂಬ ನಿಲುವು ತಳೆದು ಪ್ರಕೃತಿಯಿಂದಾಚೆಗೆ ತತ್ತ್ವಜಿಜ್ಞಾಸೆಯನ್ನು ಮುಂದುವರೆಸಲು ಚಾರ್ವಾಕರು ನಿರಾಕರಿಸಿದರು. ಜಡಪ್ರಕೃತಿಗೆ ಅತೀತವಾದದ್ದು ಯಾವುದೂ ಇಲ್ಲ. ಒಂದು ವೇಳೆ ಇದ್ದರೂ ಅದರ ಅರಿವು ಸರ್ವಥಾ

ಅಶಕ್ಯ ಎಂದು ಬೃಹಸ್ಪತಿ ಲೌಕ್ಯನು ಬಲವಾಗಿ ವಾದಿಸಿದ.

ಲೋಕಾಯತ ಮತದ ಪ್ರವರ್ತಕನಾದ ಬೃಹಸ್ಪತಿಯು ಅಮಿತೋತ್ಸಾಹದಿಂದ ಧರ್ಮದ ಶೃಂಖಲೆ ಗಳನ್ನು ಕಡಿದೊಗೆದು ಸ್ವತಂತ್ರನಾಗಿಯೇ ಸನ್ಮಾರ್ಗಿಯೂ ಉದಾತ್ತನೂ ಆಗಲೆಳೆಸಿದನು ಎಂದು ಖ್ಯಾತ ಸಂಸ್ಕೃತ ವಿದ್ವಾಂಸರಾದ ದಕ್ಷಿಣ ರಂಜನ ಶಾಸ್ತ್ರಿಯವರು ಅಭಿಪ್ರಾಯಪಟ್ಟಿರುವುದನ್ನು ಗಮನಿಸಿದರೆ ಈ ಸಿದ್ಧಾಂತದ ಬಗ್ಗೆ ಗೌರವ ಮೂಡದಿರುವುದಿಲ್ಲ. ನಾಸ್ತಿಕ ಅಥವಾ ನಿರೀಶ್ವರ ದೃಷ್ಟಿಯ ಈ ಸಿದ್ಧಾಂತವು ಭಾರತೀಯ ಚಿಂತನೆಯ ವೈವಿಧ್ಯಕ್ಕೆ ಅದ್ಭುತ ನಿದರ್ಶನ. ಚಾರ್ವಾಕವಾದವು ನಾಸ್ತಿಕನೆನಿಸಿದ ಬುದ್ಧನಿಗಿಂತಲೂ ಹಳೆಯದಾದುದೆಂದು ತಿಳಿಯಲಾಗಿದೆ. ಬುದ್ಧನ ಉಪದೇಶಗಳಲ್ಲಿ ಶರೀರ ನಾಶವೇ ಆತ್ಮ ನಾಶವೆಂಬ ಚಾರ್ವಾಕರ ತತ್ವವನ್ನು ಉದಾಹರಿಸಿರುವುದರಿಂದ ಈ ತೀರ್ಮಾನಕ್ಕೆ ಬರಲಾಗಿದೆ.

ಚಾರ್ವಾಕ ಮತದ ಮೂಲ ಪ್ರಮಾಣಗ್ರಂಥ ಯಾವುದೂ ದೊರೆಯದಿದ್ದರೂ ಅದರ ವಿರೋಧ, ಖಂಡನೆಗಳು ಬಿಡಿ ಬಿಡಿಯಾಗಿ ದೊರೆತು ಅದರಿಂದ ಚಾರ್ವಾಕ ಮತವನ್ನು ಅರಿಯಬೇಕಾಗಿದೆ. ಅನ್ಯ ಮತಗಳು ಈ ವಾದವನ್ನು ಖಂಡಿಸಲು ಉದಾಹರಿಸಲಾದ ಈ ಮತದ ತತ್ವಗಳಿಂದ ಇದರ ಸ್ವರೂಪವನ್ನು ನಿರ್ಣಯಿಸಿಕೊಳ್ಳಬೇಕಾಗುವುದು- ಚಾರ್ವಾಕರ ಮೂಲ ಪ್ರಮಾಣ ಗ್ರಂಥ 'ಬೃಹಸ್ಪತಿ ಸೂತ್ರ' ಬಹುಶಃ ಬಲುಹಿಂದೆಯೇ ನಾಶವಾಗಿರಬೇಕು. ಕೇವಲ ಖಂಡನೆಗಾಗಿ ಚಾರ್ವಾಕ ತತ್ವಗಳನ್ನು ತಿಳಿಸಿರುವ ಅನ್ಯಮತ ಗ್ರಂಥಗಳಾದ 'ನ್ಯಾಯ ಮಂಜರೀ', 'ಶ್ಲೋಕಾ ವಾರ್ತಿಕಾ' ಗ್ರಂಥಗಳಿಂದ ಈ ಮತದ ವಿಚಾರಗಳನ್ನು ತಿಳಿಯಲಾಗಿದೆ. ಮಾಧವಾಚಾರ್ಯರು ರಚಿಸಿದ 'ಸರ್ವದರ್ಶನ ಸಂಗ್ರಹ' ದಲ್ಲಿಯೂ ಈ ಮತ ಕುರಿತ ವಿವರವಾದ ಜಿಜ್ಞಾಸೆಯಿದೆ.

ಹುಟ್ಟು- ಸಾವುಗಳಿಗೆ ಬೇರೆಯಾದ ಕಾರಣ ಏನಿಲ್ಲ. ಇವನ್ನು ನಿಯಂತ್ರಿಸುವ ಯಾವ ಬಾಹ್ಯ ಶಕ್ತಿಯೂ ಇಲ್ಲ. ಆಸ್ತಿಕರು, ಪುನರ್ಜನ್ಮ ವಾದಿಗಳು ಭಾವಿಸುವಂಥ ಯಾವುದೂ ಉಳಿಯುವುದಿಲ್ಲ ಎಂಬುದೇ ಈ ಸಿದ್ಧಾಂತದ ಮೂಲತತ್ವ. 'ಈ ಪ್ರಪಂಚವು ಯಾರಿಂದ ಹುಟ್ಟಿತೆಂಬುದನ್ನು ಯಾರು ಬಲ್ಲರು? ಯಾರು ಹೇಳುವವರು?' ಎಂಬ ಪ್ರಶ್ನೆ ಋಗ್ವೇದದಲ್ಲಿದೆ. ಈ ಪ್ರಶ್ನೆ ಸಂಶಯವಾದಿಗಳಿಗೆ ಬಹಳ ಪ್ರಿಯವಾಗಿ ಕಂಡಿದ್ದು ಸಹಜ. ವಿವಿಧ ನಾಸ್ತಿಕ ಮತಗಳು ತಲೆಯೆತ್ತುವ ಮೊದಲೇ ವೇದ, ಉಪ ನಿಷತ್ತುಗಳಲ್ಲಿ ನಾಸ್ತಿಕ ಮತದ ಆಲೋಚನೆಗಳು ಬೀಜರೂಪದಲ್ಲಿ ಇದ್ದವೆಂದು ಪಂಡಿತರ ಅಭಿಪ್ರಾಯ. ಸಿದ್ಧಾಂತಗಳು, ವಿಚಾರಗಳು ದಿಢೀರನೆ ಉದ್ಭವವಾಗುವುದಿಲ್ಲ ಎಂಬುದು ಚಿಂತಕರಿಗೆ ತಿಳಿದ ವಿಷಯವೆ.

## ಎರಡೇ ಪುರುಷಾರ್ಥಗಳು

ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳೆಂಬ ನಾಲ್ಕು ಪುರುಷಾರ್ಥಗಳನ್ನು ನಾವು ಬಲ್ಲೆವು. ಆದರೆ ಚಾರ್ವಾಕ ಮತಾಚಾರ್ಯರ ಪ್ರಕಾರ ಪುರುಷಾರ್ಥಗಳು ಎರಡೇ: ಅರ್ಥ ಮತ್ತು ಕಾಮ. ಅರ್ಥವನ್ನು ದ್ರವ್ಯ ಸಂಗ್ರಹವೆಂದೂ ಕಾಮವನ್ನು ವಿಷಯೋಪಭೋಗವೆಂದೂ ಗ್ರಹಿಸಬೇಕು. ಧರ್ಮ ಮತ್ತು ಮೋಕ್ಷಗಳು ಮುಗ್ಧರನ್ನು ವಂಚಿಸಿ ತಮ್ಮ ಸ್ವಾರ್ಥ ಸಾಧಿಸುವ ಸಲುವಾಗಿ ಒಂದು ವರ್ಗದವರು ಮಾಡಿರುವ ಕಲ್ಪನೆ ಎಂದು ಈ ಮತದವರ ಅಭಿಪ್ರಾಯ. ಇಷ್ಟಾರ್ಥಗಳನ್ನು ಸಿದ್ಧಿಸಿಕೊಳ್ಳುವುದೇ ಜೀವನದ ಗುರಿ. ಈ ಗುರಿಯ ಸಾಧನೆಗಾಗಿ ದ್ರವ್ಯ ಸಂಪಾದನೆ ಮತ್ತು ಸಂಗ್ರಹ ಅಗತ್ಯವಾಗುತ್ತದೆ. ಆದ್ದರಿಂದ ಕಾಮ ಮತ್ತು ಅರ್ಥ-ಈ ಎರಡು ಮಾತ್ರವೇ ಪುರುಷಾರ್ಥಗಳೆಂದು ಈ ಮತದ ನಿಲುವು.

## ಪ್ರತ್ಯಕ್ಷವೇ ಪ್ರಮಾಣ

ಪ್ರತ್ಯಕ್ಷವೇ ಸತ್ಯ, ಉಳಿದದ್ದು ಅಸತ್ಯ. ಹೀಗೆ ಅನುಮಾನ, ಆಗಮ, ಶಬ್ದ, ಆಪ್ತವಾಕ್ಯ ಮುಂತಾದ ಇತರ ಪ್ರಮಾಣಗಳನ್ನು ನಿರಾಕರಿಸಿ ಪ್ರತ್ಯಕ್ಷವೊಂದನ್ನೇ ಪ್ರಮಾಣವಾಗಿ ಸ್ವೀಕರಿಸುವುದು ಈ ಮತದ ವೈಶಿಷ್ಟ್ಯ. ಗುರುವಾಕ್ಯ ಅಥವಾ ವೇದದ ಪ್ರಾಮಾಣ್ಯವನ್ನು ಚಾರ್ವಾಕರು ಒಪ್ಪುವುದಿಲ್ಲ. ವೇದದ ಪ್ರಾಮಾಣ್ಯವನ್ನು ಒಪ್ಪದವರು ನಾಸ್ತಿಕರು. ಹೀಗಾಗಿ ಚಾರ್ವಾಕರೂ ನಾಸ್ತಿಕರೇ.

ವೇದದಲ್ಲಿನ ದ್ವಂದ್ವ ಹೇಳಿಕೆಗಳನ್ನು ಎತ್ತಿ ತೋರಿಸಿ ಅದರ ಪ್ರಾಮಾಣ್ಯವನ್ನು ಚಾರ್ವಾಕರು ಅಲ್ಲ ಗಳೆಯುತ್ತಾರೆ. 'ಏಕೋ ರುದ್ರೋ ನ ದ್ವಿತೀಯೋವತಸ್ಥೆ' (ರುದ್ರನೊಬ್ಬನೇ, ಎರಡನೆಯವನಿಲ್ಲ) ಎಂಬ ವೇದ ವಚನವಿರುವ ಹಾಗೆಯೇ 'ಸಹಸ್ರಾಣಿ ಸಹಸ್ರಶೋ ಯೋ ರುದ್ರಾಃ' (ರುದ್ರರು ಸಹಸ್ರಾರು)ಎಂಬ ನುಡಿಯೂ ವೇದದಲ್ಲೇ ಇದೆ. ಇವುಗಳಲ್ಲಿ ಯಾವುದನ್ನು ಒಪ್ಪಬೇಕು? ಎಂಬ ಚಾರ್ವಾಕರ ಪ್ರಶ್ನೆ ತರ್ಕಬದ್ಧವಾಗಿಯೇ ಇದೆ. ಹೀಗೆ ವಿರೋಧಾಭಾಸಗಳನ್ನುಳ್ಳ ವೇದವನ್ನು ಪ್ರಮಾಣವೆಂದು ಹೇಗೆ ಒಪ್ಪುವುದು? ಎಂದು ಅವರ ಸವಾಲು- ಅಚೇತನಗಳಿಗೆ ಚೈತನ್ಯವನ್ನು ಆರೋಪಿಸುವುದನ್ನೂ ಅನರು ವಿರೋಧಿಸುತ್ತಾರೆ.

'ಶೃಣೋತ ಗ್ರಾವಾಣಃ' (ಶಿಲೆಗಳೇ ಕೇಳಿರಿ)

'ಸ್ವಧಿತೇ ಮೈ ನಂ ಹಿಂಸೀಃ' (ಕ್ಷೌರ ಕರ್ಮವೇ ಇವನಿಗೆ ಹಿಂಸೆ ಕೊಡಬೇಡ)

ವೇದದ ಇಂಥ ವಾಕ್ಯಗಳನ್ನು ಚಾರ್ವಾಕರು ಮನಸಾರೆ ಲೇವಡಿ ಮಾಡುತ್ತಾರೆ.

## ಚತುರ್ಭೂತಗಳು

ಹೀಗೆ ಪ್ರಮಾಣಗಳಲ್ಲಿ ಪ್ರತ್ಯಕ್ಷವೊಂದನ್ನು ಉಳಿದು ಎಲ್ಲವನ್ನೂ ನಿರಾಕರಿಸುವ ಚಾರ್ವಾಕ ದೃಷ್ಟಿಗೆ ಸೃಷ್ಟಿ ಹೇಗೆ ಕಾಣುತ್ತದೆ? ಪಂಚಭೂತಗಳಾದ ಪೃಥ್ವಿ, ನೀರು, ಬೆಂಕಿ, ವಾಯು, ಆಕಾಶ ಇವುಗಳಲ್ಲಿ ಮೊದಲ ನಾಲ್ಕನ್ನು ಮಾತ್ರ ಚಾರ್ವಾಕರು ಗ್ರಹಿಸುತ್ತಾರೆ. ಆಕಾಶವು ಅನುಭವ ಸಿದ್ಧವಲ್ಲವಾದ್ದರಿಂದ ಅದಕ್ಕೆ ಅಸ್ತಿತ್ವವಿಲ್ಲ! ಹೀಗೆ ನಾಲ್ಕು ಭೂತಗಳು ಸೇರಿ ದೇಹವೆಂಬ ತತ್ತ್ವವನ್ನುಂಟುಮಾಡುತ್ತವೆ ಎಂದು ಅವರ ಮತ. ಬೌದ್ಧರ ಸಿದ್ಧಾಂತದಲ್ಲೂ ಆಕಾಶವು ಪಂಚಭೂತಗಳಲ್ಲಿ ಒಂದಾಗಿ ಪರಿಗಣಿಸಲ್ಪಟ್ಟಿಲ್ಲ ಎಂಬುದು ಗಮನಾರ್ಹ. ಹೊರಗೆ ಕಾಣುವ ಎಲ್ಲ ಜಗತ್ತು, ಶರೀರ, ಮನಸ್ಸು, ಗಿಡ-ಮರ, ಪ್ರಾಣಿ-ಪಕ್ಷಿ ಮುಂತಾದವೆಲ್ಲವೂ ಈ ನಾಲ್ಕು ವಸ್ತುಗಳ ವಿವಿಧ ಪ್ರಮಾಣದ ಮಿಶ್ರಣ. 'ಪೃಥಿವ್ಯಪ್ ತೇಜೋ ವಾಯುಂತಿ ತತ್ವಾನಿ; ತತ್ಸಮುದಾಯೇ ಶರೀರೇಂದ್ರಿಯ ವಿಷಯ ಸಂಜ್ಞಾ' ಎಂಬ ಚಾರ್ವಾಕ ಸಿದ್ಧಾಂತ ಸೂತ್ರವು ಈ ವಿಷಯವನ್ನೂ ಸ್ಪಷ್ಟಪಡಿಸುತ್ತದೆ. ಈ ನಾಲ್ಕು ವಸ್ತುಗಳು ಸೇರಿ ಶರೀರವೇನೋ ಆಯಿತು ಸರಿ; ಆದರೆ ಅದಕ್ಕೆ ಜೀವ? ಅದೂ ಈ ನಾಲ್ಕಕ್ಕೆ ನೇರವಾಗಿಸಂಬಂಧಿಸಿದ್ದೇ ಎನ್ನುವ ಚಾರ್ವಾಕರು ಕೆಲವರಿಗೆ ಒಗಟಾಗಿ ತೋರಿದರೆ ಆಶ್ಚರ್ಯವಲ್ಲ. ತರ್ಕದಲ್ಲಿ ಪಾರಂಗತರಾದ ಚಾರ್ವಾಕರು ಇಂಥ ವಿಷಯಗಳಲ್ಲಿ ಸ್ಪಷ್ಟವಾದ ಉದಾಹರಣೆಗಳಿಂದ ಸಂಶಯ ನಿವಾರಣೆ ಮಾಡಿಬಿಡುತ್ತಾರೆ. ಎಲೆ, ಅಡಿಕೆ, ಸುಣ್ಣ, ಕಾಚು, ಏಲಕ್ಕಿ, ಲವಂಗ- ಇವೆಲ್ಲವನ್ನೂ ಸೇರಿಸಿ ತಾಂಬೂಲ ಮಾಡುತ್ತೀರಲ್ಲ? ಅದರಲ್ಲಿ ಕೆಂಪು ಬಣ್ಣವಿದೆಯೇ? ಇಲ್ಲ. ಆದರೆ ಇವೆಲ್ಲವನ್ನೂ ಹಾಕಿ ಜಗಿದಾಗ ಕೆಂಪು ಬಣ್ಣದ ರಸ ಬರುತ್ತದೆ. ಹಾಗೆಯೇ ನಾಲ್ಕು ಭೂತಗಳು ಸೇರಿ ಚೈತನ್ಯವುಂಟಾಗುವುದೇ ಹೊರತು ಶರೀರಕ್ಕೆ ಅತಿರಿಕ್ತವಾದ ಚೈತನ್ಯವೆಂಬುದು ಇಲ್ಲ- ಎಂದು ಉದಾಹರಣೆಗಳ ಮೂಲಕ ಸಮರ್ಥಿಸುತ್ತಾರೆ. ಶರೀರವು ನಾಶವಾದಾಗಲೇ ಚೈತನ್ಯ, ಜ್ಞಾನ ಮುಂತಾದವೂ ನಾಶವಾಗುವುದರಿಂದ ಚೈತನ್ಯ ಅಥವಾ ಜ್ಞಾನಗಳಿಗೆ ಬೇರೆ ಅಸ್ತಿತ್ವವಿಲ್ಲ ಎಂಬುದು ಅವರಿಗೆ ಸ್ಪಷ್ಟವಾಗಿ ಕಾಣುತ್ತದೆ.

## ತಲೆದೂಗಿಸುವ ತರ್ಕ:

ಆತ್ಮಕ್ಕೂ ದೇಹಕ್ಕಿಂತ ಬೇರೆಯಾದ ಅಸ್ತಿತ್ವವಿಲ್ಲ. ನಾನು ಬರೆಯುತ್ತೇನೆ, ನಾನು ಬೆಳ್ಳಗಿದ್ದೇನೆ, ನನಗೆ ಹಸಿವಾಗಿದೆ- ಇತ್ಯಾದಿ ವಾಕ್ಯಗಳಲ್ಲಿ 'ನಾನು' ಎಂದರೆ ಶರೀರವೇ. ಅನ್ನ, ವಾಯು, ನೀರುಗಳಿಂದ ಶರೀರಕ್ಕೆ ಚೈತನ್ಯ ಬರುತ್ತದೆ. ಅವುಗಳ ಸರಬರಾಜನ್ನು ನಿಲ್ಲಿಸಿಬಿಡಿ, ನಿಮ್ಮ 'ಚೈತನ್ಯ' ಎಲ್ಲಿ ಹೋಗುತ್ತದೆ? ಆದ್ದರಿಂದ 'ನಾನು' ಎನ್ನಲಾಗುವ ಆತ್ಮ ಅಥವಾ ಚೈತನ್ಯ ಇಂಥವು ಶರೀರಕ್ಕಿಂತ ಸರ್ವಥಾ ಬೇರೆಯಲ್ಲ.

ಪುಣ್ಯ-ಪಾಪ, ಸ್ವರ್ಗ-ನರಕ, ಪರಲೋಕ-, ಈಶ್ವರ ಹೀಗೆ ಎಲ್ಲವನ್ನೂ ಖಂಡತುಂಡವಾಗಿ ನಿರಾಕರಿಸುವ ಚಾರ್ವಾಕರ ವಸ್ತುನಿಷ್ಠೆ ಮೆಚ್ಚುವಂಥದ್ದು. ಪಾಪ-ಪುಣ್ಯ ಎಂಬುದು ಇಲ್ಲ. ಸುಖ ದುಃಖಗಳಿಗೂ ಪುಣ್ಯ-ಪಾಪ ಕರ್ಮಗಳಿಗೂ ತಳಕು ಹಾಕುವ ಅಗತ್ಯವೇ ಇಲ್ಲ. ಒಬ್ಬನು ಸುಖಿ

ಅಥವಾ ದುಃಖಿಯಾಗಿರುವುದಕ್ಕೂ ಅವನು ಮಾಡುವ ಕರ್ಮಕ್ಕೂ ಯಾವ ಸಂಬಂಧವೂ ಇಲ್ಲ; ಇವಕ್ಕೆಲ್ಲ ಕಾರಣ ಪ್ರಪಂಚದ ಸ್ವಭಾವ ಅಷ್ಟೆ. ಬೆಂಕಿಯು ಬಿಸಿ. ಮಂಜು ತಣ್ಣಗೆ- ಇದಕ್ಕೆಲ್ಲ ಯಾರು ಹೊಣೆ? ಯಾರೂ ಅಲ್ಲ. ಜಗತ್ತು ಇರುವುದು ಹಾಗೆ ಅಷ್ಟೆ- ಎಂಬ ತರ್ಕಕ್ಕೆ ತಲೆದೂಗಲೇ ಬೇಕು. ಇಂದಿನ ವಿಜ್ಞಾನದ ನಿಲುವೂ ಇದೇ ಬಗೆಯದೇ. ಸ್ವಭಾವವಾದ ಅಥವಾ ವಿಶ್ವನಿಯಮವಾದಕ್ಕೆ ಚಾರ್ವಾಕವಾದದ ಈ ನಿಲುವು ತುಂಬ ಹತ್ತಿರವಾಗುತ್ತದೆ.

ಹೀಗೆ ಪ್ರಪಂಚದ ಎಲ್ಲಕಾರ್ಯಗಳೂ ಸ್ವಭಾವ ಸಿದ್ಧಿಯಿಂದ ನಡೆಯುತ್ತಿರುವಾಗ ದೇವರು ಅಥವಾ ಈಶ್ವರನಿಗೆ ಯಾವ ಸ್ಥಾನವೂ ಇಲ್ಲ. ಅವನ ಅವಶ್ಯಕತೆಯೂ ಇಲ್ಲ. ಮುಖ್ಯವಾಗಿ ಅವನಿದ್ದಿದ್ದರೆ ಪ್ರತ್ಯಕ್ಷವಾಗಿ ಕಾಣಬೇಕಾಗಿತ್ತು. ಚಾರ್ವಾಕ ಮತದಂತೆ ಪ್ರತ್ಯಕ್ಷವೊಂದೇ ಪ್ರಮಾಣವಾಗಿರುವುದರಿಂದ ಈಶ್ವರನಿಗೆ ಅಸ್ತಿತ್ವವಿಲ್ಲ. ದೇಹಕ್ಕೆ ಬೇರೆಯಾದ ಆತ್ಮ, ಜೀವ ಮುಂತಾದವು ಇಲ್ಲವಾದ್ದರಿಂದ ದೇಹವು ಅಂತ್ಯವಾದರೆ ಉಳಿಯುವಂಥದು ಏನೂ ಇಲ್ಲ. ಹೀಗಾಗಿ ಪರಲೋಕದ ಕಲ್ಪನೆಯೂ ಕುಸಿದುಬೀಳುತ್ತದೆ. ಪಾಪ-ಪುಣ್ಯ ಎಂಬುವೂ ಇಲ್ಲ. ದೇಹ ಅಂತ್ಯವಾದ ಬಳಿಕ ಏನೂ ಉಳಿಯುವುದಿಲ್ಲ; ಇನ್ನು ಪರಲೋಕಕ್ಕೆ ಅಸ್ತಿತ್ವವಾದರೂ ಎಲ್ಲಿ? ಅದರ ಅಗತ್ಯವಾದರೂ ಏನು? ಆದ್ದರಿಂದ ಈ ಭ್ರಾಂತಿಗಳನ್ನು ದೂರೀಕರಿಸಿ 'ಸದಾ ಸುಖವಾಗಿರು' ಎಂದು ಚಾರ್ವಾಕರು ಬೋಧಿಸುತ್ತಾರೆ.

'ಯಾವಜ್ಜೀವಂ ಸುಖಂ ಜೀವೇತ್
ಋಣಂ ಕೃತ್ವಾ ಘೃತಂ ಪಿಬೇತ್
ಭಸ್ಮೀ ಭೂತಸ್ಯ ದೇಹಸ್ಯ
ಪುನರಾಗಮನಂ ಕುತಃ?'

ಎಂಬುದು ಮನುಜರಿಗೆ ಚಾರ್ವಾಕರ ಸಂದೇಶದ ಸಾರವೆನ್ನಬಹುದು.

ಪಂಪನ ಆದಿಪುರಾಣ ಕಾವ್ಯದಲ್ಲಿ ಚಾರ್ವಾಕರ ಈ ಬೋಧನೆಯ ಒಂದು ಪ್ರಸಂಗ ಬರುತ್ತದೆ. ಚಾರ್ವಾಕನೊಬ್ಬನು ಖೇಚರ ರಾಜನಿಗೆ ಆಸ್ಥಾನದಲ್ಲಿ ಹೇಳುವ ಹಿತವಚನವನ್ನು ಕೇಳಿ:

ತಲೆವರಿದುಟ್ಟುದಿಕ್ಕಿ ಸುರಲೋಕ ಸುಖಂಗಳ








"ಇದು ಸ್ಮಶಾನವಲ್ಲ ಸಾರ್. ನೀವು ಹಾಕಿದ ವಿವಿಧ ಅಡಿಗಲ್ಲುಗಳಿವು...."

ನುಣ್ಚೆವೆಂಬ ಬತ್ತಲೆಗರ ಮಾತ ನಂಬದಿರು. ಬಾಳ್ವಿನಂ ಇಂದ್ರಿಯ ವರ್ಗದಿಚ್ಚೆಯಂ ಸಲಿಸಿ ವಸಂತದೊಳ್ ಕಳಿಕೆಗರ್ಚಿದ ಕೋಗಿಲೆಯಂತೆ

ನಲಿವುದು- ಕಂಡರಾರ್ ಮರುಭವಂಗಳನಿಲ್ಲಿ ವಿಯಚ್ಚರೇಶ್ವರಾ?

(ತಲೆಯನ್ನು ಬೋಳಿಸಿಕೊಂಡು ಪರಮಸುಖ ವನ್ನು ಅನುಭವಿಸುತ್ತೇವೆಂಬ ಬತ್ತಲೆಗರ ಮಾತನ್ನು ನಂಬಬೇಡ. ಬಾಳುವಂತಿದ್ದರೆ ಇಂದ್ರಿಯ ವರ್ಗ ಗಳ ಇಚ್ಛೆಯನ್ನು ತೃಪ್ತಿಪಡಿಸುತ್ತಾ ವಸಂತಮಾಸದ ಕೋಗಿಲೆಯಂತೆ ಸಂತೋಷದಿಂದಿರು. ಮರುಭವ ಗಳನ್ನು (ಪುನರ್ಜನ್ಮಗಳನ್ನು) ಇಲ್ಲಿ ಕಂಡವರಾರು ಖೇಚರ ರಾಜನೇ!)

ಜಿನಾಗಮವನ್ನು ಬೆಳಗುವ ಪಂಪನ ಆದಿಪುರಾಣದಲ್ಲಿ ಬಂದಿರುವ ಈ ಪದ್ಯವು ಪಂಪನ ವಿಶಾಲ ಮನೋಭಾವವನ್ನು ತೋರುವುದರ ಜತೆಗೆ ಅವನ ಕಾಲದಲ್ಲಿ ಚಾರ್ವಾಕರು ಪ್ರಬಲರಾಗಿಯೇ ಇದ್ದರೆಂಬುದನ್ನೂ ಸೂಚಿಸುತ್ತದೆ.

ಪ್ರಪಂಚದಲ್ಲಿ ದುಃಖವಿದೆಯೆಂದು ಸುಖವನ್ನು ನಿರಾಕರಿಸುವುದು ಬುದ್ಧಿವಂತರ ಲಕ್ಷಣವಲ್ಲ. ಮೀನಿನಲ್ಲಿ ತಿನ್ನಲು ಅನರ್ಹವಾದ ವಸ್ತುವಿದ್ದರೆ ಅದನ್ನು ತೆಗೆದುಹಾಕಿ ಮೀನನ್ನು ಉಪಯೋಗಿಸುವ ಹಾಗೆ ದುಃಖವನ್ನು ನಿವಾರಿಸಿ ಸುಖವನ್ನು ಭೋಗಿಸುವುದು ಸರಿಯಾದ ಕ್ರಮ. ಭಿಕ್ಷುಕರ ಕಾಟವೆಂದು ಊಟ ಮಾಡುವುದನ್ನೆ ಬಿಟ್ಟು ಬಿಡಬೇಕೇ? ಎಂದು ಚಾರ್ವಾಕರು ವಾದಿಸುತ್ತಾರೆ. ಯಜ್ಞ, ದಾನ ಮುಂತಾದ ಕರ್ಮಗಳು ನಿಷ್ಪ್ರಯೋಜಕ. ತಮ್ಮ ಉದರಂಭರಣಕ್ಕಾಗಿ ಕೆಲವರು ರೂಪಿಸಿದ ತಂತ್ರಗಳಿವು: ಇಂಥ ಕರ್ಮಗಳು ವಿಹಿತವೆಂದು ಹೇಳುವ ಶ್ರುತಿಯೇ ಸರ್ವಥಾ ಪ್ರಮಾಣವಲ್ಲ ಎಂದು ಮೊದಲೇ ಹೇಳಿಬಿಟ್ಟದ್ದೇವೆ- ಎಂದು ಜನಸಾಮಾನ್ಯರನ್ನು ಎಚ್ಚರಿಸುತ್ತಾರೆ. ಪೌರೋಹಿತ್ಯ, ಸಂನ್ಯಾಸ ಮುಂತಾದವು ಶ್ರಮವಿಲ್ಲದೆ ಜೀವಿಸಲು ಕೆಲವರು ಆರಿಸಿಕೊಳ್ಳುವ ಉಪಾಯಗಳು ಎಂದೇ ಚಾರ್ವಾಕರು ನಂಬುತ್ತಾರೆ.

## ಗುಣ, ದೋಷ ನಿರ್ಣಯ:

ಚಾರ್ವಾಕ ಸಿದ್ಧಾಂತದಲ್ಲಿನ ದೋಷಗಳನ್ನು ಇತರ ಮತದವರು ಎತ್ತಿ ತೋರಿಸಿದ್ದಾರೆ. ಅವುಗಳಲ್ಲಿ ಮುಖ್ಯವಾದುದೆಂದರೆ 'ಪ್ರತ್ಯಕ್ಷವೊಂದೇ ಪ್ರಮಾಣ' ಎನ್ನುವುದು. ಅನುಮಾನ, ಆಗಮ- ಈ ಪ್ರಮಾಣಗಳನ್ನು ಅಲ್ಲಗಳೆದರೆ ಚಾರ್ವಾಕರು ಹೇಳುವ ಪ್ರತ್ಯಕ್ಷವೊಂದನ್ನೇ ಪ್ರಮಾಣವೆಂದು ಒಪ್ಪಲು ಸಾಧ್ಯವಾಗುವುದಿಲ್ಲವೆಂದು ತರ್ಕಬದ್ಧವಾಗಿ ವಾದಿಸಲಾಗಿದೆ. ಪ್ರತ್ಯಕ್ಷವಾಗುವ ವಿಷಯದಲ್ಲಿ ಅನುಮಾನ ಪ್ರಮಾಣವನ್ನು ಒಪ್ಪುವಂಥ ಚಾರ್ವಾಕರೂ ಇದ್ದಾರೆ. ಇವರನ್ನು ಸುಶಿಕ್ಷಿತ ಚಾರ್ವಾಕರೆಂದೂ ಇತರರನ್ನೂ ಧೂರ್ತ ಚಾರ್ವಾಕರೆಂದೂ ಗುರುತಿಸಲಾಗುತ್ತದೆ.

ಇನ್ನೊಂದು ದೋಷವೆಂದರೆ ಮನುಷ್ಯನಿಗೆ ಸುಖದ ಅಪೇಕ್ಷೆ ಇರುವಂತೆ ತನಗೆ ಪ್ರತ್ಯಕ್ಷವಲ್ಲದ ಸಂಗತಿಗಳನ್ನು ಅರಿಯಬೇಕೆಂಬ ಅದಮ್ಯ ಕುತೂಹಲವಿರುವುದೆಂಬ ವಾಸ್ತವ ಸಂಗತಿಯನ್ನು ಚಾರ್ವಾಕರು ಮರೆತಿರುವುದು. ಮನುಷ್ಯನು ತನಗೆ ಪ್ರತ್ಯಕ್ಷವಲ್ಲದ ಸಂಗತಿಯನ್ನು ಸ್ವತಃ ತಿಳಿಯಲು ಸಾಧ್ಯವಿಲ್ಲದಿದ್ದರೆ ಕಲ್ಪಿಸುತ್ತಾನೆ ಅಥವಾ ಬೇರೊಬ್ಬನು ಕಲ್ಪಿಸಿ ತಿಳಿಸಿದ ವಿಷಯವನ್ನು ನಂಬುತ್ತಾನೆ. ಲೌಕಿಕ ಸುಖವೊಂದೇ ಗುರಿ ಎನ್ನುವ ಈ ಮತ

ತುಂಬ ಸಂಕುಚಿತ ದೃಷ್ಟಿಯುಳ್ಳದ್ದು ಎನ್ನಲಾಗಿದೆ.

ಎಲ್ಲರೂ ಚಾರ್ವಾಕರಾದರೆ ಬದುಕು ದುರ್ಭರವಾಗಿ ಬಿಡುತ್ತದೆ. ಲೋಕದಲ್ಲಿ ಸುಖವೆಂಬುದು ಮರೀಚಿಕೆಯೆಂದು ಬಾಳಿನಲ್ಲಿ ಪಕ್ವತೆ ಹೊಂದುವ ಘಟ್ಟದಲ್ಲಾದರೂ ಬಹುತೇಕರು ಒಪ್ಪುತ್ತಾರೆ. ನೈಜ ಸುಖವೆಂಬುದು ಇದ್ದರೂ ಅದು ಇತರರ ಸುಖಕ್ಕೆ ನಿಕಟ ಸಂಬಂಧ ಹೊಂದಿದೆ. ಇನ್ನೊಬ್ಬರಿಗೂ ಸುಖವುಂಟಾಗುವಂತೆ ಅಥವಾ ಇತರರ ಸುಖಕ್ಕೆ ಹಾನಿ ತಟ್ಟದಂತೆ ಸುಖಿಸುವುದೂ ಒಂದು ಕಲೆ. ಈ ಕಲೆಯ ಸಾಧನೆಗೆ ಸಂಯಮ, ಆತ್ಮನಿಗ್ರಹಗಳು ಅಗತ್ಯ. 'ಋಣಂ ಕೃತ್ವಾ ಘೃತಂ ಪಿಬ' ಎಂಬ ಬೋಧನೆಯಲ್ಲಿ ಮಾನವೀಯತೆಯ ಅಂಶ ಕಡಿಮೆ ಎಂದು ಚಾರ್ವಾಕ ಸಿದ್ಧಾಂತದಲ್ಲಿ ಜಿಜ್ಞಾಸುಗಳು ದೋಷವನ್ನು ಕಂಡಿದ್ದಾರೆ.

ಇದೇನೇ ಆದರೂ ಚಾರ್ವಾಕಮತದ ಉತ್ತಮಾಂಶಗಳನ್ನು ಯಾರೂ ಅಲ್ಲಗಳೆಯುವಂತಿಲ್ಲ. ಪ್ರತ್ಯಕ್ಷವೊಂದೇ ಪ್ರಮಾಣ ಎಂದು ಒಪ್ಪದಿದ್ದರೇನಂತೆ? ಅದು ಪ್ರಮಾಣಗಳಲ್ಲಿ ಅತಿ ಮುಖ್ಯವಾದುದೆಂದು ಎಂಥವರೂ ಒಪ್ಪಲೇಬೇಕು. ಇಂದ್ರಿಯ ಗೋಚರವಲ್ಲದ ಸುಸೂಕ್ಷ್ಮ ಸಂಗತಿಗಳು ಭ್ರಾಂತಿಗಳೂ ಆಗಿರಬಹುದು, ವಾಸ್ತವದಿಂದ ಪಲಾಯನಕ್ಕೆ ಅವು ಇಂಬುಗೊಡಬಹುದು. ಕಲ್ಪನೆ, ಕಟ್ಟುಕತೆಗಳಿಂದ ಜನರು ದಾರಿ ತಪ್ಪಬಹುದು. ಧರ್ಮದ ಹೆಸರಿನಲ್ಲಿ, ದೇವರ ಹೆಸರಿನಲ್ಲಿ, ಪಾಪ-ಪುಣ್ಯ-ಸ್ವರ್ಗ-ನರಕಗಳ ಹೆಸರಿನಲ್ಲಿ ಮುಗ್ಧರ ಶೋಷಣೆ ನಡೆಯುತ್ತಿಲ್ಲ ಎನ್ನಲಾದೀತೆ?

ಇನ್ನು ಸ್ವಂತ ಹಿತವನ್ನು ಸಾಧಿಸಿ ಸುಖಾನುಭವ ಪಡೆಯಬೇಕೆನ್ನುವ ಇಚ್ಛೆ ಸಹಜ. ಉನ್ನತ ಜ್ಞಾನಾರ್ಜನೆಗೂ ಇಂಥ ಸುಖದ ಅನುಭವ ಒಂದು ಮಹತ್ವದ ಮೆಟ್ಟಿಲಾಗಬಲ್ಲುದು ಎನ್ನುವುದನ್ನು ಮರೆಯುವಂತಿಲ್ಲ. ಆದ್ದರಿಂದಲೇ ಚಾರ್ವಾಕರ ಬಗ್ಗೆ ಭಿನ್ನಾಭಿಪ್ರಾಯ ಏನೇ ಇರಲಿ, ಚಾರ್ವಾಕರ ಅಭಿಪ್ರಾಯಗಳು ಒಂದು ಮತ ಅಥವಾ ದರ್ಶನವೆಂಬ ಗೌರವಕ್ಕೆ ಪಾತ್ರವಾಗಿವೆ.

ಅನುಸ್ಯೂತವಾದ ಚೈತನ್ಯ ಪ್ರವಾಹವೊಂದು ಅಸ್ತಿತ್ವದಲ್ಲಿದೆ ಎಂಬ ಕಲ್ಪನೆಯನ್ನು ನಿರಾಕರಿಸುವ, ದೇಹವೇ ಕರ್ತೃ- ಬೇರೆ ಯಾವ ಶಕ್ತಿಯೂ ಇಲ್ಲ ಎನ್ನುವ ಈ ಪಂಥದವರು 'ಕರ್ಮಫಲಗಳಿಗೆ ಭೋಕ್ತೃವೂ ದೇಹವೇ ಅಲ್ಲವೆ?' ಎಂಬ ಪ್ರಶ್ನೆಯನ್ನೇ ತಳ್ಳಿ ಹಾಕುತ್ತಾರೆ. ಮೂಲತಃ ಸತ್ಕರ್ಮ, ದುಷ್ಕರ್ಮಗಳ ಫಲವನ್ನೇ ಅವರು ಒಪ್ಪುವುದಿಲ್ಲ. 'ಒಂದು ಕ್ಷಣದಲ್ಲಿ ಕರ್ಮ ಮಾಡುವ ಶರೀರವು ಅದರ ಫಲವನ್ನು ಭೋಗಿಸಲು ಇನ್ನೊಂದು ಕ್ಷಣದಲ್ಲಿ ಅದೇ ರೀತಿ ಉಳಿದಿರುವುದಿಲ್ಲ. ಸುಖದುಃಖಗಳು ಕೇವಲ ಆಕಸ್ಮಿಕ' ಎಂಬ ಅತ್ಯಂತ ಸೂಕ್ಷ್ಮ ವಿಚಾರವನ್ನು ಚಾರ್ವಾಕರು ಮುಂದಿಟ್ಟಿದ್ದಾರೆ. ಇದು ಆಧುನಿಕ ವಿಚಾರವಾದಿಗಳ ನಿಲುವಿಗೆ ಮಾತ್ರವಲ್ಲದೆ ಕೆಲವು ಸಾಂಪ್ರದಾಯಿಕ ಮತಗಳಿಗೂ ಜೆ.ಕೆ. ಸಿದ್ಧಾಂತ, ಬೌದ್ಧ ಮತದ ನಿಲುವಿಗೂ ನಿಕಟವಾಗುತ್ತದೆ. ಮುಕ್ತಿಯ ಪರಿಕಲ್ಪನೆಗೆ ಚಾರ್ವಾಕರ ಈ ನಿಲುವು ವಿರೋಧವಂತೂ ಆಗುವುದಿಲ್ಲ. ಹೇಳುವ ರೀತಿಯಲ್ಲಿ ವ್ಯತ್ಯಾಸಗಳಿದ್ದರೂ ಅಂತಿಮ ವಿಶ್ಲೇಷಣೆಯಲ್ಲಿ ಎಲ್ಲವೂ ಒಂದೇ- ವಿವಿಧತೆಯಲ್ಲಿ ಏಕತೆ- ಎಂಬ ಸೂತ್ರಕ್ಕೆ ಸಾಕ್ಷಿಯನ್ನು ಕಾಣ ಬಯಸುವವರಿಗೆ ಇಲ್ಲಿ ಸಾಕಷ್ಟು ಪುರಾವೆಯೂ ದೊರೆಯಬಹುದು.

ನಾಸ್ತಿಕತೆ ಮತ್ತು ಶ್ರದ್ಧಾಹೀನತೆಗಳು ಇಂದು ಫ್ಯಾಷನ್ ಆಗಿರಬಹುದು. ಆದರೆ ಪ್ರಾಚೀನ ಕಾಲದಲ್ಲೇ ಸಾಂಪ್ರದಾಯಿಕ ಜ್ಞಾನವನ್ನು ಸಮಗ್ರ ವಿಮರ್ಶೆಗೆ ಗುರಿಪಡಿಸಿ ವೈಚಾರಿಕ ಹೋರಾಟ ನಡೆಸಿದ ಕೆಲವು ಸ್ವತಂತ್ರ ಮನಸ್ಸುಗಳು ರೂಪಿಸಿದ ಚಾರ್ವಾಕ ಸಿದ್ಧಾಂತವನ್ನು ಅರಿಯದಿದ್ದರೆ ಭಾರತೀಯ ತತ್ತ್ವದರ್ಶನದ ಅಧ್ಯಯನ ಅಪೂರ್ಣವಾಗುತ್ತದೆ. ●

---

ಬಾಟಲಿಯ ಮುಚ್ಚಳವನ್ನು ತೆರೆಯಲು ತೊಂದರೆಯಾಗುತ್ತದೆಯ? ಕೊಂಚ ದೂರದಿಂದ ಮುಚ್ಚಳವನ್ನು ಕಾಸಿ. ಈಗ ಅದನ್ನು ತೆಗೆಯುವುದು ಸುಲಭ. ಮುಂದಿನ ಸಲ ಹೀಗಾಗದಿರಲು ಬಾಟಲಿಯ ಹೊರಭಾಗಕ್ಕೆ ಸ್ವಲ್ಪ ಗ್ಲಿಸರಿನ್ ಸವರಿ.

# ಸಿಹಿಸೊನ್ನೆ

ಕಥಾನುವಾದ

ಮೂಲ: ಸಿ.ವಿ. ಶ್ರೀರಾಮನ್

ಕನ್ನಡಕ್ಕೆ: ಡಾ. ಅಶೋಕಕುಮಾರ

ಅದೊಂದು ಮಾಳಿಗೆ ಮನೆಯೆಂದು ತೋರಲಿಲ್ಲ. ಯಾವುದೋ ಅತಿಆಲಸಿ ಪ್ರಾಣಿ ಕೈಕಾಲುಗಳನ್ನು ಚಾಚಿ ಮಲಗಿದೆ. ಎಚ್ಚರಗೊಂಡರೆ ಸಟೆದು ನಿಂತು ಗರ್ಜಿಸುತ್ತದೆ. ಅದನ್ನು ನೆನೆದು ಆತ ತುಪ್ಪುವುದಾಗಲಿ ಕುಟ್ಟುವುದಾಗಲಿ ಮಾಡಲಿಲ್ಲ. ಮೊಗಸಾಲೆ ಹುಟ್ಟುರೂಪದಲ್ಲಿದೆ. ಅಂದೆಲ್ಲ ಮೊಗಸಾಲೆಯ ಪರಿಚಯ ಮಾಡಿಸಲು ಈ ಮನೆಯ ಹೆಂಗಸರು ಗೈಡ್‌ಗಳಂತೆ ಆಸಕ್ತಿ ವಹಿಸುತ್ತಿದ್ದರು. ಬರ್ಮಾ ತೇಗ, ಅಪ್ಪಟ ಮಹೋಗನಿ, ಬ್ರಿಟಿಷ್ ಓಕ್, ನಿಲಂಬೂರ್ ಟೀಕ್, ಪೂರ್ವ ದ್ವೀಪದ ಮಾರ್ಬಲ್‌ವುಡ್ ಎಂದೆಲ್ಲ ಹೇಳುತ್ತ ಪ್ರತಿಯೊಂದು ಫರ್ನೀಚರನ್ನೂ ಸಂದರ್ಶಕರಿಗೆ ಪರಿಚಯ ಮಾಡಿಸುತ್ತಿದ್ದರು. ಮರದ ವ್ಯಾಪಾರಿಗಳ ಕುಟುಂಬವಾದುದರಿಂದ ತಲೆತಲಾಂತರದಿಂದ ಅವರಿಗೆ, ಕೊಯ್ದು ನಾಟಾ ಆಗಿಸಿದ ಮರವಾದರೂ ಅದು ಯಾವುದೆಂದು ಗುರುತು ಹಿಡಿಯುವುದು ತಿಳಿದಿತ್ತು. ಅದೊಂದು ಸಿದ್ಧಿ, ಜನ್ಮವಾಸನೆ ಎಂದೆಲ್ಲ ಈ ಕುಟುಂಬದ ನಂಟಿದ್ದ ಹೆಂಗಸರು ನಂಬಿದ್ದರು. ಅಂದೂ ಮರದ ವ್ಯಾಪಾರ ಒಂದು ಸಾಹಸಿಕತೆಯೇ ಆಗಿತ್ತು. ಮರವು ಚಿನ್ನ. ಬರಿದೆ ಇರಿಸಿದರೆ ಸಾಕು. ಹೊನ್ನಿನಂತೆ ಹೊನ್ನಿನೊಂದಿಗೆ ಬೆಲೆಯೇರುವುದು, ತಾಯಿ ಹೇಳುತ್ತಿದ್ದರು. ಮರದ ವ್ಯಾಪಾರದ ವೇದ.

ಇಂದು ಮೊಗಸಾಲೆ ಖಾಲಿಯಾಗಿ ಕುಳಿತಿದೆ. ಫರ್ನೀಚರ್ ಎಲ್ಲಿಗೆ ಸಾಗಿಸಿದರೆಂದು ತಿಳಿಯದು. ಮೊಗಸಾಲೆ ಕೆಳಗೆ, ಆಫೀಸ್‌ಕೋಣೆ. ನೇರ ಮೇಲ್ಭಾಗದಲ್ಲಿ.... ಅಂದಿನ ವಾಸ್ತುಶಾಸ್ತ್ರ ವಿಧಿ ಸಿದ್ದುದು ಪಶ್ಚಿಮದ ಮನೆ. ನಡುಕೋಣೆಯಲ್ಲಿ ಅಟ್ಟ, ಬತ್ತದ ಕೋಣೆ ಮತ್ತು ತೆಂಕುಕೋಣೆ, ಬಡಗು ಕೋಣೆ, ಅಡಿಗೆ ಕೋಣೆ, ಬಚ್ಚಲು. ವ್ಯಾಪಾರ ಬೆಳೆಯಿತು. ಸಂಸ್ಕೃತಿ ಬೆರಕೆಯಾಯಿತು. ಔದ್ಯೋಗಿಕ ಸಂಸ್ಕೃತಿ. ಆಮದು ರಫ್ತುಗಳು. ವಿದೇಶ ಸಂಪರ್ಕ ಧ್ವಜಪೂರಿತು. ಅಳಿವೆಯ ಬಳಿ ದಾಸ್ತಾನುಮಳಿಗೆ ಪಡೆಯಲು ಸಾಧ್ಯವಾಗದಿದ್ದವರು ತಮ್ಮ ಮನೆಗಳಲ್ಲಿ ಆಫೀಸ್ ಕೋಣೆ ಕಟ್ಟಿಸಿದರು. ಪಶ್ಚಿಮದ ಮನೆಗೆ ಸೇರಿದಂತೆ ಪೂರ್ವಪಶ್ಚಿಮವಾಗಿ ಒಂದು ಉದ್ದನೆ ಕೋಣೆ ನಿರ್ಮಿಸಿದರು. ಮೊಗಸಾಲೆ. ಮೊಗಸಾಲೆಯ ಮೇಲೆ ಇನ್ನೊಂದು ಕೋಣೆ ಕಟ್ಟಿಸಿದರು. ಆಫೀಸ್‌ಕೋಣೆ. ನಂತರ ಇನ್ನೊಂದು ಸಮಯ ಪದ್ಧತಿ ಬಂದಿತು. ಆಫೀಸ್ ಅವರ್ಸ್. ಆಫೀಸ್ ಅವರ್ಸ್‌ನಲ್ಲಿ ಮನೆಯ ಹೆಂಗಸರಾಗಲಿ ಮಕ್ಕಳಾಗಲಿ ಮನೆಯೊಡೆಯನನ್ನು ನೋಡಬೇಕೆಂದರೆ ಅಪಾಯಿಂಟ್‌ಮೆಂಟನ್ನು ಮುಂಚಿತವಾಗಿ ಪಡೆದಿರಬೇಕಾಗಿತ್ತು. ಮನೆಯ ಯಜಮಾನರು ಬೆಳಿಗ್ಗೆ ಅಚ್ಚುಕಟ್ಟಾಗಿ ಬ್ರೇಕ್‌ಫಾಸ್ಟ್ ಸೇವಿಸುವರು. ನಂತರ ರುಮಾಲು, ಕೋಟು ಧರಿಸಿ ವಿದೇಶಕ್ಕೆ ಹೋಗುವ ಧಾಟಿಯಲ್ಲಿ ಮೆಟ್ಟಿಲುಗಳನ್ನೇರಿ ಆಫೀಸ್ ಕೋಣೆಗೆ ಹೋಗುವರು. ಷೂಸ್ ಮೆಟ್ಟಿಲುಗಳನ್ನೇರುವ ಶಬ್ದ ಕೇಳಿಸಿದಾಗ ಮಕ್ಕಳು ಸಂತೋಷಪಡುವರು: ಇನ್ನು ಆಫೀಸ್ ಅವರ್ಸ್ ಮುಗಿಯುವವರೆಗೆ ವಿಚಾರಣೆಯಾಗಲಿ ಶಿಕ್ಷೆಯಾಗಲಿ ಇಲ್ಲ.

ಆ ಆಫೀಸ್‌ಕೋಣೆಯ ತುಂಬ ರೈಟರ್‌ಗಳು ಇರುತ್ತಿದ್ದರು ಎಂದು ತಾಯಿ ಹೇಳುತ್ತಿದ್ದುದನ್ನು ಕೇಳಿದ್ದ. ಪೈಲು ರೈಟರ್, ಜಾನ್ಸನ್ ರೈಟರ್,

ವಾಸುರೈಟರ್. ಸಹಸ್ರನಾಮ ಹೇಳುವ ಧಾಟಿಯಲ್ಲಿ ತಾಯಿ ರೈಟರ್‌ಗಳ ಹೆಸರು ಉರು ಹಾಕುತ್ತಿದ್ದರು. ತಾನು ನೋಡಿದ್ದ ಏಕೈಕ ರೈಟರ್ ಮುಕುಂದನ್ ರೈಟರ್. ಸರಿಯಾಗಿ ಏಳೂವರೆಗೆ ಪೂರ್ವದತ್ತ ನೋಡಿದರೆ ಮುಕುಂದನ್ ರೈಟರ್ ಹುಣಿಯ ಮೇಲೆ ಸೈಕಲ್ ತಳ್ಳಿಕೊಂಡು ಬರುವುದನ್ನು ನೋಡಬಹುದು. ಸೈಕಲ್‌ನ್ನು ಭದ್ರವಾಗಿ ಸ್ಟ್ಯಾಂಡ್‌ನ ಮೇಲೇರಿಸಿ ಬೀಗಹಾಕುವನು. ಹಳಿಗಳಾಚೆ ನಾಲ್ಕನೆಯದೋ ಐದನೆಯದೋ ಮುಕುಂದನ್ ರೈಟರ್ ಮನೆ. ಮುಕ್ಕಾಲು



ಹಾದಿಗೂ ಹೆಚ್ಚು ಹೊತ್ತುಕೊಂಡೋ ತಳ್ಳಿಕೊಂಡೋ ಸೈಕಲ್ ಸಾಹಸ. ಆದರೆ ಅಂದೆಲ್ಲ ರೈಟರ್‌ಗಳು ಸೈಕಲ್‌ನಲ್ಲಿಯೇ ಸಂಚರಿಸಬೇಕಿತ್ತು.. ಸೈಕಲ್ಲನ್ನು ಏರಲಿ, ಏರದಿರಲಿ ಸೈಕಲ್ ಜೊತೆಗೆ ತರಬೇಕು. ಮುಕುಂದನ್ ರೈಟರ್ ಮಳೆ ಮತ್ತು ಚಳಿ ಇದ್ದಾಗ ಕಾಟನ್‌ಕೋಟು, ಬೇಸಿಗೆಕಾಲದಲ್ಲಿ ವುಲನ್‌ಕೋಟು ಧರಿಸುತ್ತಿದ್ದನು. ಮಳೆ ಮತ್ತು ಮಂಜು ತಗುಲಿದರೆ ವುಲನ್‌ಕೋಟು ಹಿಂಜಿ ಹೋಗುತ್ತದೆ. ಆದುದರಿಂದ ಬೇಸಿಗೆಕಾಲದಲ್ಲಿ ವುಲನ್‌ಕೋಟು ಧರಿಸುತ್ತಾನೆ. ಸೈಕಲ್ಲನ್ನು ಸ್ಟ್ಯಾಂಡ್‌ನಲ್ಲಿ ನಿಲ್ಲಿಸಿ ಕಾದು ಕುಳಿತಿರುವ ಯಾರಿಗೋ ಉತ್ತರ ಹೇಳಲೋ ಎಂಬಂತೆ ಮುಕುಂದನ್ ರೈಟರ್ ಆಫೀಸ್ ಕೋಣೆಗೆ ಪ್ರವೇಶಿಸುವನು. ಅನಂತರ ದಪ್ಪ ಪುಸ್ತಕಗಳಲ್ಲಿ ಪೆನ್ಸಿಲ್ ಓಡಿಸುತ್ತ ಕುಳಿತುಕೊಳ್ಳುವನು.

ಆ ಕುಟುಂಬದಲ್ಲಿ ಮೊದಲನೆಯ ಜಪ್ತಿ ಬಂದಾಗ ಸೈಕಲ್‌ನಿಂದ ಕಂಪೆನಿ ಬೋರ್ಡ್‌ನ್ನು ಕಿತ್ತು ಕೆಳಗೆಸೆದ. ಮುಕುಂದನ್ ರೈಟರ್ ಸೈಕಲ್ ತೆಗೆದುಕೊಂಡು ಓಡಿ ಮರೆಯಾದ.

ಮತ್ತೆ ಬರಲೇ ಇಲ್ಲ.

ಇಂದು ಆಫೀಸ್ ಕೋಣೆಯ ನಿಚ್ಚಣಿಕೆ ಬಾಗಿಲನ್ನು ಕೆಳಗಿಳಿಸಿ ಬೀಗ ಹಾಕಿದ್ದಾರೆ. ಆಫೀಸ್ ಕೋಣೆಯ ಕೆಳಗಿರುವ ಮೊಗಸಾಲೆಯ ಪಶ್ಚಿಮದ ಕೋಣೆಯಲ್ಲಿ ಕೌಸಲ್ಯ ದೊಡ್ಡಮ್ಮಳ ಪಿಯಾನೋ ಇರಿಸಿದ್ದುದು. ಪಿಯಾನೋ ಬಾರಿಸುತ್ತಲೂ ಹಾಡು ಹಾಡುತ್ತಲೂ ಪಿಯಾನೋ ಪಾಲಿಷ್ ಮಾಡುತ್ತಲೂ ಕೌಸಲ್ಯ ದೊಡ್ಡಮ್ಮ ತುಂಬಿನಿಂತಿದ್ದುದು ಕೂಡ ಆ ಕೋಣೆಯಲ್ಲಿಯೇ. ಮೊದಲೆಲ್ಲ ಪಿಯಾನೋದಲ್ಲಿ ಬೆರಳೊತ್ತಿ ಇಂಗ್ಲೀಷ್ ಹಾಡುಗಳನ್ನು ಹಾಡುತ್ತಿದ್ದರು. ಆಮೇಲಾಮೇಲೆ ಹಿಂದಿ ಹಾಡುಗಳನ್ನು ಸಹ. ಒಂದೇ ಒಂದು ಮಲಯಾಳ ಹಾಡನ್ನಷ್ಟೆ ಕೌಸಲ್ಯ ದೊಡ್ಡಮ್ಮ ಪಿಯಾನೋದಲ್ಲಿ ಬೆರಳೋಡಿಸಿ ಹಾಡಿದ್ದುದು. ಅದೂ ತೀರ ಇಂಗ್ಲೀಷ್ ರಾಗದಲ್ಲಿ.

ದೀಪಗಳು ಮಸುಕಾಗಿ
ಕಾರಿರುಳು ಮುಸುಕಿರಲು
ಮಂದಿರವು ಎದುರಿನಲಿ
ಕಾಣುತಿಹುದು.....

ಇಂಗ್ಲೀಷ್ ಉಚ್ಚಾರಣೆಯಲ್ಲೇ. ಚೆನ್ನಾಗಿ ಗಮನಿಸಿದರಷ್ಟೇ ನುಡಿಗಳು ಮಲಯಾಳಂ ಎಂದು ಗೊತ್ತಾಗುತ್ತಿದ್ದುದು.

ಪ್ರಾಚ್ಯವಸ್ತುಗಳಲ್ಲಿ ಎಂದೂ ದಯೆ ತೋರುತ್ತಿದ್ದ ತಾನು ಏಕೆ ಕಳೆದ ಸಲ ಬಂದಾಗಲೂ ಕೌಸಲ್ಯ ದೊಡ್ಡಮ್ಮನ ಪಿಯಾನೋದ ಬಗ್ಗೆ ಕೇಳಲಿಲ್ಲ? ಆತ ಯೋಚಿಸಿದ.... ನೆನಪು ಬಂದಾಗಿನಿಂದಲೂ ಕಾಣುತ್ತಿದ್ದ ಅವರ ಪಿಯಾನೋ, ಅವರ ವೇಷ, ಅವರ ಮುಖದ ಇಂಗ್ಲೀಷ್ ಭಾವಗಳು,...... ಯೂನಿಫಾರ್ಮ್, ದಪ್ಪನೆಯ, ಕಣಕಾಲು ಮೀರುವಂಥ ಅವರ ಯೂರೋಪಿಯನ್ ಸ್ಕರ್ಟ್, ಲೇಸ್ ಅಳವಡಿಸಲಾದ ಅವರ ಚೆಕ್ ಬ್ಲೌಸ್‌ಗಳು,.... ಅದರ ನಿರಿಗೆಗಳು.... ಕಾಲಲ್ಲಿ ಮರದ ಪಾದರಕ್ಷೆ. ಅದನ್ನವರು 'ಕಟ್ಟೆ' ಎಂದು ಹೇಳುತ್ತಿದ್ದರು. ಹಾಸ್ಟೆಲ್‌ನಲ್ಲಿ ಸಿಲೋನ್ ಹುಡುಗಿಯರೂ ಬರ್ಮಾ ಹುಡುಗಿಯರೂ ಇದ್ದರು. ಅವರನ್ನು ಅನುಕರಿಸಿ ಧರಿಸುತ್ತಿದ್ದ ಮರದ ಪಾದರಕ್ಷೆ- ಕಟ್ಟೆ..... ವಸ್ತ್ರಗಳನ್ನು ಅವರು ಸ್ವಯಂ ಡಿಸೈನ್ ಮಾಡುತ್ತಿದ್ದರು. ಕೆಲಕಾಲದ ನಂತರ 'ಕಟ್ಟೆ'ಯನ್ನೂ ಡಿಸೈನ್ ಮಾಡುತ್ತಿದ್ದರು. ಪೈಂಟ್ ಬಳಿದ ಮರದ ತುಂಡಿಗೆ ರಬ್ಬರ್‌ಬಾರ್ ಹಾಕಿದಂಥ ಚಪ್ಪಲಿಯೇ ಕಟ್ಟೆ. ಊರ ಆಚಾರಿಗಳಿಂದ ಮಾಡಿಸಿ ಸ್ವತಃ ಬಣ್ಣ ಹಾಕುತ್ತಿದ್ದರು. ಕಳೆದ ಬಾರಿ ಕಂಡಾಗ ಅವರು ಹಳದಿ ಮತ್ತು ನೀಲಿ ಬೆರೆತ 'ಕಟ್ಟೆ' ಧರಿಸಿದ್ದರು. ಅಂದು ಕಂಡಾಗ ಆತ ಯೋಚಿಸಿದ. ನೆನಪು ಮೂಡಿದಂದಿನಿಂದ ನೋಡುತ್ತಿರುವನಾದರೂ ಅವರಲ್ಲಿ ಯಾವುದೇ ಬದಲಾವಣೆಯಿಲ್ಲ. ಅವರಿಗೆ ಹಚ್ಚಲೆಂದು ಕಾಲವು ತಂದ ಅಲಂಕಾರವಸ್ತುಗಳೊಂದಿಗೆ ಮರಳಿ ಬಿಟ್ಟಿದೆ. ಕಂಡಾಗ ಅವರು ನಗುತ್ತ ಕೇಳಿದ್ದರು,

"ಯುವರ್ಸ್ ಈಸ್ ಎ ಸರ್‌ಪ್ರೈಸ್ ವಿಸಿಟ್?"

"ಅಲ್ಲ ದೊಡ್ಡಮ್ಮ. ನನಗೆ ಬರುವಂತೆ ಪತ್ರ ಬರೆದಿದ್ದಿರಲ್ಲ.... "

ಆತ ಜೇಬಿನಿಂದ ತೆಗೆದ ಪತ್ರವನ್ನು ಅವರು ಬೇರೆ ಯಾರದ್ದೋ ಪತ್ರವೆಂಬಂತೆ ಉದ್ವೇಗದಿಂದ ಪೂರ್ತಿ ಸಾಲುಗಳನ್ನು ಓದಿ ಮುಗಿಸಿದ್ದರು, ಕನ್ನಡಕದ ನೆರವಿಲ್ಲದೆ.....

ನಂತರ ಹೇಳಿದ್ದರು, "ಈ ಪತ್ರ ಕಂಡಾಗ ನಿನಗೆ

ಅನ್ನಿಸಿರಬೇಕು- ದಟ್ ಓಲ್ಡ್ ಉಮನ್ ಈಸ್ ಸ್ಟಿಲ್..... ಮ್ಯಾಡ್..."

ಆತ ಆಗ ಉತ್ತರವೇನನ್ನೂ ಹೇಳಿರಲಿಲ್ಲ. ಮಾತುಗಳು ಎಲ್ಲಿಗೆಲ್ಲ ಸಾಗುವುವೆಂದು ಗೊತ್ತಿರಲಿಲ್ಲ.

ಅವರೇ ಹೇಳತೊಡಗಿದ್ದರು. "ಪತ್ರದಲ್ಲಿ ನಾನೊಂದು ಹಿಂಟ್ ಕೊಟ್ಟಿದ್ದೆ. ಎಬೌಟ್ ದಿ ಲೀಗಲ್ ಇಂಪ್ಲಿಕೇಷನ್ಸ್...."

ಅವರು ಒಂದು ಕುರ್ಚಿಯಲ್ಲಿ ಕುಳಿತರು. ಅವರು ಕುಳಿತುಕೊಳ್ಳುವುದನ್ನೇ ಕಾದು ನಿಂತಿದ್ದಂತೆ ಅವರ ಮಡಿಲಿಗೆ ಒಂದು ದೊಡ್ಡ ಬೆಕ್ಕಿನ ಮರಿಯೂ ನೆಗೆದು ಕುಳಿತುಕೊಂಡಿತು. ಬಳಿಕ ಅದು ಮೈ ಚಾಚಿ ಮಲಗಿತು. ದೊಡ್ಡಮ್ಮ ಬೆಕ್ಕಿನ ಮರಿಯ ಮುಖವನ್ನು ಆತನ ಕಡೆಗೆ ತಿರುಗಿಸಿ ಹೇಳತೊಡಗಿದ್ದರು.

"ಇವನೇ ನಮ್ಮ ಚಾವಕ್ಕಾಡಿನ ದೊಡ್ಡಮ್ಮನ ಮಗಳು ದೇವಕಿಯ ಮಗ. ಅವರ್ ಗ್ರೇಟ್ ವಕೀಲ್..."

ಪುಟ್ಟ ಮಕ್ಕಳು ಅಪರಿಚಿತನನ್ನು ನೋಡುವ ಭಾವದಲ್ಲಿ ಸ್ವಲ್ಪ ತುಂಟತನದೊಂದಿಗೆ ಬೆಕ್ಕು ಎರಡು ಕಣ್ಣುಗಳನ್ನೂ ಕಿರಿದಾಗಿಸಿ ತುಟಿ ಚೂಪಾಗಿಸಿತು. ಆತ ಅತ್ತ ನೋಡಿದಾಗ ಕೂಡಲೇ ಮುಖ ತಿರುಗಿಸಿ ಅವರ ಹೊಟ್ಟೆಗೊತ್ತಿಕೊಂಡು ಮಲಗಿತು. ಬಳಿಕ ರೋದಿಸತೊಡಗಿತ್ತು.....

"ಇವಳ ಬಗ್ಗೆ ನಿನ್ನ ತಾಯಿ ಹೇಳಿರಬೇಕು. ನಿನಗೆ ನೆನಪಿರಲಾರದು. ಇವಳು ನಮ್ಮ ಲೈಲಾ ಬೆಕ್ಕಿನ ಹದಿನಾರನೇ ಜನರೇಷನ್. ಫ್ಯಾಮಿಲಿ ಟ್ರೀಯನ್ನು ನಾನು ನಿಖರವಾಗಿ ಟ್ರೇಸ್ ಮಾಡಿ ಇರಿಸಿದ್ದೇನೆ. ನಮಗೆ ಹಿಂದೊಮ್ಮೆ ಒಂದು 'ಕೊಟ್ಟುಗೆ' ಇತ್ತು ಅಂತ ನಿನ್ನ ತಾಯಿ ಹೇಳಿಕೊಟ್ಟಿಲ್ಲವೇ?"

ಕೊಟ್ಟುಗೆ ಯಾವ ಭಾಷೆಯೆಂದು ತಿಳಿಯದು. ತಾಯಿ 'ಕೊಟ್ಟುಗೆ'ಯ ಬಗ್ಗೆ ಹೇಳದ ದಿನವೇ ಇಲ್ಲ. ದೊಡ್ಡ ಮಚವೆಯೋ ಹಾಯಿ ಹಡಗೋ ಇರಬೇಕು. ಅದರ ಮೇಲಿನ ಕೋಣೆಯನ್ನೇರಿ ಕೈ ಚಾಚಿದರೆ ತೆಂಗಿನಕಾಯಿ ಕೀಳಬಹುದು. ಅಷ್ಟು ಎತ್ತರ. ಕೊಟ್ಟುಗೆಯ ಬಗ್ಗೆ ಹೇಳಹೇಳುತ್ತಲೇ ಈ ಮನೆಯೊಂದಿಗೆ ಸಂಬಂಧವಿರುವ ಹೆಂಗಳೆಯರೆಲ್ಲ ಅತ್ತು ಬಿಡುವರು. ಹಗ್ಗ, ಹೆಂಚು, ಕೈಮಗ್ಗದ

---

**ಹೇ**ಡಿತನ ಪ್ರಶ್ನಿಸುತ್ತದೆ- "ಏನು, ಇದು ಭಯರಹಿತವೆ ?" ಔಚಿತ್ಯ ಕೇಳುತ್ತದೆ- "ಏನು, ಇದು ವ್ಯಾವಹಾರಿಕವಾಗಿದೆಯೆ ?" ಅಹಂಕಾರ ವಿಚಾರಿಸುತ್ತದೆ- "ಏನು, ಇದು ಲೋಕಪ್ರಿಯವೆ ?" ಆದರೆ ಅಂತಃಕರಣ ಮಾತ್ರ ತಿಳಿದುಕೊಳ್ಳಲೆತ್ನಿಸುತ್ತದೆ- "ಏನು, ಇದು ಇದು ನ್ಯಾಯೋಚಿತವೆ ?" ಎಂದು.

---

ಬಟ್ಟೆಗಳನ್ನು ಹೇರಿಕೊಂಡು ಕೊಲಂಬೋಗೆ ಹೋಗುತ್ತಿರುವಾಗ ತೂತ್ತುಕ್ಕುಡಿಯ ಆಚೆ ಕೊಟ್ಟುಗೆ ಮುಳುಗಿಹೋಯಿತು.

ಅಂದು ಕೌಸಲ್ಯ ದೊಡ್ಡಮ್ಮ ಕೂಡ 'ಕೊಟ್ಟುಗೆ'ಯನ್ನು ಜ್ಞಾಪಿಸಿಕೊಂಡಾಗ ಬಹಳ ಹೊತ್ತು ಮಾತನಾಡಲಾಗದೆ ಕುಳಿತರು.

"ಆ ಕೊಟ್ಟುಗೆಯಲ್ಲೇ ಲೈಲಾಳನ್ನು ಕರೆತಂದದ್ದು. ಕೊಲಂಬೋದಿಂದ. ಅಂದು ನಾನು ಮದರಾಸಿನಲ್ಲಿ ಮೆಡಿಸಿನ್ ಓದುತ್ತಿದ್ದೆ."

ಅಂದು ಆತ ಕೇಳಿದ್ದ. "ನೀವು ಮೆಡಿಸಿನ್ ಓದುವುದನ್ನು ನಿಲ್ಲಿಸಿದ್ದು ಯಾವಾಗ ದೊಡ್ಡಮ್ಮ?" ಅದನ್ನು ಕೇಳಿ ಅಂದು ದೊಡ್ಡಮ್ಮನ ವರ್ತನೆ ಬದಲಾಯಿತು.

"ನಾನು ಏಕೆ ಓದುವುದನ್ನು ನಿಲ್ಲಿಸಿದ್ದು ಎಂದೇನೂ ನಿನ್ನ ತಾಯಿ ಹೇಳಿಕೊಟ್ಟಿಲ್ಲವೇ?"

"ಯಾಕೆ ನಿಲ್ಲಿಸಿದ್ದು ಅಂತಲ್ಲ ನಾನು ಕೇಳಿದ್ದು. ಎಷ್ಟನೇ ವರ್ಷ ಓದುವಾಗ..."

ದೊಡ್ಡಮ್ಮ ಇನ್ನಷ್ಟು ಮುನಿದಿದ್ದರು.

"ಅಂತಹ ಸ್ಟುಪಿಡ್ ಪ್ರಶ್ನೆಗಳಿಗೆಲ್ಲ ಉತ್ತರ ಹೇಳಲು ನನಗೀಗ ಸಮಯವಿಲ್ಲ. ನಾನು ಹೇಳುವುದನ್ನು ಕೇಳುತ್ತಿದ್ದೀಯಾ.... "ಕೊಲಂಬೋದಿಂದ ತಂದ ಲೈಲಾ ಪ್ಯೂರ್‌ಲಿ ಸಯಾಮೀಸ್ ಬೆಕ್ಕೇ ಆಗಿತ್ತು. ಹತ್ತು ಜನರೇಷನ್‌ವರೆಗೆ ಬೆರಕೆಯಾಗದೆ ಇತ್ತು. ಬಳಿಕ ನಾಟಿ ಆಯಿತು. ಯಾವ ಅದೃಷ್ಟವೋ ತಿಳಿಯದು. ಇವಳು ಮತ್ತೆ ಅದೇ ಪೆಡಿಗ್ರಿ. ಇನ್ನು ನಾನು ಬೆರೆಯಲು ಬಿಡುವುದಿಲ್ಲ. ಇವಳಿಗೆ ಜೊತೆಗೊಂದು ಇದೇ ಪೆಡಿಗ್ರಿಗೆ ಸೇರಿದ ಒಂದು ಸಯಾಮೀಸ್ ಕ್ಯಾಟ್ ಅನ್ನು ಮೇಟ್ಟುಪಾಳಯದಿಂದ ತಂದು ಇರಿಸಿದ್ದೇನೆ. ಹೊಂದಿಕೊಳ್ಳುತ್ತ ಬರುತ್ತಿದೆ. ನಾನು ನಿನ್ನನ್ನು ಪತ್ರ

ಹಾಕಿ ಕರೆಸಿದ್ದು ಏಕೆ ಅಂತ ಗೊತ್ತೆ? ನಾನು ಇಲ್ಲದ ಕಾಲದಲ್ಲೂ ಇವಳು ಇಂದಿನ ಹಾಗೆಯೇ ಬಾಳ ಬೇಕು. ಐಯಾಂ ಕೌಂಟಿಂಗ್ ಮೈ ಡೇಸ್.... ಇವಳ ಹೆಸರಿನಲ್ಲಿ ಒಂದು ಉಯಿಲು ಬರೆದಿಡ ಬೇಕು. ವಿತ್ ಆಲ್ ವ್ಯಾಲಿಡಿಟಿ."

ಬೆಕ್ಕಿನ ಹೆಸರಲ್ಲಿ ಉಯಿಲೇ. ಅಂದು ಅದನ್ನು ಕೇಳಿ ಗೊಳ್ಳೆಂದು ನಕ್ಕದ್ದು ತಪ್ಪಾಯಿತೆಂದು ಇಂದು ನೆನೆಯುತ್ತಾನೆ. ತಕ್ಷಣ ಕೌಸಲ್ಯ 'ದೊಡ್ಡಮ್ಮಳ ಆರ್ದ್ರ ಸ್ವರ.

"ನೀನು ಯಾಕೋ ನಕ್ಕಿದ್ದು. ನಿಂಗೆ ಮನುಷ್ಯರ ದುಃಖ ಇನ್ನೂ ಗೊತ್ತಿಲ್ಲ. ವೆಸ್ಟರ್ನ್ ಕಂಟ್ರೀಸ್ ನಲ್ಲಿ ಪೆಟ್ಸ್‌ಗೆ ಉಯಿಲು ಬರೆಯುವುದು ಸಾಮಾನ್ಯ ಪದ್ಧತಿ."

"ದೊಡ್ಡಮ್ಮಾ, ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಮನುಷ್ಯರಿಗೆ ಸಮೃದ್ಧಿ ಇದೆ. ಇಲ್ಲಿ ಮನುಷ್ಯರು ಊಟವಿಲ್ಲದೆ ಸಾಯುತ್ತಿದ್ದರು. ಉಪವಾಸ ಬಿದ್ದಿರುವ ಒಬ್ಬ ಮನುಷ್ಯನ ಹೆಸರಿಗೆ ಒಂದು ಉಯಿಲು ಬರೀರಿ..."

"ಅದಕ್ಕೆ ತಕ್ಕ ಮನುಷ್ಯರು ಯಾರಿದ್ದಾರೋ ಇಲ್ಲಿ? ಮನುಷ್ಯರಿದ್ದು ಬಿಟ್ಟರೆ ಸಾಕೆ? ಅವರಲ್ಲಿ ಮನುಷ್ಯ ಪ್ರೇಮ ಬೇಡವೇ? ಮನುಷ್ಯ ಪ್ರೇಮವಲ್ಲ ಬರಿಯ ಪ್ರೇಮ.... ಇವಳ ಹಾಗೆ ನನ್ನನ್ನು ಪ್ರೀತಿಸುವವರು ಯಾರಿದ್ದಾರೋ ಈ ಕಾಲದಲ್ಲಿ? ನಿಂಗೊತ್ತೇನು ನಂಗೆ ಮೊದಲು ಅಟ್ಯಾಕ್ ಆಗಿದ್ದು? ನಾನು ಮಂಚದಲ್ಲಿ ಒರಗಿ ಕುಳಿತು ಏದು ಸಿರಿಡುತ್ತಿದ್ದಾಗ ಅದನ್ನು ಕಂಡು ಈ ನನ್ನ ಮಗಳೇ ರಸ್ತೆ ತನಕ ಓಡಿ ಹೋಗಿ 'ಸಿಮೂ'ನ ಕರ್‍ಕೊಂಡು ಬಂದಿದ್ದು. ನಾನು ಇಂಟೆನ್‌ಸಿವ್ ಕೇರ್ ಯುನಿಟ್ ನಲ್ಲಿ ಮಲಗಿದ್ದಾಗ ನನ್ನನ್ನು ನೋಡಲು ನನ್ನ ಈ ಮಗಳು ಬಂದ ಪರಿ. ನನ್ನ ಮಗಳು ಅತ್ತದ್ದು. ಅದನ್ನು ಕೇಳಿ ನರ್ಸ್‌ಗಳು ಕೂಡ ಅತ್ತರು. ನನ್ನ ಮಗಳೇ ಇಂಟೆನ್‌ಸಿವ್ ಕೇರ್ ಯುನಿಟ್‌ನಲ್ಲಿ ನನ್ನ ಜೊತೆ ಇದ್ದದ್ದು.... ಎರಡು ಸಲ ಇಂಟೆನ್‌ಸಿವ್ ಕೇರ್ ಯುನಿಟ್‌ಗೆ ಸೇರಿದ್ದೆ. ಇಂಟೆನ್‌ಸಿವ್ ಕೇರ್ ಯುನಿಟ್‌ನಲ್ಲಿ ಮಲಗುವುದಕ್ಕೂ ಶವಪೆಟ್ಟಿಗೆಯಲ್ಲಿ ಮಲಗುವದಕ್ಕೂ ಏನೂ ವ್ಯತ್ಯಾಸವಿಲ್ಲ. ಅದಕ್ಕೇ ನಾನು ಹೇಳುತ್ತಿರುವುದು ಐಯಾಂ ಕೌಂಟಿಂಗ್ ಮೈ ಡೇಸ್. ನಾನೊಂದು ಉಯಿಲು ಬರೆಯಬೇಕು, ನನ್ನ ಈ ಮಗಳ ಹೆಸರಲ್ಲಿ...." ಬೆಕ್ಕಿನ ಮುಖವನ್ನು ಒತ್ತಿಕೊಳ್ಳುತ್ತ ಅವರು ಹೇಳಿದರು.

"ದೊಡ್ಡಮ್ಮಾ, ಬೆಕ್ಕಿನ ಹೆಸರಲ್ಲಿ ಉಯಿಲು ಬರೆಯುವ ಕಾನೂನನ್ನೆಲ್ಲ ನಾನು ಇದುವರೆಗೂ ಹ್ಯಾಂಡಲ್ ಮಾಡಿಲ್ಲ."

ದೊಡ್ಡಮ್ಮ ಕಾಲಿನ 'ಕಟ್ಟೆ'ಯನ್ನು ನೆಲಕ್ಕೆ ಉಜ್ಜುತ್ತಾ ಕೇಳಿದರು. "ಮತ್ತೆ ನೀನು ಎಂಥಾ ವಕೀಲನೋ. ನಿನ್ನನ್ನೆಲ್ಲ ವಕೀಲನಾಗಿಸಿದ ನಮ್ಮದೇ ತಪ್ಪು ಬಿಡು. ನನ್ನ ಮಗಳ ಹೆಸರಲ್ಲಿ ಒಂದು ಉಯಿಲು ಬರೆಯತಕ್ಕ ವಕೀಲರು ಈ ಊರಲ್ಲಿ ಇದ್ದಾರೇನೋ ನಾನೂ ನೋಡ್ತೀನಿ."

ಅಂದು ಆತ ಮನದಲ್ಲೇ ನಕ್ಕಿದ್ದ.

ಬೆಕ್ಕಿನಹೆಸರಲ್ಲೆ ಏಕೆ ಸೊಳ್ಳೆಯ ಹೆಸರಲ್ಲೂ ಉಯಿಲು ಬರೆದುಕೊಡಲು ಕಾನೂನನ್ನು ಹುಡುಕಿ ತೆಗೆಯುವವರು ಇದ್ದಾರೆ. ಎರಡು ಸಲ ಇಂಟೆನ್‌ಸಿವ್ ಕೇರ್ ಯುನಿಟ್ ತಲುಪಿದವರ ರುಜು ಹಾಕಲ್ಪಟ್ಟ ಕಾಗದಗಳು ಕೈಗೆ ಸಿಕ್ಕರೆ ಏನೆಲ್ಲ ಮಾಡ ಬಹುದೆಂದು ಅವರಿಗೆ ತಿಳಿಯುವ ಸಿದ್ಧಿ ಇದೆ. ಅದನ್ನು ನೆನೆದಾಗ ಆತನಿಗೆ ಭಯವೆನಿಸಿತ್ತು.

"ಸರಿ. ದೊಡ್ಡಮ್ಮಾ.... ನಾನೇ ಒಂದು ಡ್ರಾಫ್ಟ್ ಬರೆದು ತರುತ್ತೇನೆ. ಓದಿ ಹೇಳುತ್ತೇನೆ. ಬದಲಾಯಿಸುವುದೋ ತಿದ್ದುವುದೋ ಹೆಚ್ಚಿಗೆ ಸೇರಿಸುವುದೋ ಏನಾದರೂ ಇದ್ದರೆ ಮಾಡ ಬಹುದು...."

★ ★ ★

ಅಂದು ಮರಳಿ ಬರುವಾಗ ದಾರಿಯುದ್ದಕ್ಕೂ ಆತ ಕೌಸಲ್ಯ ದೊಡ್ಡಮ್ಮನ ಕುರಿತೇ ಯೋಚಿಸಿದ್ದ. ಅವರ ಬಗ್ಗೆ ಅರಿತ ಕಥೆಗಳನ್ನು ಮನದಲ್ಲಿ ಹುಡುಕಿದ್ದ. ಅಂದು ಈ ಮಾಳಿಗೆ ಮನೆ ಜೇನು ಗೂಡಿನಂತೆ ನಿಬಿಡವೂ ಶಬ್ದಭರಿತವೂ ಆಗಿತ್ತು. ಆದರೂ, ಈ ಮಾಳಿಗೆ ಮನೆಯಲ್ಲಿ ಒಂದು ಅರ್ಧ ರಾತ್ರಿಯಲ್ಲಿ ಕೌಸಲ್ಯ ದೊಡ್ಡಮ್ಮನ ಶಯ್ಯಾಗೃಹದ ಮಂಚದಲ್ಲಿ ಅವರೊಂದಿಗೆ ಓರ್ವ ಅನ್ಯಪುರುಷ ಕಾಣಸಿಕ್ಕಿದ್ದ. ಕಂಡು ಹಿಡಿದವರು ಕುಟುಂಬದ ಹಿರಿಯರು. ಆ ಅನ್ಯಪುರುಷ ಎಲ್ಲಿಯವನು ಎಂದಾ ಗಲಿ ಯಾರು ಎಂದಾಗಲಿ ಇಂದಿನ ತನಕ ಯಾರಿಗೂ ತಿಳಿಯದು. ಆದರೆ ಬಲಾಢ್ಯನಾಗಿದ್ದ

ನಂತೆ. ಕೌಸಲ್ಯದೊಡ್ಡಮ್ಮನನ್ನು ಬಿಗಿದು ಕಟ್ಟಿ ಕೋಣೆಯೊಳಗೆ ತಳ್ಳಿದರು. ಆತನನ್ನು ಹೊರಕ್ಕೆ ಎಳೆದರು. ಒಂದೊಂದು ಹೆಜ್ಜೆಗೂ ಆ ವ್ಯಕ್ತಿ ಪ್ರತಿಭಟಿಸಿ ನಿಂತನಂತೆ. ಮರುದಿನ ತೆಂಗಿನ ನಾರಿನ ಕೆಸರಿನಿಂದ ನೊರೆಯೊಡನೆ ಹೊಮ್ಮಿ ಆ ಮನುಷ್ಯನ ದೇಹ ಹೆಣವಾಗಿ ಹೊಳೆಯಲ್ಲಿ ಉಬ್ಬರದಲ್ಲಿ ತೇಲಿ ಹೋಯಿತು. ಉಬ್ಬರವಿಳಿದಾಗ ನದಿ ಕುರುಚಲು ಕಾಡಿನಲ್ಲಿ ಪ್ರದರ್ಶನಕ್ಕೆಂಬಂತೆ ಅಂಗಾತ ಮಲಗಿಸಿತು. ಅಲೆಗಳು ತೆರವಾದವು. ಕೂಡಿ ಹಾಕಿದ್ದ ಕೋಣೆಯೊಳಗಿಂದ ಕೌಸಲ್ಯದೊಡ್ಡಮ್ಮ ಹೇಗೆ ಆ ದೂರನ್ನು ಪೊಲೀಸ್ ಸ್ಟೇಷನ್‌ಗೆ ತಲುಪಿಸಿದರು ಎಂದು ಇಂದಿಗೂ ಯಾರಿಗೂ ತಿಳಿಯದು. ಆ ಕುಟುಂಬದ ಬುಡಮೇಲಾಗುವ ಸ್ಥಿತಿ ಬಂತು, ಬಳಿಕ ಬಂದ ಕ್ರಿಮಿನಲ್ ಕೇಸ್‌ನಿಂದ. ಆ ಕುಟುಂಬದ ವಯಸ್ಕ ಗಂಡಸರನ್ನಷ್ಟೆ ಅಲ್ಲ ಪೂರ್ಣ ಕೆಲಸದಾಳುಗಳನ್ನು ಸಹ ಸಿಲುಕಿಸಿ ಬಿಟ್ಟ, ನೀಳವಾದ ವಿಸ್ತೃತ ಬಲೆ. ಕೌಸಲ್ಯ ದೊಡ್ಡಮ್ಮನಿಗೆ ಇಷ್ಟ ಬಂದಂತೆಯೇ ಕಾನೂನು ಜರುಗಿತು.

ಆ ಇಡೀ ಕುಟುಂಬದ ನೊಂದ ದನಿ ಕೇಳದೆ ಕೌಸಲ್ಯ ದೊಡ್ಡಮ್ಮ ಅಟ್ಟಹಾಸದಿಂದ ನಕ್ಕರು. ಕೊನೆಯ ದಾರಿ ಎಂದು ಮನೆಯ ಯಜಮಾನರು ಕವಡೆ ಹಾಕಿಸಿ ಪ್ರಶ್ನೆಮಾಡಿ ನೋಡಿದರು. ನಲ್ಲೂರು ಗೋಪಾಲ ಜೋಯಿಸರು 'ಪ್ರಶ್ನೆ'ಯಲ್ಲಿ ಕಂಡದ್ದನ್ನು ಮರೆಮಾಚಲಿಲ್ಲ, ಕಂಟಕಶನಿ. ಕುಟುಂಬದ ಸದಸ್ಯರಿಗೆಂದಲ್ಲ ಇಡೀ ಕುಟುಂಬಕ್ಕೇ. ಆ ಕುಟುಂಬದ ಕಲ್ಲಿನ ಗೋಡೆಗಳೂ ಭಾವಣಿಯ ಪಕ್ಕಾಸುಗಳೂ ಅದುರಿದವು. ಆ ಕುಟುಂಬ ಒಟ್ಟಾಗಿ ಕೌಸಲ್ಯ ದೊಡ್ಡಮ್ಮನ ಪಾದಗಳಿಗೆರಗಿತು. ಹೇಗೆ- ಏಕೆ ಕೌಸಲ್ಯ ದೊಡ್ಡಮ್ಮ ಸಡಿಲವಾದರು ಎಂದು ಇಂದಿಗೂ ಯಾರಿಗೂ ತಿಳಿಯದು. ಆದರೂ ಮೂರು ಕಂಡೀಷನ್ ಹಾಕಿದರು: ಒಂದು, ಮೆಡಿಕಲ್ ಕಾಲೇಜಿನ ಓದನ್ನು ಒಂದು ದಿನವೂ ಮುಂದುವರಿಸುವುದಿಲ್ಲ. ಎರಡು, ಮದುವೆ ಮಾಡಿಕೊಳ್ಳಬೇಕೆಂದು ಯಾರೂ ಹೇಳಲೇಕೂಡದು. ಮೂರು, ಪಿಯಾನೋ ಕೊಂಡುಕೊಡಬೇಕು. ಅದು ಆಸ್ಟ್ರಿಯನ್ ಪಿಯಾನೋವೇ ಆಗಬೇಕು. ಹೊಚ್ಚ ಹೊಸತು.

---

**ಹ**ತ್ತು ವರ್ಷದ ಹುಡುಗ ಓಡೋಡಿ ಬಂದು ಅಮ್ಮನನ್ನು ಕೇಳಿದ- "ಅಮ್ಮಾ, ನೀನು ಸರ್ಕಸ್‌ನಲ್ಲಿ ಕೆಲಸ ಮಾಡ್ತಿದ್ದೆಯಾ ?"

"ಯಾಕೋ ? ಹಿಂಗ್ಯಾಕೆ ಕೇಳ್ತಿದ್ದೀ ?"

"ಅಜ್ಜಿ ಹೇಳ್ತಿದ್ಲು- ನೀನು ಅಪ್ಪಾಜಿನ್ನ ಕಿರುಬೆರಳ ಮೇಲೆ ಕುಣಿಸಬಲ್ಲವಳು ಅಂತ."

---

ಕಟ್ಟಕಡೆಯ ಕಂಡೀಷನ್ನೇ ಆ ಕುಟುಂಬಕ್ಕೆ ಪೇಚು ತಂದದ್ದು. ಒಂದು ಪವನ್‌ಗೆ ಮೂವತ್ತೈದು ರೂಪಾಯಿ ಇದ್ದ ಕಾಲ. ಒಂದು ಆಸ್ಟ್ರಿಯನ್ ಪಿಯಾನೋಗೆ ನಾಲ್ಕು ಸಾವಿರ ರೂಪಾಯಿಗಳು. ತಾಯಿ ಹೇಳುತ್ತಿದ್ದರು. ಒಂದು ಬಯಲನ್ನು ಮಾರಿ ಒಂದು ಪಿಯಾನೋ ಕೊಂಡುಕೊಟ್ಟರು. ಬಯಲು ಎಂದರೆ ನದೀ ತೀರದ ತೆಂಗಿನ ತೋಪು. ಆ ಪ್ರದೇಶದ ಭಾಷೆಯದು.

ಪಿಯಾನೋ ನುಡಿಸುತ್ತಾ ಹಾಡುತ್ತಾ ವಸ್ತ್ರಗಳನ್ನು ಡಿಸೈನ್ ಮಾಡುತ್ತಾ ತಾವೇ ಹೊಲಿಯುತ್ತಾ ಮರದ ಪಾದರಕ್ಷೆಗಳಿಗೆ ಬಣ್ಣ ಬಳಿಯುತ್ತಾ ಬೆಕ್ಕುಗಳೊಂದಿಗೆ ನಗುತ್ತಾ ಅವರು ಸೋಲನ್ನೊಪ್ಪದೆ ಎಷ್ಟೋ ದಶಕಗಳನ್ನು ಕಳೆದರು. ತೃಪ್ತಿಯಿಂದಲೇ.

"ನೀನು ಬಂದು ಭಾಳ ಹೊತ್ತಾಯ್ತೇನೋ..."

ಆತ ಬೆಚ್ಚಿ ಬಿದ್ದ. ಆ ಮನೆಯಲ್ಲಿ ಇಂದು ಸಣ್ಣ ಸದ್ದು ಸಹ ಅಟ್ಟಹಾಸದಂತೆ. ತಿರುಗಿ ನೋಡಿದ.

ಸೀಮು ಅಮ್ಮ!

ಈ ಮನೆಯಷ್ಟೇ ತನಗೆ ಹಳಬಳೆನಿಸಿರುವ ಅಡಿಗೆಯವಳು. ಆ ಹಳೆತನವನ್ನು ಅರಸುತ್ತಾ ಆತ ಅವರನ್ನೇ ನೋಡುತ್ತ ಕುಳಿತ. ಹಲ್ಲುಗಳೂ ಕಿವಿಯೋಲೆಯ ಹರಳುಗಳೂ ಉದುರಿಹೋಗಿವೆ. ಆಗ ನೆನಪಾಯಿತು. ತಾನು ಬರೆದು ತಂದ ಉಯಿಲು ಬೆಕ್ಕುಗಳನ್ನು ಸಂರಕ್ಷಿಸುವುದಕ್ಕಾಗಿರಲಿಲ್ಲ. ಸೀಮು ಅಮ್ಮನನ್ನು ರಕ್ಷಿಸಲು. ಅವರನ್ನೇ ಉಯಿಲಿನಲ್ಲಿ ಎಕ್ಸಿಕ್ಯೂಟ್ರಿಕ್ಸ್ ಎಂದು ಮಾಡಿರುವುದು. ಅವರು ಬೆಕ್ಕಿನ ಹೆಸರಿನಲ್ಲಿ ಬದುಕಿಕೊಳ್ಳುವರು. ಆಯುಷ್ಯ ಕಾಲವೂ ಎಕ್ಸಿಕ್ಯೂಟ್ರಿಕ್ಸ್.

"ನಾನು ಬೀದಿಗೆ ಹೋಗಿದ್ದೆ ಮಗೂ. ಒಂದಿನ

ಹಾಗೆ 'ಕೋಯಾ'(ಮುಸ್ಲಿಂ ಮೀನು ವ್ಯಾಪಾರಿ)ಗಳು ಯಾರೂ ಮೀನನ್ನು ಮನೆಗೆ ತಂದ್ಕೊಡಲ್ಲ. ಐಸ್ ಹಾಕದ ಮೀನು ಬೇಕೆಂದರೆ ನದೀ ತೀರಕ್ಕೆ ಹೋಗಬೇಕು...."

ಭಾಷೆ ಕೇಳಿದಾಗ ನಗು ಬಂತು. ಎಲ್ಲ ಮೀನು ದೋಣಿಯವರಿಗೂ ಇಂದೂ ಹಿಂದಿನಂತೆ ಒಂದೇ ಹೆಸರು! ಕೋಯಾ....

"ದೊಡ್ಡಮ್ಮ ಏನು ಮಾಡ್ತಿದ್ದಾರೆ...."

"ನಿದ್ದೆ ಮಾಡ್ತಿರಬಹುದು ಮಗೂ."

"ಬೆಳಿಗ್ಗೆ ಹತ್ತು ಗಂಟೆಗಾ...."

"ಈಗ ಅಮ್ಮೋರ ನಿದ್ದೆ ಎಲ್ಲ ಹಾಗೇ.... ಬೆಳಿಗ್ಗೆ ಏಳು ಏಳೂವರೆಗೆ ಬ್ರೇಕ್‌ಫಾಸ್ಟ್ ಬೇಕು. ಆಮೇಲೆ ನಿದ್ದೆ ಮಧ್ಯಾಹ್ನ ಒಂದು ಒಂದೂವರೆ ಎರಡರತನಕ. ಆಮೇಲೆ ರಾತ್ರಿ ಹಗಲು ನಿದ್ದೆ ಇಲ್ಲ. ಕರೆದರೆ ಎದ್ದೇಳ್ತಾರಾಂತ ನೋಡ್ತೀನಿ."

ಸೀಮು ಅಮ್ಮ ಒಳಗೆ ಹೋದರು.

★ ★ ★

ಹೊರಬಾಗಿಲ ಬಳಿ ಕಾರಿನ ಹಾರ್ನ್ ಮೊಳಗಿತು. ಆತ ಗಾಬರಿಯಾಗಿ, ಎದ್ದು ನಿಂತ. ಟ್ಯಾಕ್ಸಿಯವನಿಗೆ ಹೇಳಿದ್ದುದು ಹದಿನೈದು ಹೆಚ್ಚೆಂದರೆ ಇಪ್ಪತ್ತು ನಿಮಿಷ. ಆತ ಹೊರನಡೆದು ಟ್ಯಾಕ್ಸಿಯವನಿಗೆ ಹಣ ಕೊಟ್ಟನು. "ಮಿಸ್ಸಿ ದೊಡ್ಡಮ್ಮ ನಿದ್ದೆ ಮಾಡ್ತಿರಬೇಕು. ರಸ್ತೇಲಿರೋ ಯಾವ ಟ್ಯಾಕ್ಸಿಯೂ ಈ ಮನೆಗೆ ಕರೆದರೆ ಬರೋದಿಲ್ಲ. ಟೌನ್‌ಗೆ ಹೋಗಬೇಕೂಂತ ಟ್ಯಾಕ್ಸಿ ಕರೀತಾರೆ. ಇಲ್ಲಿ ಬಂದರೆ ಮಿಸ್ಸಿದೊಡ್ಡಮ್ಮ ನಿದ್ದೆ ಮಾಡ್ತಿದ್ದಾರೆ. ಇಲ್ಲೀವರೆಗೆ ಬಂದ ಹಣ ಕೊಡ್ತಾರೆ. ಬಂದವನು ಫಜೀತಿಗೆ ಬೀಳ್ತಾನೆ."

ಆತ ತಿರುಗಿ ಮನೆಗೇ ನಡೆದ. ಕೌಸಲ್ಯ ದೊಡ್ಡಮ್ಮ ಕಾಲೆಳೆದುಕೊಂಡು ಬರುತ್ತಿದ್ದಾರೆ. ಮರದ ಪಾದರಕ್ಷೆ ಹಾಕಲು ಮರೆತರೇ.

"ಟೌನ್‌ಗೆ ಹೋಗಲು ಒಂದು ಟ್ಯಾಕ್ಸಿ ಬರ ಹೇಳಲು ಆಳನ್ನು ಕಳಿಸಿದ್ದೆ. ಹೋಗೋದಿಕ್ಕಾಗೋಲ್ಲ. ಈ ಹಣ ಕೊಟ್ಟು ಟ್ಯಾಕ್ಸಿ ವಾಪಸು ಕಳಿಸು...."

"ಅಲ್ಲ ದೊಡ್ಡಮ್ಮಾ. ಅದು ನಾನು ಬಂದ ಟ್ಯಾಕ್ಸಿ. ವಾಪಸು ಕಳಿಸಿದೆ."

ಕೌಸಲ್ಯ ದೊಡ್ಡಮ್ಮ ಕೈ ಒತ್ತಿದರು. ಅನಂತರ ಕೈ ಜಗುಲಿಯಲ್ಲೂರಿ ಕುಳಿತರು. ದೂರಕ್ಕೆ ದೃಷ್ಟಿ ಹಾಯಿಸಿ. ಏನೂ ನುಡಿಯುತ್ತಿಲ್ಲ. ಆತನೇ ಮಾತುಗಳಿಗೆ ದಾರಿ ಮಾಡಿದ.

"ದೊಡ್ಡಮ್ಮ ಅವತ್ತು ಹೇಳಿದ್ದಿರಲ್ಲ ಉಯಿಲಿನ ಬಗ್ಗೆ. ನಾನು ಅದನ್ನು ಡ್ರಾಫ್ಟ್ ಮಾಡಿ ತಂದಿದ್ದೇನೆ. ಏನು ಬೇಕಾದರೂ ಆ್ಯಡ್ ಮಾಡಬಹುದು ಅಥವಾ ಡಿಲಿಟ್ ಮಾಡಬಹುದು.... ಎನೀ ಪ್ರಾವಿಷನ್ಸ್...."

"ಇನ್ನು ಯಾಕೋ ಉಯಿಲೆಲ್ಲ? ನನ್ನ ಮಗಳು ಹೋದಳಲ್ಲಾ. ಸತ್ತಳಲ್ಲಾ. ಕೊಂದೆನಲ್ಲಾ. ಐದು ದಿವಸ ಆಯಿತು. ಸಂಜೆ ಅವಳು ನನ್ನ ಬಳಿ ಬಂದು ಮಲಗಿದ್ದಳು. ಕಿಟಕಿ ಹತ್ತಿರ ಒಂದು ಕಾಡು ಬೆಕ್ಕು ಶಬ್ದ ಮಾಡಿತು. ಕಾಡು ಬೆಕ್ಕು ಅಂದರೆ ಯಾರೂ ತೋಟದೊಳಗೂ ಸೇರಿಸಲ್ಲ. ಕಂಡರೆ ಕಲ್ಲು ತೆಗೆದುಕೊಂಡು ಓಡಿಸುತ್ತಾರೆ. ಅವಳು ಮೆಲ್ಲಗೆ ಎದ್ದಳು. ನಾನು ಅವಳನ್ನು ತಡೆದೆ. ಅವಳು ನನ್ನ ಕೈಯನ್ನು ಪರಚಿ ಕಿಟಕಿಯ ಮೂಲಕ ಹೊರಕ್ಕೆ ಧುಮುಕೀ ಬಿಟ್ಟಳು. ನನ್ನ ಮಗಳಲ್ಲವೇ? ಅವಳು ಹೋಗಿ ಮೋಸದಲ್ಲಿ ಬೀಳುವುದನ್ನು ನಾನು ನೋಡುತ್ತ ಕುಳಿತಿರಲು ಸಾಧ್ಯವೇ? ನಾನು ಹೊರಗೆ ಹೋದೆ. ನನ್ನ ಕೈಗೆ ಸಿಕ್ಕಿದ್ದು ಒಂದು ಕಬ್ಬಿಣದ ಸಲಾಕೆ. ನಾನು ಕಾಡುಬೆಕ್ಕನ್ನು ಓಡಿಸಲು ಸಲಾಕೆ ಎತ್ತಿದೆ. ಆಗ ಅವಳು ನನ್ನ ಮೇಲಕ್ಕೆ ಎಗರಿದಳು. ಬಳಿಕ ಏನು ನಡೆಯಿತೆಂದು ನನಗೇ ತಿಳಿಯದು. ಇಬ್ಬರನ್ನೂ.... ನೆನೆದರೇ ನನಗೆ ತಲೆ ಸುತ್ತುತ್ತದೆ...."

ಕೌಸಲ್ಯ ದೊಡ್ಡಮ್ಮ ಜಗಲಿಯಲ್ಲಿ ಕೈಯೂರಿದರು. ಮೇಲೆದ್ದರು. ಗೋಡೆಯನ್ನು ತಡವುತ್ತಾ ಒಳಗಡೆಗೆ ತಡವರಿಸುತ್ತಾ ನಡೆದರು. ●

---

**ಯಾ**ವನು ತನ್ನ ಕುಲವೇ ಉಚ್ಚವೆಂದು ಬೀಗಿಕೊಂಡು ಇತರರೆಲ್ಲ ನೀಚಕುಲದವರೆಂಬ ನಿಕೃಷ್ಟಭಾವನೆ ತಾಳುವನೋ ಆತ ಹೇಗೆ ಸತ್ಪುರುಷನಾದಾನು ?

● **ಗೌತಮ ಬುದ್ಧ**

ಮಸಾಲೆಯ ರಾಣಿ



# ಜೀರಿಗೆ

● ಪ್ರೊ. ಎನ್.ಆರ್. ಆಡೂರ

ಮಸಾಲೆ ಜಿನಸುಗಳಲ್ಲಿಯೇ ಅತಿ ಬೆಲೆಯುಳ್ಳ ವಸ್ತು ಜೀರಿಗೆ. ಕರಿಮೆಣಸು "ಮಸಾಲೆಯ ರಾಜ"ನೆಂದೆನಿಸಿಕೊಂಡರೆ, ಜೀರಿಗೆಗೆ "ಮಸಾಲೆಯ ರಾಣಿ" ಎಂಬ ಬಿರುದು. ಇತ್ತೀಚಿನ ದಿನಗಳಲ್ಲಿ ಪ್ರಖ್ಯಾತಗೊಂಡ ಗರಮ್ ಮಸಾಲಾ ಮುಂತಾದವುಗಳಲ್ಲಿ ಜೀರಿಗೆಯೇ ಪ್ರಮುಖವಾಗಿರುವುದರಿಂದ ಅವುಗಳಿಗೆ ರುಚಿಯೊಡನೆ ಒಳ್ಳೆಯ ಪರಿಮಳ ಕೂಡ ಕಂಡುಬರುತ್ತದೆ. ದಿನನಿತ್ಯದ ಮಸಾಲೆ ರುಚಿಕಟ್ಟಾಗಲು ಜೀರಿಗೆಯನ್ನು ಸ್ವಲ್ಪ ಪ್ರಮಾಣದಲ್ಲಾದರೂ ಬೆರೆಸಲೇಬೇಕು. ಇದು ನಮ್ಮನ್ನು ಆರೋಗ್ಯವಂತರನ್ನಾಗಿಯೂ ಇಡಬಲ್ಲದು.

ಸಾವಿರಾರು ವರ್ಷಗಳಿಂದಲೂ ಜೀರಿಗೆ ಬಹುಮೂಲ್ಯ ವಸ್ತುವೆಂದು ಪರಿಗಣಿಸಲ್ಪಟ್ಟಿದೆ. ಯುರೋಪಿನಲ್ಲಿನ ಭೂಮಧ್ಯ ಸಮುದ್ರದ ಸುತ್ತಲಿನ ಕೆಲ ರಾಷ್ಟ್ರಗಳಲ್ಲಿ ಈ ಜಾತಿಯ ಸಸ್ಯ ಉತ್ಪತ್ತಿಗೊಂಡಿತೆಂದೂ ಇಜಿಪ್ತವೇ ಜೀರಿಗೆಯ ತವರುಮನೆಯೆಂದೂ ಸಸ್ಯಶಾಸ್ತ್ರದಲ್ಲಿ ವರ್ಣಿಸಲಾಗಿದೆ. ಪೆಲೆಸ್ಟೈನ್‌ದಲ್ಲಿ ಬಹುಕಾಲದ ಹಿಂದೆಯೇ ಜೀರಿಗೆಯನ್ನು ಬೆಳೆಸಲಾಗುತ್ತಿತ್ತೆಂದೂ ಹೇಳಲಾಗಿದೆ. ಭಾರತದಲ್ಲಿ ಹೆಚ್ಚಾಗಿ ರಾಜಸ್ಥಾನ, ಗುಜರಾತ ರಾಜ್ಯಗಳಲ್ಲಿ ಇದನ್ನು ಬೆಳೆಸಲಾಗುತ್ತಿದೆ. ೧೯೯೧ರ ಒಂದು ಸಮೀಕ್ಷೆಯ ಪ್ರಕಾರ ಭಾರತದಲ್ಲಿ ೧,೩೧,೭೩೦ ಹೆಕ್ಟೇರ್ ಜಮೀನಿನಲ್ಲಿ ೭೧,೭೮೦ ಟನ್ ಜೀರಿಗೆ ಕಾಳಿನ ಇಳುವರಿ ಪಡೆದುಕೊಳ್ಳಲಾಗಿತ್ತು. ಜಗತ್ತಿನ ಇತರ ಜೀರಿಗೆ ಬೆಳೆಯುವ ರಾಷ್ಟ್ರಗಳಿಗೆ ಹೋಲಿಸಿದರೆ ಈ ಉತ್ಪತ್ತಿ ತೀರಾ ಕಡಿಮೆ.

ಜೀರಿಗೆ ಅಥವಾ ಬಿಳಿಜೀರಿಗೆ ಎಂದು ಕರೆಯಲ್ಪಡುವ ಈ ಮಸಾಲೆ ಜಿನಸಿಗೆ ತೆಲುಗರು "ಜಿರಾಹಲು" ಎಂದೂ, ತಮಿಳರು "ಸಿರಾಗಂ" ಎಂದೂ, ಹಿಂದೀ, ಮರಾಠಿ, ಬಂಗಾಲಿ ಭಾಷೆಗಳಲ್ಲಿ "ಜೀರಾ" ಎಂದೂ ಕರೆಯುತ್ತಾರೆ. ಆಂಗ್ಲರು "ಕ್ಯುಮಿನ್" ಎಂದು ಕರೆದಿದ್ದಾರೆ. ಸಸ್ಯಶಾಸ್ತ್ರಜ್ಞರಂತೂ "ಕ್ಯುಮಿನಂ ಸೈಮಿನಂ" ಎಂಬ ಲ್ಯಾಟಿನ್ ಶಬ್ದಗಳೆರಡರಿಂದ ಕರೆದು ಕೊತ್ತಂಬರಿ (ಹವೀಜ), ಬಡೇಸೋಪು, ಗಜ್ಜರಿ, ಸಬ್ಬಸಿಗೆ ಮುಂತಾದ ಸಸ್ಯ



ಗಳೊಂದಿಗೆ "ಅಂಬೆಲಿಫೆರಿ" ಎಂಬ ಸಸ್ಯ ಕುಟುಂಬಕ್ಕೆ ಸೇರಿಸಿದ್ದಾರೆ.

ಜೀರಿಗೆ ಸಸ್ಯ ಸುಮಾರು ೩೦ ಸೆಂಟಿಮೀಟರ್ ಎತ್ತರಕ್ಕೆ ಬೆಳೆಯುತ್ತಿದ್ದು ಎಲೆಗಳು ಸಬ್ಬಸಿಗೆಯ ಎಲೆಗಳನ್ನು ಹೋಲುತ್ತವೆ. ಹೂಗಳು ಚಿಕ್ಕವೂ ಗುಲಾಬಿ ಬಣ್ಣದವೂ ಆಗಿರುತ್ತವೆ. ಬಯಲುಸೀಮೆಯಲ್ಲಿಯೂ ಕೆಲಮಟ್ಟಿಗೆ ಎತ್ತರ ಪ್ರದೇಶಗಳಲ್ಲಿಯೂ ಬೆಳೆಯಬಲ್ಲ ಈ ಸಸ್ಯ ಅಷ್ಟೇನೂ ಉಷ್ಣವಲ್ಲದ ಹಾಗೂ ಅತಿಯಾಗಿ ಮಳೆಯಾಗದ ಹವಾಮಾನವನ್ನೇ ಇಷ್ಟಪಡುತ್ತದೆ. ಆದ್ದರಿಂದಲೇ ಜೀರಿಗೆಯ ಪೈರನ್ನು ಮನ್ಸೂನ್ ಮಳೆಯ ದೊಡ್ಡ ಸೆಳಕುಗಳು ನಿಂತ ಮೇಲೆಯೇ ಬೆಳೆದುಕೊಳ್ಳಲಾಗುತ್ತದೆ. ಮಳೆಯ ಬಾಧೆ ಇಲ್ಲದಲ್ಲಿ ವರ್ಷಕ್ಕೆ ಎರಡು ಬಾರಿ ಅಂದರೆ ಎಪ್ರಿಲ್‌ನಲ್ಲೊಮ್ಮೆ ಅಕ್ಟೋಬರ್‌ದಲ್ಲಿನ್ನೊಮ್ಮೆ ಬೆಳೆ ತೆಗೆಯಬಹುದು.

ಅಂಗಡಿಯಲ್ಲಿ ದೊರಕುವ ಜೀರಿಗೆ ಕಾಳುಗಳು ಆ ಸಸ್ಯದ ಒಣಗಿಸಿದ ಹಣ್ಣುಗಳೆಂದೇ ಸಸ್ಯಶಾಸ್ತ್ರ ಹೇಳುತ್ತದೆ. ಪ್ರತಿಯೊಂದು ಕಾಳು ಒಂದೇ ಆಗಿ ಕಂಡರೂ ಅದರಲ್ಲೆರಡು ಭಾಗಗಳಿದ್ದು ಪ್ರತಿಯೊಂದರಲ್ಲೂ ಒಂದೊಂದು ಬೀಜವುಂಟು. ಕಾಳಿನ ಆಕಾರ ತೀರಾ ಚಿಕ್ಕದಾದುದರಿಂದ ಇಷ್ಟುಮಟ್ಟಿಗೆ ಕೂಲಂಕಷವಾಗಿ ಯಾರೂ ನೋಡುವುದಿಲ್ಲ. ಜೀರಿಗೆಯ ಬೀಜಗಳಲ್ಲಿ ಪ್ರತಿಶತ ಎರಡರಿಂದ ನಾಲ್ಕರಷ್ಟು ಪ್ರಮಾಣದಲ್ಲಿ ಒಂದು ಪ್ರಕಾರದ ಕಹಿ ತೈಲ ಹೊರಡುತ್ತದೆ. ತಾಜಾ ಎಣ್ಣೆ ಹಳದಿ ವರ್ಣದ್ದಿದ್ದರೂ ಕೆಲ ಸಮಯದ ನಂತರ ಕಪ್ಪಾಗಿಬಿಡುತ್ತದೆ. ಇದರಲ್ಲಿ "ಕ್ಯುಮಿನಾಲ್ಡಿಹೈಡ್" ಎಂಬ ಪ್ರಮುಖ ರಸಾಯನ ಉಂಟು. ಇದರಿಂದಲೇ ಅಡಿಗೆಗೆ ಸುವಾಸನೆ ಬರುವುದು. ಅಲ್ಲದೆ ಇದರಲ್ಲಿ ಔಷಧೀಯ ಗುಣಧರ್ಮಗಳೂ ಉಂಟು. ಪರಿಮಳ ದ್ರವ್ಯಗಳನ್ನು ತಯಾರಿಸಲೂ ಆಲ್ಕೋಹಾಲ್ ಪೇಯಗಳಿಗೆ ಸುವಾಸನೆ ತರುವುದಕ್ಕೂ ಇದನ್ನು ಉಪಯೋಗಿಸಲಾಗುತ್ತದೆ. "ಕ್ಯುಮಿನ್" ಎಂಬ ಇನ್ನೊಂದು ರಸಾಯನವು ನಪುಂಸಕತ್ವ ತರಿಸಬಲ್ಲದು.

ಕರಿಜೀರಿಗೆ (ಬ್ಲ್ಯಾಕ್ ಕ್ಯುಮಿನ್) ಅಥವಾ "ಶಾಹ್‌ಜೀರಿಗೆ" ಎಂಬುದು ಇನ್ನೊಂದು ಪ್ರಕಾರದ್ದು. ಸಂಸ್ಕೃತದಲ್ಲಿದಕ್ಕೆ "ಉಪಕುಂಚಿಕಾ" ಎಂದು ಹೆಸರು. ಸಸ್ಯಶಾಸ್ತ್ರದಲ್ಲಿ "ನೈಜೆಲ್ಲಾ ಸೆಟೈವಾ" ಎಂದು ಹೆಸರಿಸಿ "ರನನ್‌ಕ್ಯುಲೆಸಿ" ಎಂಬ ಕುಟುಂಬಕ್ಕೆ ಇದನ್ನು ಸೇರಿಸಲಾಗಿದೆ. ಇದನ್ನು ಬಯಲು ಪ್ರದೇಶಗಳಲ್ಲಿ ಎಪ್ರಿಲ್-ಮೇ ತಿಂಗಳುಗಳಲ್ಲಿ ಬೆಳೆದುಕೊಳ್ಳುತ್ತಾರೆ. ಕರಿಜೀರಿಗೆ ಇದೀಗ ಭಾರತದಿಂದ ಹೊರದೇಶಗಳಿಗೆ ಕಳಿಸಲ್ಪಡುತ್ತಿದೆಯಾದರೂ ಇಜಿಪ್ತ್ ಹಾಗೂ ದ.ಯುರೋಪದ ಭಾಗದಿಂದಲೇ ಈ ಸಸ್ಯವು ನಮ್ಮ ದೇಶವನ್ನು ಪ್ರವೇಶಿಸಿದೆ. ಕರಿಜೀರಿಗೆ ಖಾರ ಹಾಗೂ ಸುವಾಸನೆಯಲ್ಲಿ ಪ್ರಖರವಾಗಿರುತ್ತದೆ. ಮಾಂಸಾಹಾರಿ ಪದಾರ್ಥಗಳಲ್ಲಿಯೂ ಉಪ್ಪಿನಕಾಯಿ ಮಸಾಲೆಯಲ್ಲೂ ಇದನ್ನು ಉಪಯೋಗಿಸುವದು ಹೆಚ್ಚು. ಎಳ್ಳುಕಾಳುಗಳೊಡನೆ ಇದನ್ನೂ ಬೆರೆಸಿ ಬೇಕರಿ ಪದಾರ್ಥಗಳಲ್ಲಿಯೂ ತುಸುಮಟ್ಟಿಗೆ ಉದುರಿಸುತ್ತಾರೆ. ಫ್ರಾನ್ಸ್ ದೇಶದವರಂತೂ ಕರಿಜೀರಿಗೆಯನ್ನು ಕರಿಮೆಣಸಿನ ಪರ್ಯಾಯವಾಗಿಯೆ ಬಳಸುವರು.

ಮೈರಿಸ್ಟಿಕ್ ಆಮ್ಲ ಹಾಗೂ ಟೆರ್‌ಪೆನಿಕ್ ಆಮ್ಲಗಳೂ ಈ ಬೀಜಗಳ ಎಣ್ಣೆಯಲ್ಲಿ ಕೂಡಿಕೊಂಡಿರುವುದರಿಂದ ಹಸಿವು ಹೆಚ್ಚಿಸಲು ಜಠರದಲ್ಲಿನ ಗ್ರಂಥಿಗಳನ್ನು ಪ್ರಚೋದಿಸುತ್ತವೆ. ವಿಷಮಜ್ವರಕ್ಕೂ ಇದು ಔಷಧಿಯಾಗಬಲ್ಲದು. ತಿಲತೈಲದಲ್ಲಿ ಜೀರಿಗೆಯ ಪುಡಿಯನ್ನು ಬೆರೆಸಿ ತ್ವಚೆಗೆ ಸವರಿಕೊಂಡು ಸ್ನಾನ ಮಾಡಿದರೆ ಚರ್ಮ ರೋಗಗಳೇ ಬರುವುದಿಲ್ಲವಂತೆ. ಚಿಕ್ಕ ಹುಣ್ಣುಗಳಿಗೆ ಸವರಿದರೂ ಗುಣವಾಗುವುದಂತೆ. ಇನ್ನೂ ಕೆಲವೊಂದು ಪದಾರ್ಥಗಳೊಡನೆ ಸೇರಿಸಿ ತಯಾರಿಸಿದ ಔಷಧಿಯು ಚೇಳು ಹಾಗೂ ಹಾವಿನ ಕಡಿತಕ್ಕೆ ಮದ್ದಾಗಬಲ್ಲದೆಂದು ಆಯುರ್ವೇದದ ಮೂಲಪುರುಷ ಸುಶ್ರುತರೇ ಹೇಳಿದ್ದಾರೆ. ಜೀರಿಗೆಯ ವಾಸನೆಯನ್ನು ಮೂಸಿದರೆ ನೆಗಡಿ ಹಾಗೂ ಮೂಗಿನ ಇನ್ನಿತರ ರೋಗಗಳೂ ಕಡಿಮೆಯಾಗಬಲ್ಲವು. ಇತ್ತೀಚಿನ ಸಂಶೋಧನಗಳು ಕರಿಜೀರಿಗೆಯು ಕ್ಯಾನ್ಸರ್ ರೋಗಗಳಿಗೂ ಔಷಧಿಯಾಗಿ ಪರಿಣಮಿಸುವದೆಂದು ತಿಳಿಸಿವೆ.

ಔಷಧೀಯ ಗುಣಗಳಲ್ಲದೆ ಜೀರಿಗೆಯಲ್ಲಿ ಕೀಟನಾಶಕ ಗುಣಗಳೂ ಇವೆ. ಅತಿ ಬೆಲೆಬಾಳುವ ರೇಶ್ಮೆ ಹಾಗೂ ಉಣ್ಣೆಯ ಬಟ್ಟೆಗಳ ಮಡಿಕೆಗಳಲ್ಲಿ ಜೀರಿಗೆಕಾಳನ್ನು ಉದುರಿಸಿಟ್ಟರೆ ಕೀಟಗಳ ಭಯವಿಲ್ಲ. ●

# ವಿದ್ಯಾರ್ಥಿಗಳೇ, ಯಶಸ್ಸು ಕನಸಲ್ಲ!

ಶ್ರೀ ಗುರೂಜಿ ಕರುಣಿಸಿದ
ವಿದ್ಯಾರ್ಥಿಗಳ ಯಶಸ್ಸಿನ ಕೈಪಿಡಿ



# ವಿದ್ಯಾರ್ಥಿಗಳೇ, ಯಶಸ್ಸು ಕನಸಲ್ಲ!

ದಕ್ಷಿಣ ಕನ್ನಡ ಜಿಲ್ಲೆಯ ಉಡುಪಿಯ ಬಳಿಯ ಸಾಲಿಗ್ರಾಮದ 'ಡಿವೈನ್ ಪಾರ್ಕ್' ಸ್ವಾಮಿ ವಿವೇಕಾನಂದರ ದಿವ್ಯ ಲೀಲಾಕ್ಷೇತ್ರ. ಶ್ರೀ ಗುರೂಜಿ ಇಲ್ಲಿಯ ಮಾತನಾಡುವ ದೇವರು ಎನ್ನಲಾಗುತ್ತಿದೆ. ಸ್ವಾಮಿ ವಿವೇಕಾನಂದರ ಅಮರವಾಣಿಗಳನ್ನು ಡಾ. ಎ. ಚಂದ್ರಶೇಖರ ಉಡುಪರು ತಮ್ಮ ಮಾರ್ಗದರ್ಶನ ಬಯಸಿಬಂದ ವಿದ್ಯಾರ್ಥಿಗಳಿಗೆ ಹಾಗೂ ಇನ್ನಿತರ ಜಿಜ್ಞಾಸುಗಳಿಗೆ ಹೊಸ ಅರ್ಥವಂತಿಕೆಯಿಂದ ಹೇಳುವುದರ ಮೂಲಕ ಅವರಲ್ಲಿ ಜೀವನೋತ್ಸಾಹವನ್ನು ತುಂಬುವ ಕೆಲಸದಲ್ಲಿ ತೊಡಗಿದ್ದಾರೆ. ಅನೇಕ ವಿದ್ಯಾರ್ಥಿಗಳ ಪ್ರಶ್ನೆ-ಸಮಸ್ಯೆಗಳಿಗೆ ಅವರಿತ್ತ ಉತ್ತರ ಪರಿಹಾರವನ್ನು ಅಚ್ಚುಕಟ್ಟಾಗಿ ಸಂಕಲಿಸಿ 'ವಿದ್ಯಾರ್ಥಿಗಳೇ, ಯಶಸ್ಸು ಕನಸಲ್ಲ!' ಎಂಬ ಪುಸ್ತಕ ರೂಪದಲ್ಲಿ ಹೊರತರಲಾಗಿದೆ. ವರ್ಣಚಿತ್ರಗಳಿಂದೊಡಗೂಡಿದ ಈ ಸದ್ಗ್ರಂಥ ಕಳೆದ ಒಂಬತ್ತು ತಿಂಗಳ ಅವಧಿಯಲ್ಲಿ ಏಳು ಬಾರಿ ಪ್ರಕಟಗೊಂಡು ಸುಮಾರು ೩೦,೦೦೦ಕ್ಕೂ ಹೆಚ್ಚು ಪ್ರತಿಗಳು ಮಾರಾಟವಾಗಿವೆ.

ಇಲ್ಲಿ ಈ ಜನಪ್ರಿಯ ಪುಸ್ತಿಕೆಯ ಆಯ್ದ ಅಂಶಗಳನ್ನು ವಿದ್ಯಾರ್ಥಿ ಲೋಕದ ಪ್ರಯೋಜನಕ್ಕಾಗಿ ಪ್ರಕಟಿಸುತ್ತಿದ್ದೇವೆ.



ಎಲ್ಲರಲ್ಲೂ ಸುಪ್ತವಾಗಿರುವ ಆ ಸರ್ವಶಕ್ತತೆಯ - ಪರಿಪೂರ್ಣತೆಯ ಅಭಿವ್ಯಕ್ತಿಗೆ ದಾರಿ ಮಾಡಿಕೊಡುವುದೇ ಶಿಕ್ಷಣದ ಮೂಲೋದ್ದೇಶ. ಚಿನ್ನದ ಅದಿರನ್ನು ಸಂಸ್ಕರಿಸಿ ಶುದ್ಧ ಚಿನ್ನವನ್ನು ಪಡೆಯುವಂತೆ, ಶಿಕ್ಷಣದ ವಿಧಿ-ವಿಧಾನಗಳೂ, ಕ್ರಿಯೆ-ಪ್ರಕ್ರಿಯೆಗಳೂ ಅಂತರಂಗ ಸಂಸ್ಕರಣಗೈದು ವ್ಯಕ್ತಿಯ ಅಂತರ್ಯದಲ್ಲಿನ ಪಶುತ್ವವನ್ನು ನೀಗಿಸಿ, ಆತ್ಮಶಕ್ತಿ ಹೊರಹೊಮ್ಮುವಂತೆ ಮಾಡುತ್ತವೆ. ಅದರಿಂದಾಗಿ ವ್ಯಕ್ತಿಯ ಚಾರಿತ್ರ್ಯ ಸಂವರ್ಧಿಸುತ್ತದೆ, ಪ್ರತಿಭೆ ಅರಳುತ್ತದೆ, ಕೌಶಲ ವೃದ್ಧಿಸುತ್ತದೆ, ಆತ್ಮವಿಶ್ವಾಸ ಕುದುರುತ್ತದೆ, ಮಹತ್ತನ್ನು ಸಾಧಿಸಬೇಕೆಂಬ ಕೆಚ್ಚು ಉಕ್ಕುತ್ತದೆ, ತನ್ನ ಕಾಲ ಮೇಲೆ ತಾನು ನಿಂತು ಇನ್ನೊಬ್ಬರಿಗೆ ಒಳಿತನ್ನುಂಟುಮಾಡಬೇಕೆಂಬ ತುಡಿತ ಮಿಡಿಯುತ್ತದೆ. ಹೀಗೆ ವ್ಯಕ್ತಿಯ ಸರ್ವಾಂಗೀಣ ಪ್ರಗತಿಕಾರಕವಾಗಿ- ದೈಹಿಕ, ಬೌದ್ಧಿಕ, ನೈತಿಕ, ಆಧ್ಯಾತ್ಮಿಕ ವಿಕಾಸಕ್ಕೆಡೆಮಾಡಿ, ಆತ ನಲಿವು, ಗೆಲವು, ಚೆಲುವುಗಳಿಂದ ಚೆನ್ನಾಗಿ ಬದುಕುವಂತೆ ಮಾಡುವುದೇ ಶಿಕ್ಷಣ. ಇಂಥ ಯೋಗ್ಯ ವ್ಯಕ್ತಿನಿರ್ಮಾಣವೇ ಶಿಕ್ಷಣದ ಯಾವತ್ತೂ ಧ್ಯೇಯೋದ್ದೇಶ.

### ವಿದ್ಯಾರ್ಥಿ ಎಂದರೆ ಯಾರು?

ವಿದ್ಯೆಯನ್ನು ಅಭ್ಯಸಿಸುವವನು ಅಥವಾ ವಿದ್ಯಾರ್ಜನೆಯ ಉದ್ದೇಶ ಹೊಂದಿರುವವನು ವಿದ್ಯಾರ್ಥಿ ಎನಿಸುತ್ತಾನೆ. ಶಿಕ್ಷಣ ಅಥವಾ ವಿದ್ಯಾರ್ಜನೆಯು ಜೀವನಪರ್ಯಂತ ನಡೆಯುವ ಪ್ರಕ್ರಿಯೆ ಆದುದರಿಂದ, ವಿದ್ಯಾರ್ಥಿಗೆ ವಯೋಮಾನದ ಮಿತಿಯಿಲ್ಲ. ಕಲಿಯುವ ಮನಸ್ಸಿರುವ

ಎಲ್ಲರೂ-ಹಣ್ಣು ಗಡ್ಡದ ಮುದುಕನೇ ಇರಲಿ, ಕಾಲೇಜಿನ ಹಿರಿಯ ಪ್ರಾಧ್ಯಾಪಕರೇ ಇರಲಿ, ನಿಜ ವಾಗಿಯೂ ವಿದ್ಯಾರ್ಥಿಗಳೇ.

ವಿದ್ಯಾರ್ಜನೆಯೇ ವಿದ್ಯಾರ್ಥಿ ಜೀವನದ ಗುರಿ. ಈ ವಿದ್ಯೆ ಎಂಬುದು ಕೇವಲ ಹೊಟ್ಟೆಪಾಡಿಗೆ ದಾರಿ ಮುಡುವ ವಿದ್ಯೆ ಮಾತ್ರ ಆಗಿರದೆ ಮಾನವನನ್ನು ಮಾಧವನನ್ನಾಗಿಸುವ ವಿದ್ಯೆ ಆಗಬೇಕು. ಪರಿಪೂರ್ಣತೆಯನ್ನು ಉದ್ದೀಪನಗೊಳಿಸಿಕೊಂಡು, ತಮ್ಮ ವ್ಯಕ್ತಿತ್ವದ ಸರ್ವಾಂಗೀಣ ಅಭಿವೃದ್ಧಿಗೆ ಕಾರಣರಾಗಿ ಯೋಗ್ಯ ವ್ಯಕ್ತಿಗಳಾಗುವುದೇ ವಿದ್ಯಾರ್ಥಿ ಜೀವನದ ಗುರಿ.

ಇಡೀ ವಿದ್ಯಾರ್ಥಿಜೀವನದ ಗುರಿ ಒಂದು ಶಿಖರವಾದರೆ ಪ್ರತಿ ವರ್ಷವರ್ಷದ ವಿದ್ಯಾಭ್ಯಾಸ ಎಂದರೆ ಆ ಗುರಿಯೆಡೆಗೆ ಅಂದರೆ ಆ ಶಿಖರದೆಡೆಗೆ ಸಾಗಿಸುವ ಮೆಟ್ಟಿಲುಗಳಿದ್ದಂತೆ. ಪ್ರತಿಯೊಂದು ಮೆಟ್ಟಿಲನ್ನು ಸಮರ್ಪಕವಾಗಿ ಏರಿದಾಗ ಮಾತ್ರ ಶಿಖರವನ್ನು ತಲಪುವುದು ಸಾಧ್ಯವಾಗುವಂತೆ, ವರ್ಷವರ್ಷದ ವಿದ್ಯಾಭ್ಯಾಸ ಸಾಂಗವಾದಾಗ ಮಾತ್ರ ವಿದ್ಯಾರ್ಥಿ ಜೀವನದ ಗುರಿ ಸಾಧಿಸಲು ಸುಲಭಸಾಧ್ಯವಾಗುತ್ತದೆ.

## ಕಲಿಕೆಯ ದಾರಿ

ಸಾಮಾನ್ಯವಾಗಿ ಹೊಟ್ಟೆಪಾಡಿನ ದೃಷ್ಟಿಯಿಂದಲೇ-ನಾಳೆ ಡಾಕ್ಟರನಾಗಬೇಕು, ಬ್ಯಾಂಕ್ ಮೆನೇಜರನಾಗಬೇಕು, ಸಾಹಿತಿಯಾಗಬೇಕು..... ಎಂಬೆಲ್ಲ ದೂರಾಲೋಚನೆಗಳಿಂದಲೇ ಕಲಿಕೆಯ ದಾರಿಯನ್ನು ವಿದ್ಯಾರ್ಥಿ ಆರಿಸಿಕೊಳ್ಳುತ್ತಾನೆ. ಡಾಕ್ಟರನಾಗುವ ಮಹತ್ವಾಕಾಂಕ್ಷೆ ಇರುವ ವಿದ್ಯಾರ್ಥಿ ವಿಜ್ಞಾನಾಸಕ್ತನಾದರೆ ಅಥವಾ ವಿಜ್ಞಾನ ವಿಚಾರವನ್ನಾಯ್ದುಕೊಂಡರೆ, ಬ್ಯಾಂಕ್ ಮೆನೇಜರನಾಗುವ ಹಂಬಲ ಇರುವವ ವಾಣಿಜ್ಯಶಾಸ್ತ್ರವನ್ನಾಯ್ದುಕೊಳ್ಳುತ್ತಾನೆ. ಸಾಹಿತಿಯಾಗಬಯಸುವವ ಭಾಷಾಧ್ಯಯನಕ್ಕೆ ತೊಡಗುತ್ತಾನೆ. ಇಲ್ಲಿ ಶ್ರೇಷ್ಠ ವೈದ್ಯನಾಗಬೇಕು, ಉತ್ಕೃಷ್ಟ ಮೆನೇಜರನಾಗಬೇಕು, ಉದ್ದಾಮ ಸಾಹಿತಿಯಾಗಬೇಕು.... ಎಂಬುದು ಅವರ ಸುದೂರ ಗುರಿ ಆದರೆ, ವರ್ಷವರ್ಷದ ಸಮೀಪದ ಗುರಿ

ವಿದ್ಯಾರ್ಥಿಗಳೇ, ಯಶಸ್ಸು ಕನಸಲ್ಲ !



ಯುವಜನತೆಗೆ ಆತ್ಮಶಕ್ತಿ ಜಾಗೃತಿಯ ಕರೆ



ವಿದ್ಯಾರ್ಥಿಗಳೇ,
ಯಶಸ್ಸು ಕನಸಲ್ಲ!

ಶ್ರೀ ಗುರೂಜ ಕರುಣಿಸಿದ
ವಿದ್ಯಾರ್ಥಿಗಳ ಕೈಪಿಡಿ

ಪ್ರಕಾಶಕರು:
ವಿವೇಕ ಪ್ರಕಾಶನ
ಡಿವೈನ್ ಪಾರ್ಕ್ ಟ್ರಸ್ಟ್ (ರಿ)
ಸಾಲಿಗ್ರಾಮ-೫೭೬ ೨೨೫
ದಕ್ಷಿಣ ಕನ್ನಡ
ಪುಟಗಳು: ೧೨೮
ಬೆಲೆ: ರೂ. ೫-೦೦

# ನೆನಪಿಡಿ:
# ಯಶಸ್ಸು ಸಿಗುವುದು
# ಅರಿವಿನಿಂದಲ್ಲ- ಅನುಷ್ಠಾನದಿಂದ !

**ಕಾ**ಶಿಗೆ ಹೋಗುವ ದಾರಿಯನ್ನು ಅರಿತೊಡನೆ ಕಾಶಿಗೆ ಹೋದಂತಾಗುವುದೇನು ? ಆಗಲಾರದು ತಾನೇ ? ಅದೇ ರೀತಿ ಈ ಪುಸ್ತಕವನ್ನು ಬರಿದೆ ಓದಿ, ಇಲ್ಲಿ ಉಲ್ಲೇಖಿಸಿರುವ ತತ್ವಗಳನ್ನೂ, ಯಶಸ್ಸಿನ ಶಿಖರದೆಡೆಗೆ ಸಾಗುವ ಹೆದ್ದಾರಿಯನ್ನೂ ಅರಿತೊಡನೆ ಯಶಸ್ಸು ನಿಮ್ಮದಾಗದು. ಆ ತತ್ವಗಳನ್ನು ಮೈಗೂಡಿಸಿಕೊಂಡು ಅನುಷ್ಠಾನಕ್ಕೆ ತಂದು, ಆ ದಾರಿಯಲ್ಲಿ ಬಿಡದೆ ಸಾಗುವ ನಿಷ್ಠೆ ನಿಮ್ಮದಾದಲ್ಲಿ ಮಾತ್ರ ಯಶಸ್ಸು ನಿಮಗೊಲಿಯುತ್ತದೆ.

ಆದ್ದರಿಂದ ಅಜ್ಞಾನ, ಅಶ್ರದ್ಧೆ, ಅನಾಸಕ್ತಿಗಳ ಕವಚಗಳನ್ನೆಲ್ಲ ಕಳಚಿ, ಜಡತೆ, ಆಲಸ್ಯಗಳ ಬಂಧನಗಳನ್ನು ಕಿತ್ತೊಗೆದು ಅತುಲ ಕೆಚ್ಚು ನೆಚ್ಚುಗಳಿಂದ ಇಲ್ಲಿ ಉಲ್ಲೇಖಿಸುವ ಸಾಧನೆಯ ಸಾಹಸಕ್ಕೆ ಇಂದೇ ಮುನ್ನುಗ್ಗುವಂತಾದಲ್ಲಿ ಮಾತ್ರ ಯಶಸ್ಸಿನ ಶಿಖರದೆಡೆಗೆ ನೀವು ಸಾಗಬಲ್ಲಿರಿ- ಮರೆಯದಿರಿ.

ಆಯಾಯ ವರ್ಷದ ವಿದ್ಯಾಭ್ಯಾಸದಲ್ಲಿ ಅವರವರ ಆಸಕ್ತಿಯ ವಿಚಾರದಲ್ಲಿ ಅಂದರೆ ವೈದ್ಯನಾಗುವವ ವಿಜ್ಞಾನದಲ್ಲಿ, ಬ್ಯಾಂಕ್ ಮೆನೇಜರನಾಗುವವ ವಾಣಿಜ್ಯಶಾಸ್ತ್ರದಲ್ಲಿ, ಸಾಹಿತಿಯಾಗಬಯಸುವವ ಸಾಹಿತ್ಯದಲ್ಲಿ ಪರಿಪೂರ್ಣತೆಯನ್ನು ಸಾಧಿಸುವುದೇ ಆಗಿದೆ. ಈಗಿನ ಶಿಕ್ಷಣ ಕ್ರಮದಲ್ಲಿ ಪರೀಕ್ಷೆಯಲ್ಲಿ ಗಳಿಸುವ ಅಂಕಗಳೇ ಉತ್ಕೃಷ್ಟತೆಯ ಅಳತೆಗೋಲಾ ದುದರಿಂದ ಆಯಾಯ ವರ್ಷದ ಅವರ ವಿಶೇಷ ಆಸಕ್ತಿಯ ವ್ಯಾಸಂಗ ವಿಚಾರಗಳಲ್ಲಿ ಅತಿ ಹೆಚ್ಚು ಅಂಕಗಳನ್ನು ಗಳಿಸುವುದೇ ಅವರ ವಾರ್ಷಿಕ ಗುರಿ ಆಗಿರಬೇಕು.

**ಗುರಿ ಇರಲಿ.....**

ಗುರಿ ಇಲ್ಲದ ಬದುಕು ಒರೆ ಇಲ್ಲದ ಕತ್ತಿ ಯಂತೆ, ಚುಕ್ಕಾಣಿಯಿಲ್ಲದ ಹಡಗಿನಂತೆ. ಅನಾಹು ತವನ್ನು ಆಹ್ವಾನಿಸುವಂಥದು, ಕೇಡನ್ನುಂಟುಮಾ ಡುವಂಥದು. ಬಸ್ಸನ್ನೇರುವ ಪಯಣಿಗನಿಗೆ ತಾನೆ ಲ್ಲಿಗೆ ಹೋಗಬೇಕೆಂಬುದು ತಿಳಿಯಬೇಕಾದಂತೆಯೇ ವಿದ್ಯಾರ್ಥಿಗೆ ತನ್ನ ಗುರಿ ಏನು ಎಂಬುದರ ತಿಳಿವು ಇರಲೇಬೇಕು. ಈಗಿನ ಅದೆಷ್ಟೋ ವಿದ್ಯಾರ್ಥಿಗಳಿಗೆ ನಿರ್ದಿಷ್ಟ ಗುರಿಯೇ ಇಲ್ಲ- ತಾವು ಯಾಕೆ ಶಾಲೆ-ಕಾಲೇಜುಗಳಿಗೆ ಹೋಗುತ್ತಿದ್ದೇವೆಂದೇ ಅವ ರಿಗೆ ತಿಳಿಯದು ! ಗೊತ್ತುಗುರಿ ಇಲ್ಲದ ಅವರ ಮರ್ಕಟ ಮನಸ್ಸೇ ಅವರನ್ನು ದುಶ್ಚಟಗಳ ದಾಸರ ನ್ನಾಗಿಸಿ, ಸಮಾಜಘಾತಕ ಚಟುವಟಿಕೆಗಳಲ್ಲಿ ತೊಡ ಗಿಸುತ್ತಿದೆ ಎಂಬುದು ವಿಚಿತ್ರವಾದರೂ ಸತ್ಯ !

ಗುರಿ ನಿರ್ಧಾರ ಎನ್ನುವುದು ಕೇವಲ ಭ್ರಮೆ-ಕಲ್ಪನೆಗಳ ನೆರಳಿನಲ್ಲಾಗುವ ಕೆಲಸ ಅಲ್ಲ; ಅದು ಅವರವರ ಈ ವರೆಗಿನ ಸಾಧನೆ-ಆಸಕ್ತಿಗಳ ಹಿನ್ನೆಲೆಯಲ್ಲೇ ಆಗಬೇಕಾದ ಕೆಲಸ. ಅವರಿವರ ಅನುಕರಣೆ-ಪ್ರೇರಣೆಗಳಲ್ಲಿ ಪ್ರಯೋಜನಕ್ಕೆ ಬಾರವು. ಗಣಿತದಲ್ಲಿ ಕಳೆದ ವರ್ಷ ಪಾಸು ಮಾರ್ಕನ್ನಷ್ಟೇ ಗಳಿಸಿದ ವಿದ್ಯಾರ್ಥಿ ಈ ವರ್ಷ ಲೆಕ್ಕದಲ್ಲಿ ಹೆಚ್ಚು ಮಾರ್ಕು ಗಳಿಸಬೇಕು ಎಂದೆಣಿ ಸಿದರೆ ಅದು ಅಸ್ಪಷ್ಟ ಗುರಿಯಾದೀತು. ನೂರಕ್ಕೆ ನೂರು ಮಾರ್ಕು ಗಳಿಸಬೇಕು ಎಂದೆಣಿಸಿದರೆ ಅದು ಅಸಮರ್ಪಕ ಗುರಿಯೂ ಆದೀತು. ಜಗಲಿ ಹಾರದವ ಗಗನ ಹಾರುವ ಮಾತಲ್ಲಿ ಅಲ್ಲವೇ ? ಆದ್ದರಿಂದ ಅಂಥ ವಿದ್ಯಾರ್ಥಿ ಮೊದಲು ಗಣಿತ ದಲ್ಲಿ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾಗುವ ಗುರಿ ಇಟ್ಟುಕೊಳ್ಳಬೇಕು. ಮೊದಲ ಪರೀಕ್ಷೆಯಲ್ಲಿ ಆತ ಅದನ್ನು ಸಾಧಿಸಿದಲ್ಲಿ ಆ ಗುರಿಗೆ ಭಡ್ತಿಕೊಟ್ಟು ಮುಂದಿನ ಪರೀಕ್ಷೆಯಲ್ಲಿ ಶೇಕಡಾ ೮೦ ಅಂಕ ಗಳಿಸುವ ಗುರಿ ಇಟ್ಟುಕೊಳ್ಳಬೇಕು. ಅದು ಕೈಗೂ ಡಿದಾಗ ಮಾತ್ರ ಅಂತಿಮ ಪರೀಕ್ಷೆಯಲ್ಲಿ ನೂರಕ್ಕೆ

ನೂರು ಅಂಕಗಳಿಸಬೇಕೆಂಬ ಆತನ ಗುರಿಗೆ ಬೆಲೆ ಬಂದೀತು ಅಷ್ಟೇ. ಆದ್ದರಿಂದ ಕೇವಲ ಭ್ರಮಾಧೀನರಾಗಿ, ಹಗಲುಗನಸು ಕಾಣುತ್ತ ಗುರಿ ನಿರ್ಧಾರ ಮಾಡುವುದರಿಂದೇನೂ ಫಲವಿಲ್ಲ- ತಿಳಿಯಿರಿ.

ನಿಖರ ಗುರಿಯ ಅಚಲ ನಿಲುವು'

ನೀವು ಕಲಿಯುವ ಒಂದು ವಿಚಾರದಲ್ಲಿ ಮಾತ್ರ ಅಲ್ಲ, ಎಲ್ಲ ವಿಚಾರಗಳಲ್ಲೂ, ಪಠ್ಯೇತರ ಚಟುವಟಿಕೆಗಳಲ್ಲೂ ವರ್ಷದ ಮೊದಲಿಗೇ 'ಈ ವರ್ಷ ಇದರಲ್ಲಿ ನಾನಿದನ್ನು ಸಾಧಿಸಬೇಕು' ಎಂದು ನಿರ್ಧಾರ ಮಾಡಿ ಒಂದು ಪುಸ್ತಕದಲ್ಲಿ ಅವುಗಳನ್ನೆಲ್ಲ ಬರೆದಿಡಿ. ಹೀಗೆ ಬರೆದಿಡುವುದರಿಂದ ಬರೆದಿಟ್ಟದ್ದನ್ನು ಆಗಾಗ ನೋಡಲು ಅನುಕೂಲವಾಗಿ, ಪದೇ ಪದೇ ಗುರಿಯನ್ನು ನೆನಪಿಸಿಕೊಳ್ಳಲು ಸಾಧ್ಯವಾಗುತ್ತದೆ. ಇದರಿಂದ ಆ ಗುರಿಯ ಚಿತ್ರ ನಿಮ್ಮ ಮನದಲ್ಲಿ ಸ್ಪಷ್ಟವಾಗಿ ಮೈದಳೆಯಲು ಅನುಕೂಲವಾಗಿ, ಹೊಗೆಯಾಡಿ ಆಡಿ ಧಗ್ಗೆಂದು ಹೊತ್ತಿಕೊಳ್ಳುವ ಬೆಂಕಿಯಂತೆ, ಸಾಧಿಸುವ ಉತ್ಕಟೇಚ್ಛೆ ನಿಮ್ಮಲ್ಲಿ ಹೊಮ್ಮಲು ಪ್ರೇರಕವಾಗುತ್ತದೆ. ನಿಖರವಾದ ಗುರಿಯ ಅಚಲ ನಿಲುವು ನಿಮ್ಮಲ್ಲಿ ಮೂಡಿತೆಂದರೆ ವರ್ಷಾಂತ್ಯದ ಸಾಧನೆಯ ಫಸಲಿಗೆ ಬೀಜ ಬಿತ್ತಿದಂತೆಯೇ ಎಂಬುದನ್ನು ಮರೆಯದಿರಿ.

ದೈಹಿಕ, ಬೌದ್ಧಿಕ, ನೈತಿಕ, ಆಧ್ಯಾತ್ಮಿಕ- ಹಸ್ತ-ಶಿರ-ಹೃದಯ(Hand, Head, Heart)ಗಳ ದೃಷ್ಟಿಯಲ್ಲಿ ವಿಕಾಸವಾಗಿರುವ ಅಥವಾ ವ್ಯಕ್ತಿತ್ವದ ಸರ್ವಾಂಗೀಣ ಅಭಿವೃದ್ಧಿಯಾಗಿರುವ ವಿದ್ಯಾರ್ಥಿಯನ್ನು ಶ್ರೇಷ್ಠ ವಿದ್ಯಾರ್ಥಿ ಎನ್ನಬಹುದು. ಹೆಚ್ಚು ಅಂಕ ಗಳಿಸುವುದಾಗಲಿ, ರ್‍ಯಾಂಕ್

## ಯಶಸ್ಸು ನನಸಾಗಲು

ಗುರಿ ಸ್ಪಷ್ಟವಾಗಿರಬೇಕು.

ದಾರಿ ಸಮರ್ಪಕವಾಗಿರಬೇಕು.

ದಾರಿಗ ಸಮರ್ಥನಾಗಿರಬೇಕು.

ಬರುವುದಾಗಲಿ, ವಿದ್ಯಾರ್ಥಿಯ ಬೌದ್ಧಿಕ ಔನ್ನತ್ಯಕ್ಕೆ ಪುರಾವೆ ಆದಾವೇ ಹೊರತು ಆತನ ಸರ್ವಾಂಗೀಣ ಅಭಿವೃದ್ಧಿಯ ದ್ಯೋತಕ ಆಗಲಾರವು. ಆದ್ದರಿಂದ ಕೇವಲ ಅಂಕಗಳ ಆಧಾರದ ಮೇಲೆ ವಿದ್ಯಾರ್ಥಿಯ ಮಟ್ಟವನ್ನಳೆಯುವುದರಿಂದ ಆತನ ಅಭಿವೃದ್ಧಿಯ ಪೂರ್ಣ ನೋಟವಂತೂ ದೊರೆಯಲಾರದು. ಇನ್ನು ಆತನ ಕಲಿಕೆ ಮಾಧ್ಯಮಕ್ಕೂ, ಶಾಲೆಗೂ, ಆತನ ಉತ್ಕೃಷ್ಟತೆಗೂ ಏನೇನೂ ಸಂಬಂಧವಿಲ್ಲ. ಈ ಉತ್ಕೃಷ್ಟತೆ ಎಂಬುದು ವಿದ್ಯಾರ್ಥಿಯ ಅಂತರಂಗ ವಿಕಾಸದ ಪಕ್ವಫಲವೇ ಹೊರತು ಹೊರಗಿನಿಂದ ಹೇರುವ ಸರಕಲ್ಲ.

### ಯಶಸ್ಸಿನ ಅಳತೆಗೋಲು

ವಿದ್ಯಾರ್ಥಿ ಜೀವನದ ಉದ್ದೇಶವೇ ವ್ಯಕ್ತಿಯ ಹಸ್ತ-ಶಿರ-ಹೃದಯಗಳಿಗೆ ಸಂಬಂಧಿಸಿದಂತೆ ಬೌದ್ಧಿಕ (ಆಲೋಚನಾತ್ಮಕ), ನೈತಿಕ ಹಾಗೂ ಆಧ್ಯಾತ್ಮಿಕ (ಭಾವನಾತ್ಮಕ), ದೈಹಿಕ (ಸೇವಾತ್ಮಕ) ವಿಕಸನ. ಪರೀಕ್ಷೆ ಎಂಬುದು ನಿಜವಾಗಿಯೂ ಈ ಬಗೆಯ ವಿಕಸನದ ಮೌಲ್ಯಮಾಪನಕ್ಕೊಂದು ಅವಕಾಶ ಅಷ್ಟೆ. ಆದರೆ ಇಂದಿನ ಶಿಕ್ಷಣ ಕ್ರಮದ ಪರೀಕ್ಷೆಗಳು ಕೇವಲ ಬೌದ್ಧಿಕ ಬೆಳವಣಿಗೆಯನ್ನಷ್ಟೇ- ವಿದ್ಯಾರ್ಥಿಯ ಬುದ್ಧಿಶಕ್ತಿಗಿಂತಲೂ ಸ್ಮರಣಶಕ್ತಿಯನ್ನಷ್ಟೇ- ಒರೆಗಲ್ಲಿಗೆ ಹಚ್ಚುವಂಥವು. ಹೀಗಾಗಿ ಅವು ವಿದ್ಯಾರ್ಥಿ ಜೀವನದ ಯಶಸ್ಸಿನ ಅಳತೆಗೋಲಾಗಲಾರವು. ಆದ್ದರಿಂದಲೇ ವಿದ್ಯಾರ್ಥಿ ಜೀವನದ ಯಶಸ್ಸು ಪರೀಕ್ಷೆಯ ಫಲಿತಾಂಶವನ್ನು ಹೊಂದಿಕೊಂಡು 'ಇಲ್ಲ.'

ಆದರೆ ಒಕ್ಕಣ್ಣ ರಾಜ್ಯದಲ್ಲಿ ಎರಡು ಕಣ್ಣಿರುವವರೂ ಒಂದನ್ನು ಮುಚ್ಚಿಕೊಳ್ಳಬೇಕಾದಂತೆ, ಇಂದಿನ ಪರಿಸ್ಥಿತಿಯಲ್ಲಿ ಪರೀಕ್ಷೆಯ ಫಲಿತಾಂಶದ ಆಧಾರದ ಮೇಲೇನೇ ವಿದ್ಯಾರ್ಥಿ ಜೀವನದ ಯಶಸ್ಸನ್ನು ಅಳೆಯುವುದರಿಂದ, ಸದ್ಯದ ಪರಿಸ್ಥಿತಿಯಲ್ಲಿ ವಿದ್ಯಾರ್ಥಿ ಜೀವನದ ಯಶಸ್ಸು ಪರೀಕ್ಷೆಯ ಫಲಿತಾಂಶವನ್ನು ಹೊಂದಿಕೊಂಡಿರುವುದು 'ಹೌದು.'

### ವಿಕಾಸದ ದ್ಯೋತಕ

ನಿಜವಾಗಿಯೂ ವಿದ್ಯಾರ್ಥಿಯ ಸರ್ವಾಂಗೀಣ ಅಭಿವೃದ್ಧಿಯೇ ವಿದ್ಯಾರ್ಥಿ ಜೀವನದ ಯಶಸ್ಸಿನ ಅಳತೆಗೋಲು. ವಿದ್ಯಾರ್ಥಿಯು ತನ್ನ ಕಲಿಕೆಯ ವಿಚಾರದಲ್ಲಿ ಅದೆಷ್ಟು ಆಸಕ್ತಿ ಬೆಳೆಸಿಕೊಂಡಿದ್ದಾನೆ? ಸ್ವತಂತ್ರವಾಗಿ ಯೋಚಿಸಿ ನಿರ್ಧಾರಕ್ಕೆ ಬರಬಲ್ಲ ಸಾಮರ್ಥ್ಯ ಅವನಲ್ಲಿ ಬಲಿತಿದೆಯೇ? ಮಾಡುವ ಕೆಲಸವನ್ನು ನಾಜೂಕಾಗಿ ಮಾಡುವ ಕೌಶಲ ಒಡಮೂಡಿದೆಯೇ? ಎಂಬುದು ಅವನ ಬೌದ್ಧಿಕ ವಿಕಾಸವನ್ನು ಸಾರಿದರೆ, ಗಟ್ಟಿ ಮುಟ್ಟಾದ ('ಕಬ್ಬಿಣದಂಥ ಮಾಂಸಖಂಡ, ಉಕ್ಕಿನಂಥ ನರಸಮುದಾಯ' ಇರುವ) ಶರೀರ ಇದೆಯೇ? ಊಟ ಉಪಚಾರಗಳಿಂದ ಆರೋಗ್ಯಪಾಲನೆ ಆಗುತ್ತಿದೆಯೇ? ಕೈಕಾಲುಗಳಲ್ಲಿ ಇನ್ನೊಬ್ಬರಿಗೆ ಉಪಕರಿಸಬೇಕು, ಸಮಾಜಸೇವೆಯಲ್ಲಿ ತೊಡಗಬೇಕು ಎಂಬ ತುಡಿತ ಮಿಡಿಯುತ್ತಿದೆಯೇ? ಎಂಬುದು ದೈಹಿಕ ವಿಕಾಸಕ್ಕೆ ಅಳತೆಗೋಲಾದರೆ, ನಡೆನುಡಿಯಲ್ಲಿ ಶಿಸ್ತು-ಸಂಯಮ, ಸತ್ಯಸಂಧತೆ, ಪ್ರಾಮಾಣಿಕತೆ, ವಿನಯ, ಸೌಜನ್ಯ, ಗುರುಹಿರಿಯರಿಗೆ ವಿಧೇಯತೆ, ಒಳಿತನ್ನು ಕಂಡು ಮೆಚ್ಚಿ ಪ್ರೋತ್ಸಾಹಿಸುವ ಗುಣ- ಮೊದಲಾದ ಉದಾತ್ತ ಮೌಲ್ಯಗಳು ಉಕ್ಕುತ್ತಿವೆಯೇ? ಭಕ್ತಿ-ಶ್ರದ್ಧೆಗಳ ಜೊತೆಗೆ ಅಂತರಂಗಶುದ್ಧಿ-ಬಹಿರಂಗಶುದ್ಧಿಯ ಪ್ರಜ್ಞೆ ಮೂಡಿದೆಯೇ? ಪ್ರೀತಿ, ತಾಳ್ಮೆ, ಕ್ಷಮೆ, ನಿಸ್ವಾರ್ಥತೆ, ಕರ್ತವ್ಯಪರತೆಗಳು ಮೈಗೂಡಿವೆಯೇ? ಎಂಬುದು ನೈತಿಕ-ಆಧ್ಯಾತ್ಮಿಕ ವಿಕಾಸದ ದ್ಯೋತಕ ಆದಾವು. ಹುಳುವಿನಲ್ಲಿ ಆಂತರಿಕ ಬದಲಾವಣೆಗಳನ್ನುಂಟುಮಾಡಿ ಚೆಲುವಿನ ಚಿಟ್ಟೆಯನ್ನುಂಟುಮಾಡುವ ಕೋಶಾವಸ್ಥೆಯಂತೆ ಈ ವಿದ್ಯಾರ್ಥಿ ಜೀವನವೂ. ಆದ್ದರಿಂದ ವಿದ್ಯಾರ್ಥಿ ಜೀವನದ ಯಶಸ್ಸಿಗೆ ವಿದ್ಯಾರ್ಥಿಯ ಸುಸಂಸ್ಕೃತ ನಡೆನುಡಿಗಳೇ ಕೈಗನ್ನಡಿಗಳೆಂದರೂ ಸರಿಯೇ.

### ಜ್ಞಾನಾರ್ಜನೆ ಮುಖ್ಯವೆ?

ಗಿಡವು ಸೊಂಪಾಗಿ ಬೆಳೆದುದರ ಪರಿಣಾಮವೇ ಹೂ ಬಿಟ್ಟು ನಲಿಯುವುದಲ್ಲವೇ? ಅದೇ ರೀತಿ ಜ್ಞಾನಾರ್ಜನೆಯ ಪರ್ಯಾಪ್ತತೆಗೆ ಸಲ್ಲುವ ಪುರಸ್ಕಾರವೇ ಪದವಿ. ಬೆಳೆಯದೆ ಹೂ ಬಿಡಲು ಸಾಧ್ಯವಿಲ್ಲದಂತೆ ಜ್ಞಾನಾರ್ಜನೆಯಿಲ್ಲದೆ ಪದವಿ ಪ್ರಾಪ್ತಿ ಕನಸೇ ಸೈ! ಸೊಂಪಾಗಿ ಬೆಳೆದರೂ ಹೂ ಬಿಡದಿರುವ ವೃಕ್ಷಗಳಂತೆ, ಸ್ವ-ಪ್ರಯತ್ನದಿಂದ

ಜ್ಞಾನಾರ್ಜನೆ ಮಾಡಿದರೂ ಪರೀಕ್ಷೆಗೆ ಕೂರದ ಪದವಿ ಗಳಿಸದವರಿರಬಹುದು. ಹಳೆತಲೆಮಾರಿನ ಧೀಮಂತರನೇಕರು ಈ ಸಾಲಿಗೆ ಸೇರುವವರು, ಆದರೆ ಇಂದಿನ 'ಕಷ್ಟ ಬೇಡೆಂಬಾಸೆ, ಕಡುಸುಖವ ಕಾಂಬಾಸೆ'ಯ ಯುಗದಲ್ಲಿ, ಪದವಿಗೆ ಅಲ್ಲ, ಪದವಿಯ ಸರ್ಟಿಫಿಕೇಟ್‌ಗೆ ಉದ್ಯೋಗಾನ್ವೇಷಣೆಯಲ್ಲಿ ಪ್ರಾಧಾನ್ಯ. ಆದುದರಿಂದ ಪದವಿ ಅಥವಾ ಪದವಿಯ ಪ್ರಮಾಣ ಪತ್ರಗಳೂ ಮಾರಾಟಕ್ಕೆ ಸಿಗತೊಡಗಿವೆ ನಿಜ. ಆದರೆ ಜ್ಞಾನಾರ್ಜನೆ ಇಲ್ಲದ ಪದವಿ ಎಂಬುದು ನೀರಿಲ್ಲದ ಬಾವಿಯಂತೆ ನಿರರ್ಥಕವಾದುದು ಎಂಬುದು ನೆನಪಿರಲಿ.

ಇಂದಿನ ಶಿಕ್ಷಣ ಪದ್ಧತಿ ಬೌದ್ಧಿಕ ವಿಕಾಸಕ್ಕೆ, ಸ್ವಲ್ಪ ಮಟ್ಟಿಗೆ ದೈಹಿಕ ವಿಕಾಸಕ್ಕೆ, ಒತ್ತು ಕೊಟ್ಟಿದೆಯೇ ಹೊರತು, ನೈತಿಕ-ಆಧ್ಯಾತ್ಮಿಕ ವಿಕಾಸದ ಕಡೆ ಗಮನ ಹರಿಸಿಲ್ಲ. ಪರಿಣಾಮವಾಗಿ ಬುದ್ಧಿವಂತ ರಾಕ್ಷಸ ಸಂತಾನ -ನೀತಿ ನಿಯಮ, ಶಿಸ್ತು ಮೌಲ್ಯಗಳಿಗೆಲ್ಲ ತಿಲಾಂಜಲಿಯಿತ್ತು ಸ್ವಾರ್ಥಕ್ಕಾಗಿ ಎಂಥ ಭ್ರಷ್ಟಾಚಾರ, ಕ್ರೌರ್ಯ, ಹಿಂಸೆಗೂ ಹೇಸದ ಜನಾಂಗ- ನಿರ್ಮಾಣವಾಗುತ್ತಿದೆ. ಆದ್ದರಿಂದ ವ್ಯಕ್ತಿತ್ವದ ಸರ್ವಾಂಗೀಣ ಅಭಿವೃದ್ಧಿಯನ್ನು ಸಾಧಿಸಿ, ಯೋಗ್ಯ ವ್ಯಕ್ತಿ ನಿರ್ಮಾಣಕ್ಕೆಡೆಮಾಡಿ ಕೊಡುವಂಥ ಶಿಕ್ಷಣ ನಮಗಿಂದು ಬೇಕು. ಈಗಿನ ಶಿಕ್ಷಣ ವಿಧಾನದಲ್ಲಿ ಬಾಹ್ಯ ಪರಿಸರ ಮಾಲಿನ್ಯ ನಿವಾರಣೆಯ ಬಗ್ಗೆ ಸಾಕಷ್ಟು ಹೇಳಲಾಗುತ್ತಿದೆ. ಅದರ ಜೊತೆಜೊತೆಗೇ ಆಂತರಿಕ ಪರಿಸರ ಮಾಲಿನ್ಯವನ್ನು ದೂರ ಮಾಡಿ, ಆತ್ಮಶಕ್ತಿ ಜಾಗೃತಿಗೈದು ವ್ಯಕ್ತಿ ತನ್ನ ಕಾಲ ಮೇಲೆ ತಾನು ನಿಂತು ಬಹುಜನರ ಹಿತಕ್ಕೂ, ಸುಖಕ್ಕೂ ದುಡಿಯಬಲ್ಲಂತೆ ಮಾಡಬಲ್ಲ ಶಿಕ್ಷಣ ವಿಧಾನ ನಮಗಿಂದು ಬೇಕೇಬೇಕು.

### ಗುರಿ ಸಾಧಿಸುವ ಬಗೆ.....

'ಈ ವರ್ಷ ಹೀಗಾಗಬೇಕು, ಫಸ್ಟ್‌ಕ್ಲಾಸ್ ಬರಬೇಕು' ಎಂಬೆಲ್ಲ ಗುರಿಯನ್ನೇನೋ ಎಲ್ಲರೂ ಎಣಿಸಿಕೊಳ್ಳಬಹುದು. ಆದರೆ ಎಲ್ಲರೂ ಫಸ್ಟ್ ಕ್ಲಾಸ್ ಬರುವುದಿಲ್ಲವಲ್ಲಾ! ಹೆಚ್ಚಿನವರು ಅದನ್ನು ಸಾಧಿಸುವಲ್ಲಿ ವಿಫಲರಾಗುತ್ತಾರಲ್ಲಾ! ಇದಕ್ಕೇನು ಕಾರಣ ಗೊತ್ತೆ? ಹೆಚ್ಚಿನವರು ಗುರಿಯನ್ನೆಣಿಸಿಕೊಂಡೊಡನೆಯೇ ಆ ಗುರಿಯೇ ವರ್ಷಾಂತ್ಯದಲ್ಲಿ ಬಂದು ಪ್ರತ್ಯಕ್ಷವಾಗುತ್ತದೆಂದು ಭ್ರಮಿಸುತ್ತಾರೆ. ಇನ್ನು ಕೆಲವರು ಆ ಗುರಿಯ ನೆನಕೆಯಲ್ಲೇ ಗುರಿ ಸೇರಿದ ಹಗಲುಗನಸು ಕಾಣುತ್ತ ದಿನಗಳೆಯುತ್ತಾರೆ. ಮಾವಿನ ಗೊರಟವನ್ನು ತೋಟದಲ್ಲಿ ಬಿತ್ತಿದರೆ ಸಾಕು ವರ್ಷಾಂತ್ಯದಲ್ಲದು ಮರವಾಗಿ ಸಮೃದ್ಧ ಫಲಗಳನ್ನೀಯುತ್ತದೆಂದು ಭ್ರಮಿಸುವಂತೆಯೇ ಇದು! ಎಣಿಸಿದ ಗುರಿ ಸಾಧಿತವಾಗಲು ವರ್ಷದುದ್ದಕ್ಕೂ ಆ ಕಡೆಗೆ ಹೆಚ್ಚು ಗಮನಹರಿಸಿ ವಿಶೇಷ ಆಸಕ್ತಿಯಿಂದ ಏಕಾಗ್ರತೆಯಿಂದ ಅರಿತು ಅಭ್ಯಸಿಸಬೇಕು, ಓದಿ ಬರೆಯಬೇಕು, ಚಿಂತನಮಂಥನ ಮಾಡಬೇಕು- ಒಟ್ಟಿನಲ್ಲಿ ಸತತ ಪ್ರಯತ್ನದ ದಾರಿಯನ್ನು ತುಳಿಯಬೇಕು. ಗುಡ್ಡದ ತುದಿ ಸೇರಲು ಪ್ರತಿಯೊಂದು ಮೆಟ್ಟಿಲನ್ನೂ ಎಚ್ಚರದಿಂದ ಏರಲೇಬೇಕಾದಂತೆ, ಆ ಗುರಿ ಸೇರಲು ದಿನ ದಿನವೂ ನಿಷ್ಠೆಯಿಂದ ಪ್ರಯತ್ನಶೀಲರಾಗಲೇಬೇಕು. ಅಥವಾ ಸಾಧನೆಯಲ್ಲಿ ತೊಡಗಲೇಬೇಕು. ಸರಪಳಿಯೊಂದು ಬಲವಾಗಲು, ಅದರ ಗೊಣಸು ಗೊಣಸೂ ಬಲವಾಗಿರಬೇಕಾದಂತೆ, ಇಡೀ ವರ್ಷದ ಸಾಧನೆ ಸಮರ್ಪಕವಾಗಲು, ದಿನದಿನದ, ಗಂಟೆಗಂಟೆಯ, ನಿಮಿಷ ನಿಮಿಷದ ಸಾಧನೆಯೂ ಸಮರ್ಪಕವಾಗಿರಬೇಕು.

### 'ನೋಡುವ'- 'ಕೇಳುವ' ಕೆಲಸ

ಟ್ಯಾಂಕಿಯ ಒಳಸೇರುವ ನೀರು ಶುದ್ಧವಾಗಿದ್ದರೆ ಅದರಿಂದ ಟ್ಯಾಪಿನ ಮೂಲಕ ಹೊರ ಬರುವ ನೀರೂ ಶುದ್ಧವಾಗಿರುವಂತೆ ಕಲಿಕೆಯಲ್ಲೂ ವಿಚಾರಗಳು ಚೆನ್ನಾಗಿ ಮನದಟ್ಟಾದಲ್ಲಿ ಸ್ಮರಿಸಿದಾಕ್ಷಣ ಸುಲಭದಲ್ಲಿ ಅವು ನೆನಪಿಗೆ ಬರುತ್ತವೆ. ಅಂದರೆ ಯಾವಾಗಲೂ ನೋಡುವುದರ, ಕೇಳುವುದರ ಮೂಲಕ ಒಳಸೇರುವ ಸಂವೇದನೆಗಳು ಯೋಚನೆಯನ್ನು ಹುಟ್ಟಿಸಿ, ಭಾವನೆಯನ್ನು ಪ್ರಚೋದಿಸಿ, ಕಾರ್ಯಪ್ರವೃತ್ತರಾಗಲು ಕಾರಣೀಭೂತವಾಗುತ್ತವೆ. ಆದ್ದರಿಂದ ಈ 'ನೋಡುವ' ಹಾಗೂ 'ಕೇಳುವ' ಕೆಲಸ ಸಮರ್ಪಕವಾಗುವಂತೆ ಆಸಕ್ತಿ, ಏಕಾಗ್ರತೆಗಳನ್ನು ಹೆಚ್ಚಿಸಿಕೊಳ್ಳಬೇಕು. ಮನೆಯಲ್ಲಾಗಲಿ, ಶಾಲೆಯಲ್ಲಾಗಲೀ ಇಷ್ಟು ಹೊತ್ತಿಗೆ ಈ ಕೆಲಸ ಎಂಬ ಯೋಜನೆ ರೂಪಿಸಿಕೊಂಡು ಮಾಡುವ ಪ್ರತಿಯೊಂದು ಕೆಲಸವನ್ನೂ ಚೆನ್ನಾಗಿ ಮಾಡಲು

ಕಲಿಯುಬೇಕು. ಅಚಲ ಶ್ರದ್ಧೆಯಿಂದ, ಬಿಡದ ಛಲದಿಂದ ಗುರಿ ಸೇರಲೇಬೇಕೆಂಬ ಸಂಬಲದಿದ ಮಾಡುವ ಕೆಲಸ ತಪಸ್ಸಾಗುತ್ತದೆ. ವಿದ್ಯಾಭ್ಯಾಸವೂ ಒಂದು ತಪಸ್ಸೆಂಬುದನ್ನು ಮರೆಯಬಾರದು. ತಪಸ್ವಿಯೊಬ್ಬ ತನ್ನ ಗುರಿ ಸೇರಲು ದಿನದಿನವೂ ಹೊಸ ಉತ್ಸಾಹದಿಂದ ತಪೋನಿರತನಾಗುವಂತೆ, ವಿದ್ಯಾರ್ಥಿಯೂ ಗುರಿಸೇರಲು ಏಕಾಗ್ರತೆಯಿಂದ ದಿನದಿನವೂ ಓದಿ ಬರೆಯುವುದರಲ್ಲಿ ತೊಡಗಬೇಕು. ಶಿಲ್ಪಿಯೊಬ್ಬ ದಿನದಿನವೂ ಶಿಲ್ಪದ ಒಂದೊಂದೇ ಅಂಗಾಂಗವನ್ನು ಸುಂದರವಾಗಿ ಮೂಡಿಸುತ್ತ ಮೂಡಿಸುತ್ತ ಕಟ್ಟಕಡೆಗೆ ಸುಂದರ ಶಿಲ್ಪವನ್ನೇ ನಿರ್ಮಿಸುವಂತೆ, ವಿದ್ಯಾರ್ಥಿಯೂ ದಿನದಿನವೂ ಈ ಓದಿ ಬರೆಯುವ ಕೆಲಸವನ್ನೇ ಚೆನ್ನಾಗಿ ಮಾಡುತ್ತ ಹೋದರೆ ಇಡೀ ವರ್ಷದ ಕಲಿಕೆಯೇ ಚೆನ್ನಾಗಿ ಆಗಿ ಎಣಿಸಿಕೊಂಡ ಗುರಿಯನ್ನು ಸುಲಭದಲ್ಲಿ ಸಾಧಿಸಬಲ್ಲವನಾಗುತ್ತಾನೆ.

### ಆಸಕ್ತಿ-ಪ್ರೀತಿ-ಆನಂದ

ಯಾವ ವಿಚಾರ ನಮಗೆ ಪ್ರಿಯವಾಗಿರುತ್ತದೋ ಅದರಲ್ಲಿ ನಮಗೆ ತನ್ನಿಂದ ತಾನಾಗಿ ಆಸಕ್ತಿ ಮೂಡುತ್ತದೆ. ಆದ್ದರಿಂದ ಕಲಿಕೆಯಲ್ಲಿ ಆಸಕ್ತಿ ವೃದ್ಧಿಸಲು ಮೊತ್ತಮೊದಲು ಕಲಿಕೆಯನ್ನು, ಕಲಿಯುವ ಪಾಠಗಳನ್ನು ಪ್ರೀತಿಸುವುದನ್ನು ಕಲಿಯಬೇಕು, ಆ ಪಾಠಗಳನ್ನು ಚೆನ್ನಾಗಿ ಕಲಿಯುವುದರಲ್ಲೇ ಆನಂದವನ್ನು ಪಡೆಯಬೇಕು.

ಯಾವಾಗಲೂ ಬೆಳಗ್ಗೆ ಏಳುವಾಗ ಮೂಡುವ ಭಾವನೆಗಳೇ ಚಿಗುರಿ ದಿನವಿಡೀ ಫಲಿಸಿದರೆ, ರಾತ್ರಿ ಮಲಗುವಾಗಿನ ಭಾವನೆಗಳ ಬೇರು ಮನದಾಳಕ್ಕಿಳಿಯುತ್ತದೆ. ಆದ್ದರಿಂದ ಬೆಳಗ್ಗೆ ಎದ್ದೊಡನೆಯೇ ಹಾಸಿಗೆಯಲ್ಲಿ ನೆಟ್ಟಗೆ ಕುಳಿತುಕೊಂಡು ಹತ್ತುಬಾರಿಯಾದರೂ 'ನಾನು ದಿನೇ ದಿನೇ ಎಲ್ಲ ವಿಧಗಳಲ್ಲೂ ಉತ್ತಮಗೊಳ್ಳುತ್ತಿದ್ದೇನ' ಎಂದು ತುಟಿ ಬಿಚ್ಚಿ ಹೇಳಿಕೊಳ್ಳಬೇಕು. 'ಎಲ್ಲಾ ವಿಧಗಳಲ್ಲೂ' ಎನ್ನುವಾಗ ಬೇರೆ ಬೇರೆ ಪಾಠಗಳಲ್ಲಿ ನಿಮ್ಮ ಗುರಿಯ ಚಿತ್ರ ನಿಮ್ಮ ಮನದಲ್ಲಿ ಮೂಡಿ ಆ ವಿಚಾರದಲ್ಲಿ ನಿಮ್ಮ ಆಸಕ್ತಿ ವೃದ್ಧಿಸುತ್ತಿದೆ ಎಂದು ನೀವು ಭಾವಿಸಿಕೊಂಡು ಆ ಗುರಿಯೆಡೆಗೆ ಆ ದಿನದ ನಿಮ್ಮ ನಡಿಗೆಯ ಬಗ್ಗೆಯೂ ನೀವು ಖಚಿತ ನಿಲುವನ್ನು ತಳೆಯುವಂತಾಗಬೇಕು. ಗಣಿತದಲ್ಲಿ ನೂರಕ್ಕೆ ನೂರು ಅಂಕಗಳನ್ನು ಗಳಿಸುವ ಗುರಿ ನಿಮ್ಮದಾಗಿದ್ದರೆ ಅದರ ನೆನಹು ಆಗ ಮೂಡಬೇಕು. ಜೊತೆಗೆ ಗಣಿತದಲ್ಲಿ ದಿನದಿಂದ ದಿನಕ್ಕೆ ಆಸಕ್ತಿ ವೃದ್ಧಿಸುತ್ತದೆ ಎಂದೆಣಿಸಿಕೊಂಡು 'ಇವತ್ತು ಲೆಕ್ಕ ಪಾಠದಲ್ಲಿ ಕೊಡುವ ಎಲ್ಲಾ ಲೆಕ್ಕಗಳನ್ನು ಸರಿಯಾಗಿ ಮಾಡಲೇಬೇಕು' ಎಂಬ ನಿರ್ಧಾರವನ್ನೂ ಆಗ ನೀವು ತಳೆಯಬೇಕು. ಎಲ್ಲಾ ಪಾಠಗಳ ಬಗ್ಗೆಯೂ ಹೀಗೆಯೇ ಆಸಕ್ತಿ ವೃದ್ಧಿಯಾಗುವ ಬಗ್ಗೆ ಮನಸ್ಸಿಗೆ ಸರಿಯಾದ ಸೂಚನೆಕೊಟ್ಟು ಆ ವಿಚಾರಗಳಲ್ಲಿ ವಿಶೇಷ ಒಲವನ್ನು ಹುಟ್ಟಿಸಿಕೊಳ್ಳಬೇಕು.

### ನಿರ್ವಹಣೆಯ ನೆನಹು

ಆ ಪಾಠಗಳಿಗೆ ಸಂಬಂಧಿಸಿದ ಕೆಲಸಗಳನ್ನೂ ಸಂತೋಷದಿಂದ ಮಾಡಿ ಮುಗಿಸಬೇಕು. ರಾತ್ರಿ ಮಲಗುವ ಮೊದಲು ಹಾಸಿಗೆಯಲ್ಲಿ ಕುಳಿತುಕೊಂಡು ಇದೇ ರೀತಿ ಹತ್ತು ಬಾರಿಯಾದರೂ 'ನಾನು ದಿನೇ ದಿನೇ ಎಲ್ಲ ವಿಧಗಳಲ್ಲೂ ಉತ್ತಮಗೊಳ್ಳುತ್ತಿದ್ದೇನೆ' ಎಂದುಚ್ಚರಿಸಬೇಕು. ಆಗ 'ಎಲ್ಲ ವಿಧಗಳಲ್ಲೂ' ಎನ್ನುವಾಗ ನಿಮ್ಮ ಗುರಿಯ ನೆನಪಿನೊಂದಿಗೆ ಆ ದಿನದ ನಿಮ್ಮ ನಿರ್ವಹಣೆಯ ನೆನಹು ಮೂಡಿ ಇನ್ನೂ ಆಸಕ್ತಿಯಿಂದ ಮರುದಿನ ಕಲಿಯುವ ಛಲಬಲ ನಿಮ್ಮಲ್ಲಿ ಉಕ್ಕಬೇಕು. ನಿಮ್ಮ ಹೊರಮನಸ್ಸು ಮತ್ತೆ ನಿದ್ರೆ ಮಾಡಿದರೂ, ಒಳಮನಸ್ಸಿನಾಳಕ್ಕೆ 'ದಿನೇದಿನೇ ನನ್ನ ಆಸಕ್ತಿ ವೃದ್ಧಿಸುತ್ತಿದೆ, ಪಾಠಗಳು ನನಗೆ ತುಂಬ ಪ್ರಿಯವಾಗುತ್ತವೆ' ಎಂಬ ಸೂಚನೆ ಇಳಿಯುವುದರಿಂದ ಮರುದಿನ ನಿಜವಾಗಿಯೂ ಆ ಬಗ್ಗೆ ಹೊಸ ಆಸಕ್ತಿ ಚಿಗುರುತ್ತದೆ. ಪ್ರತಿದಿನವೂ ಈ ರೀತಿ ಕಲಿಕೆಯಲ್ಲಿ ಆಸಕ್ತಿಯನ್ನು ಆವಾಹಿಸಿಕೊಳ್ಳುವುದರಿಂದ ನೀರನ್ನು ಸುರಿಯುತ್ತ ಹೋದಂತೆ ಪಾತ್ರೆಯಲ್ಲಿ ನೀರಿನ ಮಟ್ಟ ಏರುವಂತೆ, ಕಲಿಕೆಯಲ್ಲಿ ನಿಮ್ಮ ಆಸಕ್ತಿ ವೃದ್ಧಿಸಿಯೇ ವೃದ್ಧಿಸುತ್ತದೆ. ಈ ರೀತಿ ಒಳಗಿನಿಂದಲೇ ಆಸಕ್ತಿಯನ್ನು ಪ್ರೇರಿಸಿಕೊಳ್ಳುವುದಲ್ಲದೆ, ಮಾತ್ರೆ-ಔಷಧಗಳಿಂದ ಅದನ್ನು ಸ್ಫುರಿಸಿಕೊಳ್ಳಲು ಸಾಧ್ಯವಿಲ್ಲ. ಒಮ್ಮೆ ಆಸಕ್ತಿ ವೃದ್ಧಿಸಿತೆಂದರೆ ಅದು ಸರಪಳಿ ಕ್ರಿಯೆಯಂತೆ ಮತ್ತೆ ವೃದ್ಧಿಸುತ್ತಲೇ ಹೋಗುತ್ತದೆ. ವಿಜ್ಞಾನದಲ್ಲಿ ಆಸಕ್ತಿ ಉಂಟಾದರೆ ವಿಜ್ಞಾನ ಪಾಠ

ಕೇಳುವಾಗ ಮಾತ್ರ ಖುಷಿಯಾಗುವುದಲ್ಲ, ವಿಜ್ಞಾನಕ್ಕೆ ಸಂಬಂಧಿಸಿದ ಬೇರೆ ಬೇರೆ ಪುಸ್ತಕ ಓದುವ, ಚಿತ್ರ ನೋಡುವ ತುಡಿತ ವೃದ್ಧಿಸುತ್ತದೆ. ಆ ಪುಸ್ತಕ ಓದಿದಂತೆ, ಚಿತ್ರ ನೋಡಿದಂತೆ ಉರಿಯುವ ದೀಪಕ್ಕೆ ತುಪ್ಪ ಸುರಿದಂತೆ ಆಸಕ್ತಿ ಹೆಚ್ಚುತ್ತಲೇ ಹೋಗುತ್ತದೆ.

### ಅನುಸರಿಸಬೇಕಾದ ಕ್ರಮಗಳು

ಪಾಠಕ್ಕೂ ಮೊದಲು ಪುಸ್ತಕ ಬಿಡಿಸಿ ಆ ಅಧ್ಯಾಯದ ಪುಟಗಳನ್ನೆಲ್ಲ ಮೊದಲು ತಿರುವಿ ಹಾಕಬೇಕು. ಆ ಅಧ್ಯಾಯದ ಅಂತ್ಯದಲ್ಲಿನ ಪ್ರಶ್ನೆಗಳನ್ನೆಲ್ಲ ಒಮ್ಮೆ ಓದಿ ನೋಡಬೇಕು. ಯಾವ ವಿಚಾರಗಳ ಕಡೆ ಹೆಚ್ಚು ಗಮನ ಕೊಡಬೇಕೆಂಬುದನ್ನು ಆ ಪ್ರಶ್ನೆಗಳೇ ಸೂಚಿಸುತ್ತವೆ. ಆ ಮೇಲೆ ಆ ಅಧ್ಯಾಯವನ್ನೊಮ್ಮೆ ಓದಿಕೊಂಡು ತರಗತಿಗೆ ಹೋಗಬೇಕು. ತರಗತಿಯಲ್ಲಿ ಅಧ್ಯಾಪಕರು ಪಾಠ ಮಾಡುವಾಗ ಗಮನಕೊಟ್ಟು ನಿಮಗೆ ಈ ಮೊದಲು ಅರ್ಥವಾಗದ ಅಂಶವನ್ನು ಸರಿಯಾಗಿ ತಿಳಿದುಕೊಳ್ಳಬೇಕು. ಆ ಅಧ್ಯಾಯದಲ್ಲಿ ಯಾವ ವಿಚಾರಗಳು ಪ್ರಾಮುಖ್ಯವಾದವುಗಳೆಂಬುದೂ ಅಧ್ಯಾಪಕರ ಮಾತಿನಿಂದ ನಿಮಗಾಗ ತಿಳಿಯುತ್ತದೆ. ಅದೇ ದಿನ ಮನೆಗೆ ಬಂದವರೇ ಪುನಃ ಆ ಅಧ್ಯಾಯವನ್ನು ಏಕಾಗ್ರತೆಯಿಂದ ಓದಿ, ಪುಸ್ತಕವನ್ನು ಮಡಚಿಟ್ಟು ಆ ಬಗ್ಗೆ ಕೂಡಲೇ ಮನನ ಮಾಡಬೇಕು. ಕಾಗದ ತೆಗೆದುಕೊಂಡು ಅದರ ಮುಖ್ಯಾಂಶಗಳನ್ನು, ನೋಡದೆ, ಬರೆಯಲು ಪ್ರಯತ್ನಿಸಬೇಕು. ಒಂದೊಮ್ಮೆ ಆಗದಿದ್ದಲ್ಲಿ ಮತ್ತೊಮ್ಮೆ ಓದಿ, ಪುನಃ ಪುಸ್ತಕವನ್ನು ಮಡಚಿಟ್ಟು ಬರೆಯಲು ಪ್ರಯತ್ನಿಸಬೇಕು. ಇದೇ ರೀತಿ ಆ ಅಧ್ಯಾಯದ ಅಂತ್ಯದ ಪ್ರಶ್ನೆಗಳಿಗೂ ಪುಸ್ತಕ ನೋಡದೆ ಉತ್ತರ ಬರೆಯಲು ಪ್ರಯತ್ನಿಸಬೇಕು. ಕಲಿಯುವ ವಿಷಯ ವಿಜ್ಞಾನದ್ದಿರಲಿ, ಗಣಿತದ್ದಿರಲಿ, ಸಾಹಿತ್ಯದ್ದೇ ಇರಲಿ, ಆಗ ಖಂಡಿತವಾಗಿಯೂ ಆ ಅಧ್ಯಾಯದ ಸಾರವೆಲ್ಲ ಬಹು ಬೇಗ ನಿಮ್ಮ ಕರಗತವಾಗಿರುತ್ತದೆ.

ಬಲಶಾಲಿಗಳಾಗುವುದು ಊಟ ಮಾಡಿದ ಪ್ರಮಾಣದಿಂದಲ್ಲ, ಅರಗಿಸಿ ಆರೋಗ್ಯ ವೃದ್ಧಿಸಿಕೊಳ್ಳುವುದರಿಂದ ಶ್ರೀಮಂತರಾಗುವುದು ಹೆಚ್ಚು ಗಳಿಸುವುದರಿಂದಲ್ಲ, ಹೆಚ್ಚು ಉಳಿಸುವುದರಿಂದ ಅಲ್ಲವೇ? ಅದೇ ರೀತಿ ಬುದ್ಧಿವಂತರಾಗುವುದೂ ಹೆಚ್ಚು ಓದುವುದರಿಂದಲ್ಲ, ಓದಿದ್ದನ್ನು ಹೆಚ್ಚು ಮನದಟ್ಟು ಮಾಡಿಕೊಳ್ಳುವುದರಿಂದ.

ನೀರಿಗಾಗಿ ಒಂದೆಡೆ ೨ ಮೀಟರ್ ತೋಡುವುದು, ಆ ಜಾಗ ಸರಿಯಲ್ಲವೆಂದು ಇನ್ನೊಂದೆಡೆ

ಗುರಿ



೩ ಮೀಟರ್, ಪುನಃ ಮತ್ತೊಂದೆಡೆ ೪ ಮೀಟರ್ ಹೀಗೆ ನಾಲ್ಕಾರು ಕಡೆ ತೋಡುವ ಬದಲು ಒಂದೇ ಕಡೆಯೇ ೬-೭ ಮೀಟರ್ ತೋಡುತ್ತಲೇ ಹೋದರೆ ಖಂಡಿತ ನೀರು ಉಕ್ಕದೇ ? ಅದೇ ರೀತಿ ಕೆಲವರು ಒಂದು ವಿಚಾರಕ್ಕೆ ಸಂಬಂಧಿಸಿ ಅನೇಕ ಪತ್ರಪುಸ್ತಕಗಳನ್ನು ಓದುತ್ತಾರೆ. ಇದರಿಂದ ಮನಸ್ಸು ಹೆಚ್ಚು ವಿಚಾರಗಳನ್ನು ಗ್ರಹಿಸಿದರೂ ಹೆಚ್ಚು ವಿಚಾರಗಳನ್ನು ಉಳಿಸಿಕೊಳ್ಳಲಾರದು. ಪಾತ್ರೆಯೇನೋ ದೊಡ್ಡದು-ಆದರೆ ಬುಡದಲ್ಲಿ ತೂತಿದೆ ಎಂದಾಗ ಎಷ್ಟು ಸುರಿದರೂ ಅದು ತುಂಬಿ ಬಂದೀತೇ ? ಅದೇ ರೀತಿ ಓದುವುದಕ್ಕೇನೂ ಮಿತಿಯಿಲ್ಲ- ಆದರೆ ಮಾತ್ರ ಯಾವುದೂ ನೆನಪಿಲ್ಲ ಎಂಬಂತಾಗುತ್ತದೆ ವಿದ್ಯಾರ್ಥಿಯ ಅವಸ್ಥೆ. ಅದಕ್ಕಾಗಿ ಓದು ವಿಶಾಲವಾಗುವ ಮೊದಲು ಆಳವಾಗಬೇಕು. ಆದ್ದರಿಂದ ಬುದ್ಧಿವಂತರಾಗಲು ನೀವು ಯಾವುದಾದರೊಂದು ಒಳ್ಳೆಯ ಪತ್ರಪುಸ್ತಕವನ್ನವಲಂಬಿಸಿ ಅದರ ಮುಖ್ಯಾಂಶಗಳನ್ನೆಲ್ಲ ನೋಟ್ಸ್ ಮಾಡಿಕೊಳ್ಳಿ. ಬೇರೆ ಪತ್ರಪುಸ್ತಕಗಳ ಒಳ್ಳೆಯ ಅಂಶಗಳನ್ನೂ ಆ ನೋಟ್ಸ್‌ನಲ್ಲಿಯೇ ಬರೆದಿಟ್ಟುಕೊಳ್ಳಿ. ಆ ಮೇಲೆ ಆ ಪತ್ರಪುಸ್ತಕ, ಈ ಪತ್ರಪುಸ್ತಕ ಎಂದೆಲ್ಲ ಓದುತ್ತ ಕುಳಿತುಕೊಳ್ಳದೆ ಆ ನೋಟ್ಸನ್ನೇ ಪದೇ ಪದೇ ಓದಿ ಬರೆಯಬೇಕು, ಬರೆದು ಓದಬೇಕು, ತಿರುತಿರುಗಿ ಮನನ ಮಾಡಬೇಕು. ಅಂತೂ ನೀವು ಎಷ್ಟು ಬಾರಿ ಓದುವಿರೆಂಬುದಕ್ಕಿಂತಲೂ ಎಷ್ಟು ಚೆನ್ನಾಗಿ ಅರ್ಥಮಾಡಿಕೊಂಡು ಓದುವಿರೆಂಬುದನ್ನೇ ಅವಲಂಬಿಸಿದೆ ಬುದ್ಧಿವಂತಿಕೆ.

### ಬೆಳಗಿನ ಹೊತ್ತು....

ಗೋಡೆಗೆ ಸವರಿದ ಬಣ್ಣ ನೆಲೆನಿಲ್ಲಲು ಗೋಡೆಯ ಮೇಲ್ಮೈಯೂ ಚೊಕ್ಕವಾಗಿರಬೇಕು, ಸುತ್ತಣ ಪರಿಸರವೂ ತೇವರಹಿತವಾಗಿರಬೇಕು ಅಲ್ಲವೆ ? ಅದೇ ರೀತಿ ಓದಿದ ವಿಚಾರ ಮನದಟ್ಟಾಗಲು ಮನಸ್ಸೂ ಶಾಂತವಾಗಿ ಉಲ್ಲಸಿತವಾಗಿರಬೇಕು, ಪರಿಸರವೂ ಶಾಂತವಾಗಿರಬೇಕು. ಬೆಳಗ್ಗಿನ ಹೊತ್ತು ಪರಿಸರವೂ ಶಾಂತವಾಗಿರುವುದಲ್ಲದೆ, ಆಯಾಸವೆಲ್ಲ ಪರಿಹಾರವಾಗಿ ಮನಸ್ಸೂ ಉಲ್ಲಸಿತವಾಗಿರುತ್ತದೆ. ಆದ್ದರಿಂದ ಬೆಳಗ್ಗೆ ಬೇಗ ಎದ್ದು ಓದುವುದು ತುಂಬ ಪರಿಣಾಮಕಾರಿ. ಆದರೆ ಅರ್ಧ ನಿದ್ರೆಯಲ್ಲೆದ್ದು ಓದಲು ಕುಳಿತರೆ ನಿದ್ರೆಯ ಜೊಂಪಿನಲ್ಲಿ ಖಂಡಿತ ಓದು ಸಾಗದು. ಹೀಗಾಗಿ ಬೇಗ ಏಳುವ ಮನಸ್ಸಿರುವವರು ಬೇಗ ಮಲಗಬೇಕು. ರಾತ್ರಿ ಮಿತವಾಗಿ ಊಟಮಾಡಿ, ಕೈಕಾಲು ಮುಖಗಳನ್ನೆಲ್ಲ ಚೆನ್ನಾಗಿ ತೊಳೆದುಕೊಂಡು ಮಲಗಿದರೆ, ಖಂಡಿತ ಅಲಾರಾಂ ಇಲ್ಲದೆ ಅಷ್ಟು ಹೊತ್ತಿಗೇ ಟಕ್ಕೆಂದು ಎಚ್ಚರವಾಗಿಯೇ ಆಗುತ್ತದೆ. ನಿದ್ರೆಯಲ್ಲ ಮುಗಿದು ಹಾಗೆ ಎಚ್ಚರವಾದಾಗ ಮನಸ್ಸು ಪ್ರಶಾಂತವಾಗಿದ್ದು ಅತ್ಯಂತ ಉಲ್ಲಸಿತವಾಗಿರುತ್ತದೆ.

### ಮೂರು ಗಂಟೆಗಳಷ್ಟು....

ಬೆಳಗ್ಗೆ ಬೇಗ ಏಳುವ ಈ ಅನಿಶ್ಚಿತತೆಯ ಅವಾಂತರ ಯಾಕೆಂದು ಕೆಲವರು ನಡುರಾತ್ರಿಯವರೆಗೂ, ಅನಂತರವೂ ಓದುತ್ತಾರೆ. ಜಗತ್ತೆಲ್ಲ ನಿದ್ರೆಯಲ್ಲಿ ಮುಳುಗಿರುವುದರಿಂದ ಆಗ ಹೊರಗಿನ ಪರಿಸರವು ಸದ್ದುಗದ್ದಲದಿಂದ ದೂರವಾಗಿರುತ್ತದೆ ನಿಜ. ಆದರೆ ಇಡೀ ದಿನದ ಕೆಲಸಕಾರ್ಯಗಳಿಂದ ಮನಸ್ಸು ಮಾತ್ರ ಆಯಾಸಗೊಂಡಿರುತ್ತದೆ. ಆದರೂ ಪ್ರಯತ್ನಪೂರ್ವಕವಾಗಿ ಮನಸ್ಸಿಟ್ಟು ಓದಿದರೆ ಮನಸ್ಸು ವಿಚಾರಗಳನ್ನು ಗ್ರಹಿಸುತ್ತದೆ. ರಾತ್ರಿಯೆಲ್ಲಾ ಓದಿ ಬೆಳಗಿನ ಜಾವ ನಿದ್ರಿಸಿದಾಗ ಗ್ರಹಿಸಿದ ಆ ವಿಚಾರಗಳು ಮನದಾಳಕ್ಕಿಳಿಯುತ್ತವೆ ಎನ್ನುವವರಿದ್ದಾರೆ. ಅಂತೂ ನೀವು ಯಾವಾಗ ಓದುವಿರಿ ಎಂಬುದಕ್ಕಿಂತಲೂ ಹೇಗೆ ಓದುವಿರಿ ಎಂಬುದು ಮುಖ್ಯ. ನಿಮಗೆ ಒಗ್ಗುವ ಅಭ್ಯಾಸವನ್ನಂತೂ ರೂಢಿಸಿಕೊಂಡು ನಿಷ್ಠೆಯಿಂದ ಪಾಲಿಸುತ್ತ ಹೋಗಿ.

ಯಶಸ್ಸಿಗಾಗಿ ಹಾತೊರೆಯುವ ವಿದ್ಯಾರ್ಥಿಯೊಬ್ಬ ಕಡಿಮೆ ಎಂದರೆ ದಿನಂಪ್ರತಿ ೩ ಗಂಟೆಯ ಕಾಲವನ್ನಾದರೂ ಓದಿ ಬರೆಯಲು ವಿನಿಯೋಗಿಸಲೇಬೇಕು. ಆ ಕಾರ್ಯದಲ್ಲಿ ಆತನಿಗೆ ಬೇಸರವಾಗಲಿ, ಆಲಸ್ಯವಾಗಲಿ ಇರಲೇಬಾರದು. ಸಾಮಾನ್ಯವಾಗಿ ಆರೋಗ್ಯವಂತ ದೇಹಕ್ಕೆ ೭ ಗಂಟೆ ಕಾಲ ನಿದ್ರೆ ಬೇಕೇಬೇಕು. ಈ ಅವಧಿ ಅವರವರ ದೇಹ ಪ್ರಕೃತಿಯನ್ನೂ, ಆಟ-ವ್ಯಾಯಾಮವನ್ನೂ ಹೊಂದಿಕೊಂಡು ಸ್ವಲ್ಪ ಹೆಚ್ಚು ಕಡಿಮೆಯಾಗಬಹುದು. ಅದೇನೇ ಇರಲಿ, ಚೆನ್ನಾಗಿ ಆಟವನ್ನೂ ಆಡಿ, ಆಯಾಸ ಪರಿಹಾರಕ್ಕಾಗಿ ಸುಖನಿದ್ರೆಯನ್ನೂ

"ಬೆಳಕಿದ್ದಲ್ಲಿ ಕತ್ತಲಿರಲು ಸಾಧ್ಯವೆ? ಎಂದಿಗೂ ಸಾಧ್ಯವಿಲ್ಲ ತಾನೇ? ಅದೇ ರೀತಿ ಗುರಿ ಸೇರಲೇಬೇಕೆಂಬ ಹಂಬಲ ತೀವ್ರವಾಗಿದ್ದಲ್ಲಿ ಓದಲು, ಬರೆಯಲು ಕುಳಿತಾಗ ನಿದ್ರೆ ಇಣುಕುವಂತೆಯೇ ಇಲ್ಲ. ಆದರೆ ದೇಹ ದುರ್ಬಲವಾಗಿರುವಾಗ, ಆಯಾಸ-ಅನಾರೋಗ್ಯ ಪೀಡಿತರಾಗಿರುವಾಗ, ಓದಲು ಬರೆಯಲು ಅನುಕೂಲ ಪರಿಸರ ಇಲ್ಲದಿರುವಾಗ ಆಕಳಿಕೆ ಬರತೊಡಗಿ ನಿದ್ರೆ ಆಹ್ವಾನಿಸಲ್ಪಡುವುದಿದೆ. ಆದ್ದರಿಂದ ಮೊದಲು ದೇಹಾರೋಗ್ಯ ಕಾಪಾಡಿಕೊಳ್ಳಿ. ನಿದ್ರೆಗೂ ಮೊದಲು ಟಿ.ವಿ., ಸಿನೆಮಾ ನೋಡಿದರೋ, ಕಾದಂಬರಿ ಓದಿದಿರೋ, ಗಾಢ ನಿದ್ರೆ ಬರದೆ ಭಯಂಕರ ಕನಸುಗಳಿಂದ ಬೆದರಿ ಕಂಗಾಲಾಗಿ ಮತ್ತಷ್ಟು ಬಳಲುವಂತಾಗುವುದಿದೆ."

ಮಾಡಿ. ಉಳಿದ ಸಮಯದಲ್ಲಿ ಓದಿ ಬರೆಯಲು ಮೂರು ಗಂಟೆಗಳಷ್ಟು ಅವಧಿಯನ್ನಾದರೂ ಮೀಸಲಿಡಿ. ರಜಾದಿನಗಳಲ್ಲಿ ಈ ಅವಧಿಯನ್ನು ಇನ್ನಷ್ಟು ವಿಸ್ತರಿಸಿ. ನೆಟ್ಟ ಗುಲಾಬಿ ಗಿಡಕ್ಕೆ ದಿನದಿನವೂ ನೀರನ್ನು ಹಾಕದಿದ್ದರೆ ಅದು ಹೇಗೆ ಬದುಕಲಾರದೋ ಹಾಗೆ ದಿನದಿನವೂ ೩ ಗಂಟೆಯ ಕಾಲವನ್ನಾದರೂ ಓದಿ ಬರೆಯಲು ವಿನಿಯೋಗಿಸದಿದ್ದರೆ ಹೆಚ್ಚಿನ ಯಶಸ್ಸು ನಿಮ್ಮದಾಗದೆಂಬುದನ್ನು ಮಾತ್ರ ತಿಳಿಯಿರಿ. ಬ್ಯಾಂಕಿನಿಂದ ಬಡ್ಡಿ ಬರಲು ಅಲ್ಲಿ ನಿಮ್ಮ ಬಂಡವಾಳ ಇರಲೇಬೇಕಾದಂತೆ, ಯಶಸ್ಸು ನಿಮ್ಮದಾಗಲು ದಿನದಿನವೂ ನಿಷ್ಠೆಯಿಂದ ಓದಿ ಬರೆಯುವ ಪರಿಶ್ರಮ ನಿಮ್ಮದಾಗಲೇಬೇಕು.

## ಚೆನ್ನಾಗಿ ನೋಟ್ಸ್ ಮಾಡಿಕೊಳ್ಳುವ ಬಗೆ

ಪಠ್ಯ ಪುಸ್ತಕದಲ್ಲಿ ಅನೇಕ ವಿಚಾರಗಳಿರುತ್ತವೆ. ಅವುಗಳಲ್ಲಿ ಅದೆಷ್ಟೋ ವಿಚಾರಗಳು ಪರೀಕ್ಷಾದೃಷ್ಟಿಯಿಂದೇನೂ ಪ್ರಾಮುಖ್ಯವಾದವುಗಳಲ್ಲ. ಪ್ರಾಮುಖ್ಯವಾದವುಗಳನ್ನು ಮಾತ್ರ ಹುಡುಕಿ ಹುಡುಕಿ ಓದುವುದು ತುಂಬ ಪ್ರಯಾಸಕರ. ಮೇಲಾಗಿ ಅಧ್ಯಾಪಕರು ತಮ್ಮ ಜ್ಞಾನದ, ಅನುಭವದ ಹಿನ್ನೆಲೆಯಲ್ಲಿ ಪುಸ್ತಕದಲ್ಲಿರದ, ಆದರೆ ಪರೀಕ್ಷೆಗೆ ಉಪಯುಕ್ತವಾದ ಅದೆಷ್ಟೋ ವಿಚಾರಗಳನ್ನೂ ಹೇಳುತ್ತಾರೆ. ಪಾಠ ಕೇಳುವಾಗ ಅವೆಲ್ಲ ಅರ್ಥವಾದರೂ ಮರುಕ್ಷಣದಲ್ಲವು ಮರೆತೇಹೋಗುತ್ತವೆ. ಅವುಗಳನ್ನೆಲ್ಲ ಚೆನ್ನಾಗಿ ಬರೆದಿಟ್ಟುಕೊಂಡರೆ- ನೋಟ್ಸ್ ಮಾಡಿಟ್ಟುಕೊಂಡರೆ, ಪುನಃ ಪುನಃ ಓದಿ ಮನನ ಮಾಡಲು ಸುಲಭವಾಗುತ್ತದೆ. ನೋಟ್ಸ್ ಮಾಡುವುದರ ಕಡೆಗೆ ಗಮನ ಹರಿಸುವುದರಿಂದ ಕಣ್ಣು ಕಿವಿ, ಕೈಗಳೆಲ್ಲ ಪಾಠದಲ್ಲೇ ಮುಳುಗಿದ್ದು ಆ ಏಕಾಗ್ರತೆಯಿಂದಾಗಿಯೂ ಪಾಠ ಬೇಗ ಅರ್ಥವಾಗುತ್ತದೆ. ಆದ್ದರಿಂದ ನೋಟ್ಸ್ ಮಾಡಿಕೊಳ್ಳುವ ಅಭ್ಯಾಸ ರೂಢಿಸಿಕೊಳ್ಳಬೇಕು.

ಅಧ್ಯಾಪಕರು ಪಾಠಮಾಡುವಾಗಲೇ ವಿಚಾರಗಳ ಓಘಗಳಿಗೆ ಅನುಗುಣವಾಗಿ ಶೀರ್ಷಿಕೆ, ಉಪಶೀರ್ಷಿಕೆ ಕೊಟ್ಟು ವಿಚಾರಗಳನ್ನು ಚೊಕ್ಕವಾಗಿ, ಚೆನ್ನಾಗಿ, ಚುಟುಕಾಗಿ ಒಂದರ ಕೆಳಗೊಂದರಂತೆ ಬರೆದುಕೊಳ್ಳಬೇಕು. ಬೇಕಾದ ತಖ್ತೆ, ಚಿತ್ರ, ಸಮೀಕರಣಗಳನ್ನೆಲ್ಲ ನಾಜೂಕಾಗಿ ಅಲ್ಲಲ್ಲೇ ಬರೆದುಕೊಳ್ಳಬೇಕು.

ಕೆಲವರು ತರಗತಿಯಲ್ಲಿ ಬರೆದುಕೊಂಡ ನೋಟ್ಸನ್ನು ಮನೆಗೆ ಹೋಗಿ ಬೇರೊಂದು ಪುಸ್ತಕದಲ್ಲಿ ನಿಧಾನವಾಗಿ ಸುಂದರವಾಗಿ ಬರೆದುಕೊಳ್ಳುವ ಕ್ರಮ ರೂಢಿಸುತ್ತಾರೆ. ಆದರೆ ಈ ಅಭ್ಯಾಸ ಒಳ್ಳೆಯದಲ್ಲ. ಬೇಗ ಬೇಗ ಚೆನ್ನಾಗಿ ಬರೆಯುವ ಅಭ್ಯಾಸದಿಂದ ಮಾತ್ರ ಪರೀಕ್ಷೆಗೂ ಅನುಕೂಲ. ಆದ್ದರಿಂದ ನೋಟ್ಸ್ ಮಾಡಿಕೊಳ್ಳುವಾಗ ಕೂಡ ಪರೀಕ್ಷೆಗೂ ಪೂರಕವಾಗುವಂತೆ ಬೇಗ ಬೇಗ ಚೆನ್ನಾಗಿ ಬರೆಯುವುದನ್ನು ಕಲಿಯಬೇಕು. ಮನೆಗೆ ಹೋಗಿ ಅದರ ಯಥಾಪ್ರತಿ ತಯಾರಿಸಲು ವಿನಿಯೋಗಿಸುವ ಸಮಯವನ್ನು ಆ ನೋಟ್ಸನ್ನು ಪುನಃ ಓದಲು ವಿನಿಯೋಗಿಸುವಂತಾಗಬೇಕು.

ಮನೆಯಲ್ಲಿ ಪಠ್ಯಪುಸ್ತಕವನ್ನೋದಿ, ಪಾಠದ ಕೊನೆಯಲ್ಲಿರುವ ಪ್ರಶ್ನೆಗಳನ್ನೂ ಈ ಹಿಂದೆ ಪರೀಕ್ಷೆಯಲ್ಲಿ ಆ ಪಾಠದ ಮೇಲೆ ಬಂದ ಪ್ರಶ್ನೆಗಳನ್ನೂ ಗಮನಿಸಿ, ತರಗತಿಯಲ್ಲಿ ಬರೆದುಕೊಂಡ ನೋಟ್ಸ್‌ಗೆ ಅದಿದನ್ನು ಸೇರಿಸಿ ಇನ್ನಷ್ಟು ಪರಿಪುಷ್ಟಗೊಳಿಸಬೇಕು. ದಪ್ಪಕ್ಷರದಲ್ಲಿ ಬರೆದು ಕೆಳಗೆರೆ ಹಾಕಿ, ಮಾರ್ಜಿನ್‌ನಲ್ಲಿ 'ಮುಖ್ಯ', 'ಅತಿಮುಖ್ಯ'

(Imp., V. Imp.) ಎಂದೆಲ್ಲ ಬೇಕಾದರೆ ಕೆಂಪು ಬಣ್ಣದಲ್ಲೇ ನಮೂದಿಸಿ, ಹಿಂದೆ ಬಂದ ಪ್ರಶ್ನೆಗಳನ್ನೂ ಉಲ್ಲೇಖಿಸಿ ಗಮನ ಸೆಳೆಯಲ್ಪಡುವಂತೆ ಮಾಡಬೇಕು. ಆ ನೋಟ್ಸ್ ಅನ್ನು ಪದೇ ಪದೇ ಓದಿ ಬರೆಯಬೇಕು. ಹೀಗೆ ಚೆನ್ನಾಗಿ ನೋಟ್ಸ್ ಮಾಡುವುದರಿಂದ ಪಠ್ಯಪುಸ್ತಕದ ೨೦ ಪುಟ ಓದುವ ಬದಲು ನೋಟ್ಸ್‌ಪುಸ್ತಕದ ೪ ಪುಟ ಓದಿದರೆ ಸಾಕಾಗುತ್ತದೆ. ಇದರಿಂದ ಸಮಯದ ಅಪವ್ಯಯವೂ ತಪ್ಪುತ್ತದೆ, ಸ್ವಂತ ಪರಿಶ್ರಮದಿಂದಾಗಿ ನೆನಪಿನಲ್ಲಿಟ್ಟುಕೊಳ್ಳಲೂ ಬಹಳಷ್ಟು ಅನುಕೂಲವಾಗುತ್ತದೆ.

### ಕಲೆತು ಚರ್ಚಿಸುವುದರ ಲಾಭ....

ಓದುವಿಕೆಯಿಂದ ಜ್ಞಾನಕ್ಕೆ ಪೂರ್ಣತೆಯು ಬರುತ್ತದೆ, ಬರೆಯುವಿಕೆಯಿಂದ ತಿಳಿವಿಗೆ ನಿಖರತೆ ಸಿದ್ಧಿಸುತ್ತದೆ, ಒಮ್ಮನಸ್ಕರೆಲ್ಲ ಕಲೆತು ಚರ್ಚಿಸುವುದರಿಂದ ಪಟುತ್ವವು ಕರಗತವಾಗುತ್ತದೆ, ಒಬ್ಬರ ತಿಳಿವಿನ ಲಾಭ ಇನ್ನೊಬ್ಬರಿಗಾಗುತ್ತದೆ, ಒಬ್ಬರ ಸಂದೇಹ-ಗೊಂದಲಗಳು ಇನ್ನೊಬ್ಬರ ವಿವರಣೆ-ವಿಶ್ಲೇಷಣೆಗಳಿಂದ ದೂರವಾಗುತ್ತವೆ. ಆದರೆ ಕಲೆತು ಚರ್ಚಿಸತೊಡಗಿದಾಗ ವಿಚಾರಗಳ ಜಾಡು ಪಾಠವನ್ನು ಅತಿಕ್ರಮಿಸಿ ಎಲ್ಲೆಲ್ಲೋ ಲೋಕಾಭಿರಾಮವಾಗಿ ಹೋಗುವ ಒಂದು ಅಪಾಯ ಇಲ್ಲಿದೆ. ಆದ್ದರಿಂದ ಕಲೆತು ಚರ್ಚಿಸುವುದು ಹರಟೆಯ ಬಣ್ಣ ತಳೆಯುವಂತಾಗದಿದ್ದರೆ ಖಂಡಿತವಾಗಿಯೂ ಅದರಿಂದ ಲಾಭ ಇದೆ.

### ವಿದ್ಯಾರ್ಥಿಯ ಲಕ್ಷಣಗಳು....

ಜ್ಞಾನಾರ್ಜನೆಯೇ ವಿದ್ಯಾರ್ಥಿ ಜೀವನದ ಜೀವಾಳವಾದುದರಿಂದ ತೀವ್ರವಾದ ಜ್ಞಾನಾಸಕ್ತಿ ವಿದ್ಯಾರ್ಥಿಯಲ್ಲಿರಲೇಬೇಕು. 'ನಾನು ತಿಳಿದುಕೊಳ್ಳಬೇಕು, ಚೆನ್ನಾಗಿ ತಿಳಿದುಕೊಳ್ಳಬೇಕು, ಇನ್ನಷ್ಟು ತಿಳಿದುಕೊಳ್ಳಬೇಕು, ಮತ್ತಷ್ಟು ತಿಳಿದುಕೊಳ್ಳಬೇಕು....,' ಎಂಬ ದೃಢಸಂಕಲ್ಪದ ಈ ತುಡಿತವೇ ಜ್ಞಾನಾರ್ಜನೆಯ ಹಾದಿಯಲ್ಲಿ ವಿದ್ಯಾರ್ಥಿಯನ್ನು ಮುನ್ನುಗ್ಗಿಸುವ ಅಂತಃಶಕ್ತಿ. ಈ ಆಸಕ್ತಿ ಇರುವಲ್ಲಿ ವಿದ್ಯಾರ್ಥಿಗೆ ವರಪ್ರಾಯವಾದ ಇನ್ನೊಂದು ಗುಣ ಏಕಾಗ್ರತೆ ಅಂಕುರಿಸುತ್ತದೆ. ಈ ಏಕಾಗ್ರತೆಯೇ ವಿಚಾರದ ಆಳಕ್ಕೆ ನೇರವಾಗಿ ಸಾಗುವ ಮಹಾಗುಣ. ಈ ಆಸಕ್ತಿಯ ಜೊತೆ ಏಕಾಗ್ರತೆಯೂ ಸೇರಿದಾಗ ವಿದ್ಯಾರ್ಥಿಯಲ್ಲಿ 'ನಾನಿದನ್ನು ಸಾಧಿಸಲೇಬೇಕು' ಎಂಬ ದೃಢನಿರ್ಧಾರ ಮೈದಳೆಯುತ್ತದೆ. ಆ ನಿರ್ಧಾರ ಬಲವಾದಷ್ಟೂ ವಿದ್ಯಾರ್ಥಿಯಲ್ಲಿ ಅಂತಃಶಕ್ತಿ ಉಕ್ಕುತ್ತದೆ. ಆತನಿಗೆ ಕಲಿಕೆಯಲ್ಲಿ ತಾನಾಗಿಯೇ ರುಚಿ ಹೆಚ್ಚುತ್ತದೆ. 'ಅಪಾರ ಜ್ಞಾನಸಾಗರದೆದುರು ನಾನೇನೂ ಅಲ್ಲ' ಎಂದು ಕರಗುವ ಸೊನ್ನೆತನದ ವಿನಮ್ರ ಭಾವ-ಶ್ರದ್ಧೆ ಅವನಲ್ಲಾಗ ಅರಳುತ್ತದೆ. ಈ ಶ್ರದ್ಧೆ ಜ್ಞಾನಭಂಡಾರದ ಬಾಗಿಲನ್ನು ತೆರೆದೇ ಇರಿಸಿ ಮತ್ತಷ್ಟು, ಇನ್ನಷ್ಟು ತಿಳಿವನ್ನು ತೆರೆದ ಕೈಯಿಂದ ಸ್ವಾಗತಿಸುವಂಥದು. ಲೆಕ್ಕದಲ್ಲಿ ನೂರು ಮಾರ್ಕುಗಳಿಸಬೇಕೆಂದು ನಿರ್ಧರಿಸಿದವನಿಗೆ ಮೊದಲ ಪರೀಕ್ಷೆಯಲ್ಲಿ ೭೫ ಮಾರ್ಕುಗಳು ಮಾತ್ರ ದೊರೆತಾಗ ಆತನಿಗೆ ಸಾಂತ್ವನ ನೀಡುವುದು ಈ ಅಚಲ ಶ್ರದ್ಧೆಯೇ. ಅದೇ ಆಗ ವಿವೇಕವನ್ನು ಬೆಳಗಿಸಿ 'ಯಾಕೆ ಕಡಿಮೆ ಮಾರ್ಕು ದೊರೆಯಿತು ? ಎಲ್ಲಿ ತಪ್ಪಾಗಿದೆ ?' ಎಂಬ ಆತ್ಮವಿಮರ್ಶೆಯ ಗುಂಡಿಯನ್ನು ಒತ್ತುತ್ತದೆ. ಜೊತೆ ಜೊತೆಗೆ ಇನ್ನೊಮ್ಮೆ ಪ್ರಯತ್ನಿಸಿ ಸಾಧಿಸಲೇಬೇಕೆಂಬ ಛಲ ಗರಿಗೆದರುವಂತೆ ಮಾಡುತ್ತದೆ. ಗುರಿ ಸೇರುವ ದೃಢನಿರ್ಧಾರದ ಜೊತೆ ಈ ಛಲವೂ ಸೇರಿದಾಗ ಅದು ನಿಷ್ಠೆ ಆಗುತ್ತದೆ. ಈ ಏಕನಿಷ್ಠೆ ಸತತ ಪ್ರಯತ್ನದ ಜೊತೆಗಾರ. ಸೋಲರಿಯದೆ ತಿರುತಿರುಗಿ ಪ್ರಯತ್ನಿಸುತ್ತ ಸಾಗಿದಂತೆ ಯಶಸ್ಸಿನ ಶಿಖರ ಸಮೀಪಿಸಿಯೇ ಸಮೀಪಿಸುತ್ತದೆ. ಆದ್ದರಿಂದ ತೀವ್ರಜ್ಞಾನಾಸಕ್ತಿ ದೃಢನಿರ್ಧಾರ, ನಲುಗದ ಏಕಾಗ್ರತೆ, ಅಚಲಶ್ರದ್ಧೆ, ಬಿಡದ ಛಲ, ಸತತ ಪ್ರಯತ್ನಶೀಲತೆಗಳೇ ವಿದ್ಯಾರ್ಥಿಜೀವನದ ಯಶಸ್ಸಿಗೆ ವಿದ್ಯಾರ್ಥಿಯಲ್ಲಿರಬೇಕಾದ ಗುಣರತ್ನಗಳು.

### ಗುರು-ಹಿರಿಯರಲ್ಲಿ ಭಕ್ತಿ-ಗೌರವ

ನೀರಿನ ಟ್ಯಾಂಕಿನ ಅಡಿಗಡೆಯಲ್ಲಿ ತಂಬಿಗೆ ಇಟ್ಟರೆ ಮಾತ್ರ ಅದರಲ್ಲಿ ನೀರು ತುಂಬೀತೇ ಹೊರತು ಟ್ಯಾಂಕಿನ ಮೇಲಿಟ್ಟಾಗ ಅಲ್ಲ ತಾನೇ ? ಅದೇ ರೀತಿ ಜ್ಞಾನವೃದ್ಧರೂ, ವಯೋವೃದ್ಧರೂ ಆದ ಗುರುಹಿರಿಯರಿಂದ ಕಲಿಯಲು ಬಯಸುವ ವಿದ್ಯಾರ್ಥಿ ಅವರಲ್ಲಿ ಭಕ್ತ್ಯಾದರಗಳನ್ನು ತೋರುತ್ತ

"ಅದನ್ನು ಮಾಡಬೇಕು, ಇದನ್ನು ಮಾಡಬೇಕು.... ಬೇಕು... ಬೇಕು ಎಂದೆಲ್ಲ ಅದಿದನ್ನು ಎಣಿಸಿಕೊಳ್ಳುವುದೇನೋ ಹೌದು. ಆದರೆ ಅದನ್ನೆಲ್ಲ ಮಾಡಲು ಸಮಯ ಸಿಕ್ಕೀತೇ? ಆಯುಷ್ಯವಂತೂ ಭರದಿಂದ ಕಳೆದೇ ಹೋಗುತ್ತಿದೆ. ದಿನವೂ ನಾವು ಹಳಬರಾಗುತ್ತಿದ್ದೇವೆ, ಸಾವಿಗೆ ಸಮೀಪವಾಗುತ್ತಿದ್ದೇವೆ. ಹಾಗಿರುವಾಗ ಇಂದಾಗದೆ ಇರುವುದು ನಾಳೆ ಕೈಗೂಡುವುದು ಸಾಧ್ಯವೆ? ಇಂದಿನ ಹೀಟ್ಸ್‌ನಲ್ಲಿ ಗೆಲ್ಲದವರು ನಾಳಿನ ಫೈನಲ್‌ನಲ್ಲಿ ಭಾಗವಹಿಸುವುದು ಹೇಗೆ? ಆದ್ದರಿಂದ ಇಂದು ಮಾಡಬೇಕೆಂದೆಣಿಸಿದುದನ್ನು ಇಂದೇ ಚೆನ್ನಾಗಿ ಮಾಡಿ ಮುಗಿಸಿ! ನಿಮ್ಮ ಕ್ರಿಯಾಶಕ್ತಿಯು ಇಚ್ಛಾಶಕ್ತಿಯನ್ನು ಬೆಂಬತ್ತಿಯೇ ಸಾಗಲಿ. ಆಗಲೇ ಮಹತ್ ಸಾಹಸ-ಸಾಧನೆಯು ಕನಸು ನನಸು! ಆದ್ದರಿಂದಲೇ ಜೀವನ ಯಾತ್ರೆ ನಿಜಕ್ಕೂ ಸೊಗಸು."

ವಿನೀತವಾಗಿರುವುದು ತೀರ ಅವಶ್ಯ. ವಿದ್ಯಾರ್ಥಿ ಈ ರೀತಿ ಭಕ್ತಿಗೌರವಗಳನ್ನು ತೋರಿಸುತ್ತ ಬಂದಲ್ಲಿ ಗುರುಹಿರಿಯರಿಗೂ ಆತನಲ್ಲಿ ವಿಶೇಷ ಪ್ರೀತಿ ವಿಶ್ವಾಸಗಳು ಉಕ್ಕಿ, ತಮ್ಮ ಅನುಭವದ, ಜ್ಞಾನದ ಕೆನೆತೆನೆಗಳನ್ನೆಲ್ಲ ಆತನಿಗೆ ಧಾರೆಯೆರೆಯಲು ಅವರನ್ನು ಪ್ರೇರಿಸಿಯಾವು. ವಿದ್ಯಾರ್ಥಿಜೀವನದ ಯಶಸ್ಸಿನ ಶೇಕಡಾ ೨೦ರಷ್ಟು ಈ ಗುರುಹಿರಿಯರ ಆಶೀರ್ವಾದದ ಫಲವೇ.

## ಸ್ಮರಣಶಕ್ತಿಯನ್ನು ಹೆಚ್ಚಿಸಿಕೊಳ್ಳುವುದು ಹೇಗೆ?

ಪರೀಕ್ಷೆಯಲ್ಲಿ ಹೆಚ್ಚು ಅಂಕಗಳು ದೊರೆಯುವುದೂ, ಬುದ್ಧಿವಂತಿಕೆಯ ಪಟ್ಟ ದೊರೆಯುವುದೂ ಕಲಿತ ವಿಚಾರಗಳು ನೆನಪಿಗೆ ಬಂದು ಸರಿಯಾಗಿ ಉತ್ತರ ಬರೆಯಬಲ್ಲವನಿಗೆ. ಆದ್ದರಿಂದ ಒಂದು ದೃಷ್ಟಿಯಲ್ಲಿ ಸ್ಮರಣಶಕ್ತಿವಂತರೇ ಬುದ್ಧಿವಂತರು. ಕೆಲವೊಮ್ಮೆ ವಿಚಾರಗಳನ್ನು ಗ್ರಹಿಸುವುದೇ ಕಷ್ಟವಾಗುತ್ತದೆ. ಇನ್ನು ಕೆಲವೊಮ್ಮೆ ಗ್ರಹಿಸಿದ ವಿಚಾರಗಳು ನೆನಪಿಗೆ ಬಾರದೆ ತೊಂದರೆಯಾಗುತ್ತದೆ. ಈ ಎರಡೂ ಸಂದರ್ಭಗಳಲ್ಲಿ ಬುದ್ಧಿಯದೇ ನಿರ್ಣಾಯಕ ಪಾತ್ರ. ವಿದ್ಯಾಭ್ಯಾಸದ ಯಶಸ್ಸು ನಿಜವಾಗಿಯೂ ಗ್ರಹಣಶಕ್ತಿ ಮತ್ತು ಅಭಿವ್ಯಕ್ತಿಗಳನ್ನೇ (input and output) ಅವಲಂಬಿಸಿದೆ. ಇವೆರಡೂ ಸಮರ್ಪಕವಾಗುವಂತೆ ಮಾಡಿದರೆ ಸ್ಮರಣಶಕ್ತಿ ತನ್ನಿಂದ ತಾನಾಗಿ ಹೆಚ್ಚುತ್ತದೆ.

ಮನೋಮಂಡಲದಲ್ಲಿ ಮನಸ್ಸು (Mind), ಬುದ್ಧಿ (Will), ಮತ್ತು ಚಿತ್ತ (Intellect)ಗಳೆಂಬ ಮೂರು ಭಾಗಗಳಿವೆ. ಮನಸ್ಸು ಅನುಭವಗಳ ಹೆಬ್ಬಾಗಿಲು. ಅದು ಕಣ್ಣು, ಕಿವಿ, ಮೂಗು, ನಾಲಿಗೆ, ಚರ್ಮಗಳೆಂಬ ಪಂಚೇಂದ್ರಿಯಗಳಿಂದ ಬರುವ ನಾನಾ ಸಂವೇದನೆಗಳನ್ನು-ಯೋಚನೆಗಳನ್ನು ಗ್ರಹಿಸುತ್ತದೆ. ಆ ಯೋಚನೆಗಳನ್ನು ವಿಮರ್ಶೆಗಾಗಿ ಅದು ಬುದ್ಧಿಗೆ ದಾಟಿಸುತ್ತದೆ. ಬುದ್ಧಿಯು ಆ ಯೋಚನೆಗಳನ್ನು ತಳದ ಚಿತ್ತಪ್ರದೇಶಕ್ಕೆ ದಾಟಿಸಲೂಬಹುದು ಅಥವಾ ತಾನೇ ಹೀರಿ ಕೈಕಾಲುಗಳೆಂಬ ಕರ್ಮೇಂದ್ರಿಯಗಳನ್ನು ಯಥಾವತ್ ಪ್ರಚೋದಿಸಲೂಬಹುದು. ಹೀಗೆ ಬುದ್ಧಿಯನ್ನು ದಾಟಿ ಚಿತ್ತಕ್ಕಿಳಿದ ಯೋಚನೆ ಅಲ್ಲಿ ನೆಲೆನಿಲ್ಲುತ್ತದೆ. ಈ ಚಿತ್ತ ಯೋಚನೆಗಳ ತಂಗುದಾಣ, ಜ್ಞಾನಭಂಡಾರ. ಯೋಚನೆಯು ಮನದಾಳಕ್ಕಿಳಿದು ಚಿತ್ತದಲ್ಲಿ ನೆಲೆಗೊಳ್ಳುವುದನ್ನೇ ಮನದಟ್ಟಾಗುವುದು ಎನ್ನುತ್ತೇವೆ. ತಿಳುವಳಿಕೆಯು ಜ್ಞಾನವಾಗುವುದು ಆಗಲೇ. ಹಾಗೆ ಮನದಟ್ಟಾದಲ್ಲಿ, ಬ್ಯಾಂಕಿನಲ್ಲಿಟ್ಟ ಹಣವನ್ನು ಬೇಕೆಂದಾಗ ಚೆಕ್ ಬರೆದು ತರಿಸಿಕೊಂಡಂತೆ, ಚಿತ್ತದ ಸಂಗ್ರಹಾಲಯದಿಂದ ಬೇಕೆಂದಾಗ ಆ ಯೋಚನೆಯನ್ನು ಮನದಂಗಳಕ್ಕೆ ಪುನಃ ತರಿಸಿಕೊಳ್ಳಲೂ ಸಾಧ್ಯ. ಈ ಸಾಮರ್ಥ್ಯವನ್ನೇ ಸ್ಮರಣಶಕ್ತಿ ಎನ್ನುವುದು. ಮನಸ್ಸು ಮತ್ತು ಚಿತ್ತಗಳ ನಡುವಣ ಬುದ್ಧಿಯು ಬೆಣ್ಣೆಯಂತೆ ಯಾವ ಪ್ರತಿರೋಧವನ್ನೂ ಒಡ್ಡದೆ ಯೋಚನೆಗಳ ಸಂಚಾರಕ್ಕೆ ಎಡೆಮಾಡಿ ಕೊಡುತ್ತಿದ್ದಲ್ಲಿ, ಯೋಚನೆಗಳೆಲ್ಲವೂ ಮನದಟ್ಟೂ ಆಗುತ್ತಿದ್ದವು. ಬೇಕೆಂದಾಗ ಬೇಗ ನೆನಪಿಗೂ ಬರುತ್ತಿದ್ದವು. ಆಗ 'ಮೆಮರಿ' ಗುಂಡಿ ಒತ್ತಿದೊಡನೆಯೇ ಅಂತರ್ಗತ ಮಾಹಿತಿಗಳನ್ನೆಲ್ಲ ಒಡಮೂಡಿಸುವ ಕಂಪ್ಯೂಟರ್‌ನಂತೆ ನೆನಪಿನ ಸುರುಳಿ ಬಿಚ್ಚಿ ಮನಃಪಟಲದಲ್ಲಿ ವಿಚಾರಗಳೆಲ್ಲವೂ ಮೂಡಿ, ಬಹುಶಃ ಎಲ್ಲರೂ ಜಾಣರಲ್ಲಿ ಜಾಣರೇ

ಆಗಿ, ಎಲ್ಲರಿಗೂ ರ್‍ಯಾಂಕೋ ರ್‍ಯಾಂಕು! ಆದರೆ ಹಾಗಾಗುತ್ತಿಲ್ಲ ಯಾಕೆ? ಮನದಟ್ಟಾಗುವಿಕೆ ಹಾಗೂ ನೆನಪಾಗುವಿಕೆ ಅಷ್ಟು ಸಲೀಸಾಗದಂತೆ ತಡೆಯೊಡ್ಡುವುದೇ ಬುದ್ಧಿ. ಬುದ್ಧಿಯು ಮಧ್ಯದ ಪದರು ಅಡ್ಡಗೋಡೆಯಂತೆ ಯೋಚನೆಗಳು ಚಿತ್ತವನ್ನು ಸೇರದಂತೆಯೂ ತಡೆಯೊಡ್ಡುತ್ತದೆ. ಚಿತ್ತದಲ್ಲಿ ಸೇರಿದ ಯೋಚನೆಗಳು ತಿರುಗಿ ಮನಸ್ಸಿಗೆ ಅಂದರೆ ಸ್ಮರಣೆಗೆ ಬರದಂತೆಯೂ ಅಡ್ಡಗಟ್ಟುತ್ತದೆ. ಬುದ್ಧಿಯ ಕೈವಾಡಕ್ಕೆ ಕಾರಣಗಳು ಹಲವು.

"ಬಂಧಿಸುವ ಒಂಬತ್ತು ಮಂದಿ"

ವ್ಯಕ್ತಿತ್ವ ವಿಕಸನಕ್ಕೆ ಮಾರಕವಾಗಿ, "ಬಂಧಿಸುವ ೯ ಮಂದಿ" ಎಂದೇ ಕುಖ್ಯಾತರಾದ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ, ಅಹಂಕಾರ, ಮಮಕಾರ, ಸಂಶಯಗಳ ಕಾರಸ್ಥಾನವೂ ಬುದ್ಧಿಯೇ. ಅವುಗಳೆಲ್ಲ ದ್ವೇಷ-ವೈಷಮ್ಯದಿಂದ ಕತ್ತಿ ಮಸೆಯುತ್ತ ಸೋಲು-ಸಂಕಷ್ಟಗಳ ಬೆದರಿಕೆ ಹಾಕಿ ವ್ಯಕ್ತಿಯನ್ನು ಕುಣಿಸಿ ಕಂಗಾಲಾಗಿಸಲು ಇಲ್ಲಿ ಷಡ್ಯಂತ್ರ ರಚಿಸುತ್ತಲೇ ಇರುತ್ತವೆ. ಅವುಗಳ ಪ್ರೇರಣೆಗೆ ತಲೆಬಾಗಿ ವ್ಯಕ್ತಿ ದುಷ್ಟಸಂಗಕ್ಕಾಗಿ ಹಾತೊರೆದು, ಅವಿವೇಕಿಯಾಗುವಂತೆ ಅವು ಮೋಡಿಮಾಡುತ್ತವೆ. ಬುದ್ಧಿ ಸ್ವಾಸ್ಥ್ಯ ಇಲ್ಲ ಎಂದರೆ ಅದರ ಅರ್ಥ ಇಷ್ಟೆ: ಆಗ ಬುದ್ಧಿಯಲ್ಲಿ ನಡೆಯುವ ಅಂತಃಕಲಹದ ಸ್ಫೋಟದಿಂದಾಗಿ ಬುದ್ಧಿಯೇ ಮನಸ್ಸನ್ನೂ, ಚಿತ್ತ ಪ್ರದೇಶವನ್ನೂ ಆಕ್ರಮಿಸಿ ದೊಳ್ಳಾಗುತ್ತದೆ! ಆದರಿಂದ ಮನದಟ್ಟೂ ಆಗದು, ನೆನಪಿನಶಕ್ತಿಯೂ ಇರದು.

ನಿಮ್ಮ ರೂಮಿಗೆ ಹೋಗುವ ದಾರಿಯಲ್ಲಿ ಘೋರ ಕಾಳಗ-ಕೋಲಾಹಲ ನಡೆಯುತ್ತಿದ್ದಲ್ಲಿ ಅವನ್ನೆಲ್ಲ ಎದುರಿಸಿ ರೂಮಿಗೆ ಹೋಗಲು ನೀವು ಸೋಲುವಂತೆ, ಆಗ ಮನಸ್ಸಿನ ಯೋಚನೆಯ ಅಲೆಗಳು ಬುದ್ಧಿಯನ್ನು ದಾಟಿ ಚಿತ್ತಕ್ಕೆ ಹೋಗಲಾರದಾಗುತ್ತವೆ. ಆಲೋಚನೆಯ ಅಲೆಗಳಿಗೂ, ಬುದ್ಧಿಯ ಪ್ರಕ್ಷುಬ್ಧ ಪರಿಸ್ಥಿತಿಗೂ ಆಗುವ ತಾಕಲಾಟದಿಂದಾಗಿ ಓದಲು ಕೂತರೆ ಏಕಾಗ್ರತೆ ಬಾರದು, ಓದಿನಲ್ಲಿ ಅಲರ್ಜಿ ಹುಟ್ಟಿ ಗೆಳೆಯರ ಸಂಗಡ ಹರಟೆ ಹೊಡೆಯುತ್ತ ಮೆರೆಯುವ, ಸಿನೆಮಾ ನೋಡಿ ಮಜಾ ಮಾಡುವ ಚಾಳಿಯ ಸೆಳೆತ ಬಲವಾಗುತ್ತದೆ. "ಬಂಧಿಸುವ ೯ ಮಂದಿ" ನಿಮ್ಮ ಏಳ್ಗೆಯನ್ನು ಸಹಿಸದೆ ಆಂತರಿಕ ಭೀತಿ ಹುಟ್ಟಿಸಿ ನಿಮ್ಮನ್ನು ಹಿಮ್ಮೆಟ್ಟಿಸಲು ತಂತ್ರ ಹೂಡುತ್ತವೆ. ಮುಂದಿನ ಬಾರಿ ಸರಿಯಾಗಿ ಓದಿ ಪರೀಕ್ಷೆಗೆ ಹಾಜರಾದರಾಯಿತೆಂಬ ಹುಚ್ಚು ಭ್ರಮೆ ಹುಟ್ಟಿಸುತ್ತವೆ. (ಗಲಾಟೆ ಮಾಡಿ ಪರೀಕ್ಷೆ ಮುಂದೂಡಿಸಬೇಕೆಂಬ ಪ್ರೇರಣೆ ಹುಟ್ಟುವುದೂ ಇಲ್ಲಿಂದಲೇ!) ತಮ್ಮ ಪ್ರತಿನಿಧಿಯಾಗಿ ನಿದ್ರಾದೇವಿಯನ್ನು ಕಳುಹಿಸಿ ನಿಮ್ಮನ್ನು ಬೇಗ ವಶಮಾಡಿಕೊಳ್ಳಲೂ ಅವು ಹಿಂದಾಗವು.

ಯೋಚನೆಯ ಅಲೆಗಳ ವರ್ಚಸ್ಸು ಬುದ್ಧಿಯ ಕೋಲಾಹಲದ ಮುದ್ದೆಯನ್ನು ದಾಟಿ ಚಿತ್ತವನ್ನು ಪ್ರವೇಶಿಸುವುದು ಅಸಾಧ್ಯವಾಗುವುದರಿಂದಲೇ ಚಿತ್ತ ಬೆಳಗದು. ಆದರಿಂದಾಗಿ ವಿಚಾರಗಳು ಮನದಟ್ಟಾಗದೆ ವಿದ್ಯಾರ್ಥಿ ತೊಳಲಾಡುವಂತಾಗುತ್ತದೆ. ಒಂದೊಮ್ಮೆ ಮನದ ಯೋಚನಾ ತರಂಗಗಳು ತೀವ್ರ ಪ್ರಯತ್ನದಿಂದ ಬುದ್ಧಿಯ ವ್ಯೂಹವನ್ನು ದಾಟಿ ಚಿತ್ತವನ್ನು ಪ್ರವೇಶಿಸಿ, ಮನವರಿಕೆ ಆದಂತೆ ಅನಿಸಿದರೂ, ಪರೀಕ್ಷಾ ಕೋಣೆಯಲ್ಲಿ, ಉತ್ತರಿಸುವಾಗ ಅವು ಮರಳಿ ಮನದಂಗಣಕ್ಕೆ ಬರಲಾರವು. ಪರಿಣಾಮವಾಗಿ ಓದಿದ ವಿಚಾರಗಳನ್ನು ನೆನಪಿಸಿಕೊಳ್ಳಲಾರದೆ ತನ್ನ ವಿಧಿಯನ್ನೇ ಶಪಿಸುತ್ತ ವಿದ್ಯಾರ್ಥಿ ನಿರಾಶನಾಗಿ ಪರೀಕ್ಷಾ ಕೋಣೆಯಿಂದ ನಿರ್ಗಮಿಸುವಂತಾಗುತ್ತದೆ.

ಸಂವಹನ ಸಾಮರ್ಥ್ಯ

ಅಂದರೆ ಬುದ್ಧಿವಂತಿಕೆಯು ಬುದ್ಧಿಯು ಶುದ್ಧವಾಗಿರುವುದನ್ನೇ ಅಥವಾ ಯೋಚನೆಗಳ ಸಂವಹನ ಸಾಮರ್ಥ್ಯ ನಿರಾತಂಕವಾಗಿರುವುದನ್ನೇ ಅವಲಂಬಿಸಿದೆ. ಕೆಲವರಲ್ಲಿ ಹುಟ್ಟಿನಿಂದಲೇ ಈ ಬುದ್ಧಿಯ ಕೋಲಾಹಲ ಕಡಿಮೆ ಇರುತ್ತದೆ. ಅವರು ಹುಟ್ಟಿನಿಂದಲೇ ಬುದ್ಧಿವಂತರು. ಆಂತರಿಕ ಪ್ರತಿರೋಧ ಕಡಿಮೆ ಇರುವುದರಿಂದ ಅವರಿಗೆ ಬೇಗ ಮನದಟ್ಟಾಗುತ್ತದೆ. ಎಣಿಸಿದಾಕ್ಷಣ ನೆನಪಿಗೆ ಬರುತ್ತದೆ. ಬುದ್ಧಿಯ ತಾಕಲಾಟವನ್ನು ಕಡಿಮೆಮಾಡಿ, ಯೋಚನಾತರಂಗಗಳಿಗೆ ಬುದ್ಧಿಯನ್ನು ಸಲೀಸಾಗಿ ದಾಟಿ, ಬೇಕೆಂದಾಗ ಮನವನ್ನು ಸೇರಲು ವ್ಯವಸ್ಥೆ ಮಾಡುವುದರಿಂದ ಎಲ್ಲರೂ ಆ ರೀತಿಯಲ್ಲಿ ಬುದ್ಧಿ

ವಂತರಾಗಬಹುದು.

ಒತ್ತಿಟ್ಟ ಸ್ಪ್ರಿಂಗ್ ಮೇಲಿನ ಒತ್ತಡ ಸಡಿಲಾದೊಡನೆಯೇ ಅದು ಧಂಗನೆ ನೆಗೆಯುವಂತೆ, ಈ ರೀತಿಯ ಪ್ರೇರಕ ಬಲಗಳ ಪ್ರಾಬಲ್ಯ ಕಡಿಮೆಯಾದರೆ ಬುದ್ಧಿ ಕಲುಷಿತವಾಗಿ ಸ್ಮರಣಶಕ್ತಿ ಕುಂದೀತು. ಆದ್ದರಿಂದ ಅವುಗಳ ಪ್ರಾಬಲ್ಯ ಕಡಿಮೆಯಾಗದಂತೆ ದಿನದಿನವೂ ಮನಸ್ಸಿಗೆ 'ನಾನು ದಿನೇ ದಿನೇ ಎಲ್ಲ ವಿಧಗಳಲ್ಲೂ ಉತ್ತಮಗೊಳ್ಳುತ್ತಿದ್ದೇನೆ' ಎಂಬ ಸೂಚನೆಯನ್ನು ಕೊಡುತ್ತ ದಿನೇದಿನೇ ಸ್ಮರಣಶಕ್ತಿ ಹೆಚ್ಚುತ್ತಿದೆ ಎಂಬ ಆತ್ಮ ವಿಶ್ವಾಸ ಬಲಿಸಿಕೊಳ್ಳುವುದು ತೀರ ಅವಶ್ಯ. ಇದು ಬುದ್ಧಿಯ ಹಡಗ ಹೊಡೆಯುವ ಕೊಡತಿಯ ಏಟೇ ಆಗುತ್ತದೆಂಬುದನ್ನು ಮರೆಯದಿರಿ. ಯಾವಾಗಲೂ ರಾತ್ರಿ ಮಲಗುವಾಗಿನ ಯೋಚನೆಗಳ ಬೇರು ಮನದಾಳಕ್ಕೆ ಇಳಿಯುತ್ತದೆ; ಬೆಳಗ್ಗೆ ಏಳುವಾಗಿನ ಯೋಚನೆಗಳೇ ದಿನವೆಲ್ಲ ಚಿಗುರಿ ಫಲಿಸುತ್ತವೆ. ಆದ್ದರಿಂದ ದಿನವೂ ರಾತ್ರಿ ಮಲಗುವ ಮೊದಲೂ, ಬೆಳಗ್ಗೆ ನಿದ್ರೆಯಿಂದೆದ್ದೊಡನೆಯೂ ಈ ರೀತಿ ಹತ್ತು ಬಾರಿಯಾದರೂ ಸ್ಪಷ್ಟವಾಗಿ ಉಚ್ಚರಿಸಿ, 'ಅಸಾಮಾನ್ಯ ಸ್ಮರಣಶಕ್ತಿ ನನ್ನದು, ನಾನು ಏನನ್ನೂ ಚೆನ್ನಾಗಿ ಅರ್ಥಮಾಡಿಕೊಂಡು ಬೇಕೆಂದಾಗ ನೆನಪಿಸಿಕೊಳ್ಳಬಲ್ಲೆ' ಎಂಬ ಭರವಸೆಯ ಭಾವವನ್ನು ಪ್ರೇರಿಸಿಕೊಳ್ಳಬೇಕು. ಕಾಲೇಜಿನಲ್ಲಿ ಗಮನವಿತ್ತು ಪಾಠ ಕೇಳಿ ಅರ್ಥಮಾಡಿಕೊಳ್ಳುವುದು, ಚೆನ್ನಾಗಿ ನೋಟ್ಸ್ ಮಾಡಿಕೊಳ್ಳುವುದು ಆ ವಿಚಾರಗಳಿಗಿರುವ ಪರಸ್ಪರ ಸಂಬಂಧ ಅರಿತು ಅನಂತರ ಓದಿ ಬರೆದು ಮನನ ಮಾಡುವುದು, ಮೆಲುಕುಹಾಕುವುದು ಇವೇ ನಿಮ್ಮ ಕರ್ತವ್ಯವಾಗಬೇಕು. ಒಂದೊಮ್ಮೆ ಒಂದು ಪರೀಕ್ಷೆಯಲ್ಲಿ ನಿಮ್ಮೆಣಿಕೆಯಷ್ಟು ಮಾರ್ಕುಗಳು ಸಿಗದಿದ್ದರೂ ಅಧೀರರಾಗುವುದಲ್ಲ, ಪ್ರಯತ್ನಶೀಲತೆ ಹೆಚ್ಚಬೇಕೆಂಬುದನ್ನೇ ಅದು ಸೂಚಿಸುತ್ತದೆಂದು ತಿಳಿದು ದಿನದಿನವೂ ನಿಷ್ಠೆಯಿಂದ ಪ್ರಯತ್ನಿಸಬೇಕು. ಸತತ ಪ್ರಯತ್ನ ಸ್ಮರಣ ಶಕ್ತಿಯನ್ನು ಹಸಿರಾಗಿರಿಸುತ್ತದೆ. ಬುದ್ಧಿವಂತಿಕೆಯ ಮೆರುಗೇರಿಸುತ್ತದೆ.

### ಏಕಾಗ್ರತೆ ಸಾಧಿಸುವುದು ಹೇಗೆ?

ಓದಲು ಪುಸ್ತಕ ಬಿಡಿಸುತ್ತಾರೆ-ಲೆಕ್ಕ ಮಾಡಬೇಕೆಂಬ ನೆನಪಾಗುತ್ತದೆ. ಲೆಕ್ಕ ಮಾಡತೊಡಗುತ್ತಾರೆ-ಅಷ್ಟರಲ್ಲೇ ಆಡಲು ಗೆಳೆಯನಿಂದ ಕರೆ ಬರುತ್ತದೆ. ಸರಿ, ಅದನ್ನೆಲ್ಲ ಅಲ್ಲೇ ಬಿಟ್ಟು ಆಡಲು ಓಡುತ್ತಾರೆ-ಇದು ಚಂಚಲ ಮನಸ್ಸಿನ ವಿದ್ಯಾರ್ಥಿಗಳ ಪಾಡು. ಯಾವ ಕೆಲಸವನ್ನೂ ಪೂರ್ಣ ಮಾಡುವ ವ್ಯವಧಾನ ಅವರಿಗಿಲ್ಲ-ಎಲ್ಲ ಅರ್ಧರ್ಧ. ಯುದ್ಧರಂಗದಲ್ಲಿ ವೀರಯೋಧನೊಬ್ಬ ವೈರಿ ಬಣದ

ಒಬ್ಬೊಬ್ಬನನ್ನೇ ಸದೆ ಬಡಿದು ಮುಂದೆ ಸಾಗುವಂತೆ ಹಿಡಿದ ಒಂದೊಂದೇ ಕೆಲಸವನ್ನು ಬಿಡದೇ ಚೆನ್ನಾಗಿ ಮಾಡಿ ಮುಗಿಸಿಯೇ ಇನ್ನೊಂದು ಕೆಲಸದಲ್ಲಿ ತೊಡಗುವ ಛಲ-ಬಲ ಬೇಕು. ಇದನ್ನೇ ಏಕಾಗ್ರತೆ ಎನ್ನುವುದು. ಈ ಏಕಾಗ್ರತೆಯೇ ಜ್ಞಾನಭಂಡಾರದ ಕೀಲಿಕೈ. ಚದುರಿದ ಬೆಳಕಿನ ಕಿರಣಗಳನ್ನು ಪೀನ ಮಸೂರದ ಸಹಾಯದಿಂದ ಒಮ್ಮುಖವಾಗಿಸಿ ಏಕಾಗ್ರಗೊಳಿಸಿದಾಗ ಬೆಂಕಿ ಉಂಟಾಗುವಷ್ಟು ಶಾಖ ಹೆಚ್ಚುವಂತೆ, ಚದುರಿದ ಯೋಚನಾ ತರಂಗಗಳನ್ನೂ, ಕ್ರಿಯಾಶೀಲತೆಯನ್ನೂ ಒತ್ತಟ್ಟಿಗೆ ಹರಿಸಿದಾಗ ಅದ್ಭುತ ಶಕ್ತಿಸಾಮರ್ಥ್ಯ ಉಕ್ಕುವುದಂತೂ ಖಂಡಿತ. ಆದ್ದರಿಂದ ಸ್ಮರಣಶಕ್ತಿಯೂ ಹೆಚ್ಚುತ್ತದೆ, ಕ್ರಿಯಾಶಕ್ತಿಯೂ ವೃದ್ಧಿಸುತ್ತದೆ. ಅಷ್ಟು ಮಾತ್ರವಲ್ಲ, ಹಿಡಿದ ಕೆಲಸವನ್ನು ಚೆನ್ನಾಗಿ ಮಾಡಿ ಮುಗಿಸುವ ಕಾರ್ಯತತ್ಪರತೆ ಕೂಡಾ ಮೈಗೂಡಿ, ಯಶಸ್ಸು ತಾನಾಗಿಯೇ ಓಡೋಡಿ ಬರುತ್ತದೆ.

ಮನಸ್ಸಿನ ಚಾಂಚಲ್ಯಕ್ಕೆ ರೇಡಿಯೋ, ಟಿ.ವಿ., ಸಿನೆಮಾ, ದುಷ್ಟ ಸಹವಾಸ-ಹವ್ಯಾಸಗಳ ಸೆಳೆತ ಕಾರಣ. ವೋಲ್ಟೇಜ್ ಕಡಿಮೆಯಾಗಿ ಟ್ಯೂಬ್‌ಲೈಟ್ ಹತ್ತಿಕೊಳ್ಳದೆ 'ಝುಗ್, ಝುಗ್' ಎಂದು ಕುಣಿ' ಯುತ್ತಲೇ ಇದ್ದಾಗ ವೋಲ್ಟೇಜ್ ಹೆಚ್ಚಿಸಲು ನೀವೇನು ಮಾಡುವಿರಿ ? ಇಸ್ತ್ರಿ ಪೆಟ್ಟಿಗೆ ಸ್ವಿಚ್ ಆಫ್ ಮಾಡುವಿರಿ, ಗ್ರೈಂಡರ್ ಅನ್ನು ನಿಲ್ಲಿಸುವಿರಿ, ಫ್ಯಾನಿನ ಸ್ವಿಚ್ಚು ತೆಗೆಯುವಿರಿ. ಅಲ್ಲವೆ ? ಆಗ ಉಳಿದೆಡೆ ಹಂಚಿಹೋಗುವ ವೋಲ್ಟೇಜ್ ಒಂದೆಡೆಗೇ ಹರಿದು ಝುಗ್ ಎಂದು ಟ್ಯೂಬ್ ಲೈಟ್ ಹತ್ತಿಕೊಂಡು ಉರಿಯತೊಡಗುವುದಿಲ್ಲವೇ ? ಏಕಾಗ್ರತೆಗೆ ಮುಳುವಾಗಿರುವ ಹೊರಗಿನ ವೈರಿಗಳಿಂದ ಪಾರಾಗಲೂ ನೀವೀಗ ಇದೇ ರೀತಿಯ ಮಾರ್ಗವನ್ನು ಅನುಸರಿಸಬೇಕು. ಟಿ.ವಿ., ಸಿನೇಮಾ, ರೇಡಿಯೋ, ನಿಮ್ಮ ಸ್ನೇಹಿತರು, ಇವರಾರೂ ನಾಳಿನ ನಿಮ್ಮ ಜೀವನಕ್ಕೆ, ನಿಮ್ಮ ಭವಿಷ್ಯ ಉಜ್ವಲವಾಗುವುದಕ್ಕೆ ನೆರವಾಗರು ಎಂಬುದನ್ನು ವಿವೇಕದಿಂದ ವಿಮರ್ಶಿಸಿ, ಅವುಗಳ ಬಂಧನವನ್ನೆಲ್ಲ ಕಳಚಿಕೊಳ್ಳುವ ವೈರಾಗ್ಯ ಬೆಳೆಸಿಕೊಳ್ಳಬೇಕು. ಟಿ.ವಿ., ಸಿನೆಮಾಗಳ ಗೀಳನ್ನು ಸ್ವಿಚ್ ಆಫ್ ಮಾಡಿದಂತೆ ಬಿಟ್ಟೇ ಬಿಡಬೇಕು, ಸ್ನೇಹಿತರ ದುಷ್ಟಕೂಟದಲ್ಲಿ ಹರಟೆ ಹೊಡೆಯುತ್ತ ಕಾಲಹರಣ ಮಾಡುವುದಕ್ಕೆ ತಿಲಾಂಜಲಿ ಈಯಬೇಕು.

## ಇಂದಲ್ಲ ನಾಳೆ....

ಇದೇ ವೇಳೆಗೆ ಬುದ್ಧಿಯ ಓಕಳಾಟವನ್ನು ನಿಯಂತ್ರಿಸುವ ಅಭ್ಯಾಸವನ್ನೂ ಮಾಡಬೇಕು. ಅಲ್ಲಿ, ಇಲ್ಲಿ ಎಂದು ನಾಲ್ಕಾರು ಕಡೆ ಹೊಂಡವನ್ನು ತೋಡುವ ಬದಲು ಒಂದೇ ಕಡೆ ತೋಡುತ್ತ ಹೋದರೆ ನೀರು ಉಕ್ಕುವಂತೆ, ಒಂದು ಕೆಲಸವನ್ನು ಬಿಡದೆ ಮಾಡುವುದರಿಂದ ಮಾತ್ರ ಲಾಭ ಎಂಬುದನ್ನು ಮೊದಲು ಮನಗಾಣಬೇಕು. ನಾಳಿನ ನಿಮ್ಮ ಬದುಕಿಗೆ ದಾರಿಮಾಡುವ ನಿಮ್ಮ ಓದು ಬರಹವನ್ನು ನೀವು ತುಂಬಾ ಪ್ರೀತಿಸಬೇಕು. ಪ್ರೀತಿಯ ಬೆಸುಗೆ ಇರುವಲ್ಲಿ, ಆಸಕ್ತಿಯ ಆಕರ್ಷಣೆ ಇರುವಲ್ಲಿ ಮನಸ್ಸು ತನ್ನಿಂದ ತಾನಾಗಿ ಸೆಳೆಯಲ್ಪಟ್ಟು ನೆಲೆಗೊಳ್ಳುತ್ತದೆ. ಈ ಪ್ರೀತಿಯ ಬೆಸುಗೆಯೂ, ಏಕಾಗ್ರತೆಯ ತುಡಿತವೂ ವೃದ್ಧಿಸುವಂತೆ 'ಇನ್ನೂ ಹೆಚ್ಚಿನ ಏಕಾಗ್ರತೆಯಿಂದ ನಾನು ಕಾರ್ಯೋನ್ಮುಖನಾಗುವೆ' ಎಂಬ ಉನ್ನತಿಯ ತುಡಿತ ನಿಮ್ಮಲ್ಲಿ ಮಿಡಿಯಬೇಕು, ಆತ್ಮಶಕ್ತಿಯ ಕೆಚ್ಚು ನಿಮ್ಮಲ್ಲಿ ಉಕ್ಕಬೇಕು. ಸಾತ್ವಿಕ ಆಹಾರ, ಚೊಕ್ಕ ಪರಿಸರ, ನೆಟ್ಟಗೆ ಕುಳಿತು ಅತ್ತಿತ್ತ ಗಮನಕೊಡದೆ ಓದಿ ಬರೆಯುವ ಅಭ್ಯಾಸ- ಇವೆಲ್ಲವೂ ಏಕಾಗ್ರತೆಗೆ ಪ್ರೇರಕಗಳು, ಪೋಷಕಗಳು. ಆನೆಯನ್ನು ಇವತ್ತು ಪಳಗಿಸಲಾಗದಿದ್ದರೂ ನಿರಾಶನಾಗದೆ ತುಂಬು ಭರವಸೆಯಿಂದ ನಾಳೆ ಪುನಃ ಪ್ರಯತ್ನಿಸುವ ಮಾವುತನಂತೆ, ಏಕಾಗ್ರತೆಯನ್ನು ಸಾಧಿಸಲೇಬೇಕೆಂಬ ತುಡಿತದಿಂದ ನೀವು ಈ ರೀತಿ ಪುನಃ ಪುನಃ ಪ್ರಯತ್ನಿಸಿದ್ದೇ ಆದರೆ ಏಕಾಗ್ರತೆ ಒಡಮೂಡಿಯೇ ಮೂಡುತ್ತದೆ.

## ಆತ್ಮವಿಶ್ವಾಸ ವೃದ್ಧಿಸಿಕೊಳ್ಳಲು.....

ಯಾವಾಗಲೂ ಒರತೆ ಇರುವವರು ಮಾತ್ರ ಕೊರತೆ ನೀಗಬಲ್ಲರಲ್ಲವೇ ? ಧೈರ್ಯೋತ್ಸಾಹ-ಆತ್ಮವಿಶ್ವಾಸಗಳನ್ನು ಹೆಚ್ಚಿಸಿಕೊಳ್ಳಲು ನೀವು ಆ ಗುಣಗಳಿರುವ ಮಹಾನುಭಾವರನ್ನೂ, ಸಾಹಸಿ ಸಾಧಕರನ್ನೂ ಸಂಪರ್ಕಿಸಬೇಕು. ಅಂತಹ ಮಹಾನುಭಾವರ ಸಂಗ, ಸಹವಾಸ ಅಥವಾ ಅಂಥ ಸಾಧಕರ ಜೀವನ ಚರಿತ್ರೆಯ ವ್ಯಾಸಂಗ- ಇವೆಲ್ಲ ನಿಮ್ಮಲ್ಲೂ

ಧೈರ್ಯೋತ್ಸಾಹ, ಆತ್ಮವಿಶ್ವಾಸಗಳನ್ನು ಉಕ್ಕಿಸದಿರವು. ಇದರ ಜೊತೆ ಜೊತೆಗೇ 'ಧೈರ್ಯೋತ್ಸಾಹದ ನೆಲೆಯೂ, ಆತ್ಮವಿಶ್ವಾಸದ ಸೆಲೆಯೂ ನನ್ನೊಳಗಿದ್ದು ನನ್ನನ್ನು ಬದುಕಿಸುತ್ತಿರುವುದರಿಂದ ನಾನೂ ಧೈರ್ಯೋತ್ಸಾಹದ ಚೆಂಡು, ಆತ್ಮ ವಿಶ್ವಾಸದ ಕಡಲು, ಹಾಗಾಗಿ ನಾನು ಏನನ್ನೂ ಸಾಧಿಸಬಲ್ಲೆ' ಎಂಬ ಇತ್ಯಾತ್ಮಕ ಮನೋಭಾವವನ್ನು (positive mentality) ಅಥವಾ ಭರವಸೆಯನ್ನು ಬೆಳೆಸಿಕೊಳ್ಳಬೇಕು. ಈ ಭಾವವನ್ನು ನವೀಕರಿಸಿಕೊಳ್ಳುತ್ತ ದೃಢವಾಗಿಸಿಕೊಳ್ಳಬೇಕು, ಆತ್ಮಶಕ್ತಿ ಜಾಗೃತಗೊಳಿಸಿಕೊಳ್ಳಬೇಕು. ಸೂರ್ಯನ ಕಿರಣ ಸೋಂಕುತ್ತಲೇ ಅರಳುವ ಕಮಲದಂತೆ, ಆತ್ಮಶಕ್ತಿಜಾಗೃತಿಯಾಗುತ್ತಲೇ ಈ ಗುಣಗಳೆಲ್ಲ ತನ್ನಿಂದ ತಾನಾಗಿ ಮೂಡುತ್ತವೆಂಬುದಂತೂ ಕಟು ಸತ್ಯ.

### ಸಮಸ್ಯೆ ಬಗೆಹರಿಸುವ ರಾಜಮಾರ್ಗ

ಗಣಿತದ ಅಥವಾ ವಿಜ್ಞಾನ ಪಾಠದ ಸಮಸ್ಯೆಗಳನ್ನು ಬಗೆಹರಿಸುವಾಗ ವಿದ್ಯಾರ್ಥಿಯೊಬ್ಬ 'ಏನನ್ನು ಕೊಟ್ಟಿದ್ದಾರೆ ? ಏನಾಗಬೇಕಾಗಿದೆ ? ಹೇಗದನ್ನು ಸಾಧಿಸುವುದು ?' ಎಂದು ತನ್ನ ಹಿಂದಿನ ಅನುಭವವನ್ನು ಕೆದಕಿ ಬೆದಕುವಂತೆ ಯಾವುದೇ ಸಮಸ್ಯೆ ತಲೆದೋರಿದಾಗಲೂ ಅಧೀರರಾಗದೆ 'ಯಾಕೆ ಈ ಸಮಸ್ಯೆ ತಲೆದೋರಿದೆ ? ಏನಾಗಬೇಕಾಗಿದೆ ? ಅದನ್ನು ಸಾಧಿಸುವ ಬಗೆ ಎಂತು ?' ಎಂದು ವಿಮರ್ಶಿಸಬೇಕು, ವಿಶ್ಲೇಷಿಸಬೇಕು, ಆ ಬೆಳಕಿನಲ್ಲಿ ಕಾರ್ಯೋನ್ಮುಖರಾಗಬೇಕು. ಆಗ ಎಲ್ಲ ಸಮಸ್ಯೆಗಳೂ ಕರಗಿಯೇ ಹೋಗುತ್ತವೆ.

ನೈತಿಕ- ಆಧ್ಯಾತ್ಮಿಕ ಶಿಕ್ಷಣವೇ ಶಿಕ್ಷಣದ ಬೆನ್ನೆಲುಬು. ಪಾಠಪಟ್ಟಿಯಲ್ಲಿ ಅವುಗಳಿಗೆ ಸ್ಥಾನ ದೊರೆತಾಗ ಮಾತ್ರ ವಿದ್ಯಾರ್ಥಿಗಳ ವ್ಯಕ್ತಿತ್ವದ ಪರಿಪೂರ್ಣ ವಿಕಾಸಕ್ಕೆ ದಾರಿಯಾಗುತ್ತದೆ. ಅಪ್ಪರವರೆಗೆ ರಕ್ಷಕರೇ ಈ ಹೊಣೆಯನ್ನು ನಿರ್ವಹಿಸಬೇಕು. ಉರಿಯುವ ದೀಪವೊಂದು ಹತ್ತಾರು ದೀಪಗಳನ್ನು ಹೊತ್ತಿಸಬಹುದಾದಂತೆ, ನೈತಿಕ-ಆಧ್ಯಾತ್ಮಿಕ ಮೌಲ್ಯಗಳೇ ತುಂಬಿತುಳುಕುವ ಸದ್ಗ್ರಂಥಗಳ ಅಧ್ಯಯನ, ಸತ್ಸಂಗಗಳಿಂದ ನೈತಿಕ-ಆಧ್ಯಾತ್ಮಿಕ ಉನ್ನತಿಗೆ ದಾರಿಯಾಗುತ್ತದೆ. ಒಳ್ಳೆಯ ನಡೆನುಡಿಯನ್ನೂ, ಆರೋಗ್ಯಕರ ಅಭ್ಯಾಸಗಳನ್ನೂ, ಉದಾತ್ತ ಗುಣಗಳನ್ನೂ ರೂಢಿಸುವ ಹೊಣೆ ರಕ್ಷಕರು ಹಾಗೂ ಶಿಕ್ಷಕರ ಪಾಲಿಗೆ ಸೇರಿದ್ದು.

'ಜಪತಪಾದಿ ಆಧ್ಯಾತ್ಮಿಕ ಸಾಧನೆಯಲ್ಲಿ ತೊಡಗುವುದು ವ್ಯರ್ಥ ಕಾಲಹರಣ' ಎಂದು ಭಾವಿಸುವವರಿದ್ದಾರೆ. ಬಾಡಿಗೆ ಕಾರನ್ನು ಪೆಟ್ರೋಲ್ ತುಂಬಿಸಿಕೊಳ್ಳಲು ಪೆಟ್ರೋಲ್‌ಬಂಕ್‌ನಲ್ಲಿ ನಿಲ್ಲಿಸಿದರೆ ಬಾಡಿಗೆ ನಷ್ಟವಾಗುತ್ತದೆಂದೆನಿಸಿದರೆ ಏನನ್ನಬೇಕು ? ಆ ಬಾಡಿಗೆಗಾಗಿ ಓಡುವ ಶಕ್ತಿ ಬರುವುದೇ ಪೆಟ್ರೋಲ್ ಹಾಕಿಸಿಕೊಳ್ಳುವುದರಿಂದಲ್ಲವೇ ? ಅದೇ ರೀತಿ ಬ್ಯಾಟರಿಯನ್ನು ಛಾರ್ಜ್ ಮಾಡಿದಂತೆ, ಅಂತಃಶಕ್ತಿಯನ್ನು ಛಾರ್ಜ್ ಮಾಡುವ ಗಳಿಗೆಗಳು ಈ ಜಪತಪಗಳೆಂಬುದನ್ನು ಮರೆಯಬಾರದು. ಗರಗಸ ಬಡ್ಡಾಗಿರುವಾಗ ೧೨ ನಿಮಿಷದಲ್ಲಾಗುವ ಕೆಲಸ ಗರಗಸ ಹರಿತವಾಗಿರುವಾಗ ೨ ನಿಮಿಷಗಳಲ್ಲೇ ಆಗುವಂತೆ ಜಪತಪದಿಂದ ಆಸಕ್ತಿ, ಸ್ಮರಣಶಕ್ತಿ, ಏಕಾಗ್ರತೆಗಳೆಲ್ಲ ಹೆಚ್ಚಿ ಬುದ್ಧಿ ಚುರುಕಾಗುತ್ತದೆ. ಗದ್ದೆಗೆ ಬೀಜ ಬಿತ್ತುವಾಗ ಸುಮ್ಮನೆ ಧಾನ್ಯ ವ್ಯರ್ಥಮಾಡುವಂತೆ ತೋರಿದರೂ, ಅದೇ ಬೀಜ ಮೊಳೆತು ಬೆಳೆದು ಸಮೃದ್ಧಫಲ ಕೊಡುವಂತೆ, ೫ ನಿಮಿಷಗಳ ಕಾಲ ಮನಸ್ಸಿಟ್ಟು ಮಾಡಿದ ಜಪತಪ ದಿನವೆಲ್ಲ ಉತ್ಸಾಹದಿಂದ ಸಂತೋಷದಿಂದ ಎಲ್ಲ ಕೆಲಸಕಾರ್ಯಗಳನ್ನು ಚೆನ್ನಾಗಿ ಮಾಡುವ ಸಾಮರ್ಥ್ಯ ಧಾರೆ ಎರೆದು, ಪ್ರತಿಭೆ ಬೆಳಗಿ ಯಶಸ್ಸಿನ ದಾರಿ ಸುಗಮವಾಗಿಸಿ ವ್ಯಕ್ತಿತ್ವಕ್ಕೇ ಮೆರಗನ್ನು ತರುತ್ತದೆಂಬುದು ವಿಚಿತ್ರವಾದರೂ ಸತ್ಯ.

### ಯಶಸ್ಸು ಯಾವುದನ್ನು ಅವಲಂಬಿಸಿದೆ?

ನೂರು ಮೀಟರುಗಳ ಓಟದ ವಿಜೇತರನ್ನು ನಿರ್ಧರಿಸುವುದು ಹೇಗೆಂದು ನಿಮಗೆ ಗೊತ್ತೇನು ? ಓಟದ ಅಂತ್ಯದ ಆ ಗಳಿಗೆಗಳೇ ಗೆಲವನ್ನು ತರುವಲ್ಲಿ ನಿರ್ಣಾಯಕವಾದಂತೆ, ಇಡೀ ವರ್ಷದ ವಿದ್ಯಾರ್ಥಿಯ ಸಾಧನೆಯ ಯಶಸ್ಸನ್ನು ನಿರ್ಣಯಿಸುವಲ್ಲೂ ಪರೀಕ್ಷಕರ ಪಾಲಿಗೆ ನಿರ್ಣಾಯಕವಾದುದು ಪರೀಕ್ಷೆಯಲ್ಲಿನ ಆತನ ಉತ್ತರ ಪತ್ರಿಕೆ. ಓಟದ ಅಂತ್ಯದ ಕೆಲವು ಕ್ಷಣಗಳ ಕಡೆಗೆ ಗಮನ ಕೊಡುವಂತೆ ಈ ಪರೀಕ್ಷೆಯ ಕೆಲವು ಗಂಟೆಗಳ ಕಡೆ ವಿಶೇಷ ಗಮನ ಹರಿಸದಿದ್ದರೆ, ಎಣ್ಣೆ ಬರುವಾಗ ಗಾಣ ಮುರಿಯಿತು ಎಂಬಂತೆ ಯಶಸ್ಸಿನಿಂದ

"ಈಗ ರೇಡಿಯೋ, ಟಿ.ವಿ., ಸಿನೆಮಾಗಳಿಂದ ಸಿಗುವ ಸಂತೋಷದ ಭ್ರಮೆಯ ಲಕ್ಷಪಟ್ಟು ನೈಜ ಸಂತೋಷವನ್ನೂ, ಅಮಿತ ಆನಂದವನ್ನೂ ವಿದ್ಯಾಭ್ಯಾಸ ಧಾರೆಯೆರೆಯುತ್ತದೆ. ಅವಕಾಶ ಇರುವಾಗ ಈಗ ಕಲಿಯದಿದ್ದರೆ ಮುಂದೆ ನೀವೇ ವ್ಯಥೆಪಡುವ ಕಾಲ ಬರುತ್ತದೆ. ಆದ್ದರಿಂದ ಟಿ.ವಿ., ಸಿನೆಮಾ ನೋಡಿ, ರೇಡಿಯೋ ಕೇಳಿ. ಆದರೆ ಅದಕ್ಕೇ ಅಂಟಿಕೊಳ್ಳಬೇಡಿ. ಪಾಠವನ್ನು ಕಡೆಗಾಣಿಸಬೇಡಿ. ನಾಳಿನ ಬಾಳಿಗೆ ಆಧಾರ ಟಿ.ವಿ., ಸಿನೆಮಾ ಅಲ್ಲ- ಇಂದಿನ ವಿದ್ಯಾಭ್ಯಾಸ ಎಂಬ ವಿವೇಕ ಜಾಗೃತಗೊಳಿಸಿಕೊಂಡು ಪಾಠದಲ್ಲಿ ವಿಶೇಷ ಆಸಕ್ತಿ ತೋರಿ. ಕಂಬವನ್ನು ಗಟ್ಟಿಯಾಗಿ ಹಿಡಿದುಕೊಂಡವನೊಬ್ಬ 'ಬಿಡಿಸಿ, ಬಿಡಿಸಿ' ಎಂದು ಬೊಬ್ಬಿಟ್ಟನಂತೆ ! ಬಲವಾಗಿ ಹಿಡಿದುಕೊಂಡವನು ಅವನೇ ಆಗಿರುವಾಗ ಬೇರೆ ಯಾರಿಂದಲಾದರೂ ಅದನ್ನು ಬಿಡಿಸಲಾಗುವುದು ಹೇಗೆ ? ಅವನೇ ಬಿಡಿಸಿಕೊಳ್ಳಬೇಕಲ್ಲವೆ ?"

ವಂಚಿತರಾಗಬೇಕಾಗುತ್ತದೆ. ಆದ್ದರಿಂದ ಕೈಗೆ ಬಂದ ತುತ್ತನ್ನು ಬಾಯಿಗೆ ಬರಿಸುವ, ನಿಮ್ಮ ಯಶಸ್ಸನ್ನು ರೂಪಿಸುವ ಪರೀಕ್ಷೆಯ ಕಡೆ, ಅಲ್ಲ ಪರೀಕ್ಷೆಯ ಉತ್ತರಪತ್ರಿಕೆಯ ಕಡೆ ವಿಶೇಷ ಗಮನ ಕೊಡಿ.

ಮೊದಲ ನೋಟಕ್ಕೆ ಮೂಡುವ ಭಾವನೆಗಳೇ ತುಂಬ ಪರಿಣಾಮಕಾರಿಗಳು ಎಂಬೊಂದು ಮಾತಿದೆ. ಅಂತೆಯೇ ನಿಮ್ಮ ಉತ್ತರ ಪತ್ರಿಕೆಯನ್ನು ನೋಡಿದೊಡನೆಯೇ ಪರೀಕ್ಷಕರಲ್ಲೂ ಅತ್ಯುತ್ತಮ ಅಭಿಪ್ರಾಯ ಮೂಡುವಂತಿದ್ದರೆ ನಿಮಗೆ ಖಂಡಿತವಾಗಿಯೂ ಹೆಚ್ಚು ಅಂಕಗಳು ದೊರೆತೇ ದೊರೆಯುತ್ತವೆ. ಆದ್ದರಿಂದ ಪರೀಕ್ಷೆಯ **ಯಶಸ್ಸು ನೀವು ಉತ್ತರವಾಗಿ ಏನನ್ನು ಬರೆಯುವಿರಿ ಎಂಬುದನ್ನು ಮಾತ್ರವಲ್ಲ, ಉತ್ತರವನ್ನು ಹೇಗೆ ಬರೆಯುವಿರಿ ಎಂಬುದನ್ನೂ ಅವಲಂಬಿಸಿದೆ.** ಚೆನ್ನಾಗಿ ಉತ್ತರಿಸುವುದೂ ಒಂದು ಕಲೆಯೇ. ಈ ಚೆನ್ನಾಗಿ ಉತ್ತರಿಸುವ ಕಲೆಯನ್ನು ಕಲಿತವರಿಗೆ ಪರೀಕ್ಷೆಯಲ್ಲಿ ಯಶಸ್ಸು ಒಲಿದು ಬರುವುದಂತೂ ಖಂಡಿತ.

ಆದ್ದರಿಂದ ವಿದ್ಯಾರ್ಥಿಗೆ ಪರೀಕ್ಷೆಯಲ್ಲಿ ಯಶಸ್ಸು ಸಿಗಲು-

೧. ಕೈ ಬರಹ ಸ್ಫುಟವಾಗಿ, ಅಂದವಾಗಿರಬೇಕು. ತೆಳ್ಳಗಿನ ಶಾಯಿಯಲ್ಲಿ ಸಪೂರ ಮೊನೆಯ ಪೆನ್ನಿನಿಂದ ಬರೆಯಲು ಹೋಗಬೇಡಿ. ಅಕ್ಷರಗಳು ಎದ್ದು ಕಾಣುವಂತೆ ದಪ್ಪವಾಗಿ , ಸ್ಫುಟವಾಗಿ ಬರೆಯುವ ಪೆನ್ನಿನಿಂದ ಮುದ್ದಾಗಿ ಬರೆಯಿರಿ. ಚಿತ್ತು, ಶಾಯಿಕಲೆಗಳು ಆಗಿ ಉತ್ತರ ಪತ್ರಿಕೆ ಹೊಲಸಾಗದಂತೆಯೂ, ಹೊಡೆದು ಹಾಕುವ ಪ್ರಸಂಗ ಬಂದು ಅಸಹ್ಯವಾಗಿ ಕಾಣಿಸದಂತೆಯೂ ಎಚ್ಚರವಹಿಸಿ.

೨. ಕ್ರಮವತ್ತಾಗಿ ಒಂದರ ಕೆಳಗೊಂದರಂತೆ- point by point ಬರೆಯಬೇಕು. ಉತ್ತರ ಪತ್ರಿಕೆ ತಿದ್ದುವ ಅವಸರದಲ್ಲಿರುವ ಪರೀಕ್ಷಕರ ಗಮನ ಸೆಳೆಯಲು ಈ ಕ್ರಮವನ್ನು ಬಿಡದೆ ಅನುಸರಿಸಿ.

೩. ಉತ್ತರಗಳು ಸಮರ್ಪಕವಾಗಿದ್ದು ಸುಂದರವಾದ ಭಾಷೆಯಲ್ಲಿ ಅಚ್ಚುಕಟ್ಟಾಗಿ ನಿರೂಪಿಸಲ್ಪಟ್ಟಿರಬೇಕು. ಸ್ಪೆಲ್ಲಿಂಗ್ ತಪ್ಪುಗಳೂ, ವ್ಯಾಕರಣದೋಷಗಳೂ ಇರಬಾರದು. ಸರಿಯಾಗಿ ಓದಿದವರಿಗೆ ಪ್ರಶ್ನೆಗೆ ಸರಿಯಾದ ಉತ್ತರ ಹೊಳೆದೇ ಹೊಳೆಯುತ್ತದೆ. ಇದು ಇಡೀ ವರ್ಷದ ಸಾಧನೆಯನ್ನೂ, ಸ್ಮರಣಶಕ್ತಿಯನ್ನೂ ಅವಲಂಬಿಸಿದೆ. ಒಂದಂತೂ ಖಂಡಿತ: ಸುಂದರ ಭಾಷೆಯಲ್ಲಿ ಅಚ್ಚುಕಟ್ಟಾಗಿ ಪರೀಕ್ಷಾ ಕೊಠಡಿಯಲ್ಲಿಯೇ ಯೋಚಿಸಿ ಉತ್ತರವನ್ನು ಮೂಡಿಸುವುದು, ಅತಿಥಿಗಳು ಬಂದಾಕ್ಷಣ ಸ್ವಾದಿಷ್ಟ ತಿಂಡಿ ತಯಾರಿಸಿ ಅವರೆದುರು ತಂದಿರಿಸುವ ಎಂದಂತೆಯೇ ಕೈಗೂಡದ ಮಾತು. ಮುಂದಾಗಿ ತಿಂಡಿ ತಯಾರಿಸಿಕೊಂಡಿದ್ದಲ್ಲಿ ಮಾತ್ರ ಅದನ್ನು ಆ ಕ್ಷಣ ಅವರಿಗರ್ಪಿಸಿ ಅವರ ಮನವನ್ನು ಗೆಲ್ಲಬಹುದಾದಂತೆಯೇ, ಸುಂದರವಾಗಿ ಅಚ್ಚುಕಟ್ಟಾಗಿ ತಪ್ಪಿಲ್ಲದೆ ಆ ಉತ್ತರ ಬರೆಯುವುದನ್ನು ಮೊದಲೇ ಕಲಿತಿದ್ದಲ್ಲಿ ಮಾತ್ರ ಆ ಕ್ಷಣ ಅದನ್ನಲ್ಲಿ ನೆನಪಿಸಿಕೊಂಡು ಬರೆಯಬಹುದು.

## ಪರೀಕ್ಷೆಯ ತಯಾರಿ ಹೇಗೆ?

ನಿನ್ನೆ ಮಾವಿನ ಗೊರಟನ್ನು ನೆಟ್ಟು ಇಂದದು ಗಿಡವಾಗಿ ಬೆಳೆದು ಫಲ ಕೊಟ್ಟು, ನಾಳೆ ಅದರ

ಹಣ್ಣನ್ನು ಕೊಯ್ದು ರಸಾಯನ ಮಾಡಲು ಎಂದಾದರೂ ಸಾಧ್ಯವೇ? ಸಾಧ್ಯವೇ ಇಲ್ಲ ಅಲ್ಲವೇ? ಅದೇ ರೀತಿ ಪರೀಕ್ಷೆಯ ಮುಂಚಿನ ದಿನ ಓದಿ, ಪರೀಕ್ಷೆಯಲ್ಲಿ ಚೆನ್ನಾಗಿ ಬರೆದು ಅದ್ಭುತ ಯಶಸ್ಸುಗಳಿಸುವುದು ಕೇವಲ ಕನ್ನಡಿಯೊಳಗಿನ ಗಂಟೇ ಸೈ! ಅಂಥ ಹುಚ್ಚು ಕಲ್ಪನೆಗಳನ್ನು ಬಿಟ್ಟೇ ಬಿಡಿ.

ವರ್ಷಾಂತ್ಯದಲ್ಲಿ ಸುಂದರ ಪುಷ್ಪ ಅರಳಲು ವರ್ಷವಿಡೀ ಸಾರ ನೀರುಗಳನ್ನು ಹಾಕಿ ಗಿಡವನ್ನು ಸಲಹಬೇಕಾದಂತೆ, ವರ್ಷಾಂತ್ಯದ ಪರೀಕ್ಷೆ ಸುಗಮವಾಗಲು ವರ್ಷವಿಡೀ ತಯಾರಿ ನಡೆಸಬೇಕು. ಪ್ರತಿಯೊಂದು ವಿಷಯದಲ್ಲೂ ಹಿಂದಿನ ಐದಾರು ವರ್ಷಗಳ ಪ್ರಶ್ನೆಪತ್ರಿಕೆಗಳನ್ನಾದರೂ ಮೊದಲು ಸಂಗ್ರಹಿಸಿಕೊಳ್ಳಬೇಕು. ಪ್ರತಿಯೊಂದು ಪಾಠ ನಡೆಯುವಾಗಲೂ ಆ ಪಾಠದಲ್ಲಿ ಕೇಳಬಹುದಾದ ಪ್ರಶ್ನೆಗಳ ಪರಿಯನ್ನು ಮೊದಲು ಅರಿಯಬೇಕು. ವಿಜ್ಞಾನದಲ್ಲಿ ಬೆಳಕಿನ ಬಗ್ಗೆ ಪಾಠ ನಡೆಯುತ್ತಿದ್ದರೆ, ಆ ವಿಚಾರದಲ್ಲಿ ಈ ಹಿಂದೆ ಬಂದ ಎಲ್ಲ ಪ್ರಶ್ನೆಗಳನ್ನೂ ತಿಳಿದುಕೊಳ್ಳಬೇಕು; ಪಠ್ಯಪುಸ್ತಕದಲ್ಲಿ ಆ ಪಾಠದ ಅಂತ್ಯದಲ್ಲಿರುವ ಪ್ರಶ್ನೆಗಳನ್ನೂ ತಿಳಿದುಕೊಳ್ಳಬೇಕು. ಇದರಿಂದ ಆ ಪಾಠದ ಮೇಲೆ ಯಾವ ರೀತಿಯ ಎಷ್ಟು ಮಾರ್ಕಿನ ಪ್ರಶ್ನೆಗಳನ್ನು ಕೇಳುತ್ತಾರೆ? ಎಂತಹ ಸಮಸ್ಯೆಗಳನ್ನು ಕೊಡುತ್ತಾರೆ? ಯಾವ ಪ್ರಯೋಗವನ್ನು ವಿವರಿಸಲು ಹೇಳುತ್ತಾರೆ? ಯಾವ ಚಿತ್ರವನ್ನು ಬಿಡಿಸಲು ಹೇಳುತ್ತಾರೆ? ಎಂದೆಲ್ಲ ತಿಳಿಯುತ್ತದೆ. ಇದರಿಂದ ಆ ಬಗ್ಗೆ ಪಾಠ ಆಗುತ್ತಿರುವಾಗಲೇ ಜಾಗೃತರಾಗಿರಲು ಸಾಧ್ಯವಾಗುತ್ತದೆ, ತಿಳಿಯದ ವಿಚಾರಗಳನ್ನು ಆಯಾಯ ದಿನವೇ ಅಧ್ಯಾಪಕರೊಡನೆ ಕೇಳಿ ತಿಳಿದುಕೊಳ್ಳುವುದು ಸಾಧ್ಯವಾಗುತ್ತದೆ.

### ದಿನದಿನವೂ ಮಿನಿ ಪರೀಕ್ಷೆ

ಪ್ರತಿಯೊಂದು ವಿಷಯಕ್ಕೂ ಒಂದು ಪ್ರಶ್ನೋತ್ತರ ಪುಸ್ತಕವನ್ನು ಮಾಡಬೇಕು. ವಾರಾಂತ್ಯದ ರಜಾದಿನದಲ್ಲಿ ಅಲ್ಲಿವರೆಗೆ ಆದ ಪಾಠದ ಮೇಲೆ ಪರೀಕ್ಷೆಯಲ್ಲಿ ಬಂದಿರುವ ಪ್ರಶ್ನೆಗಳನ್ನು ಒಂದೊಂದಾಗಿ ಆ ಪುಸ್ತಕದಲ್ಲಿ ಬರೆದು, ಪುಸ್ತಕ ನೋಡದ ಆ ಪ್ರಶ್ನೆಗಳಿಗೆ ಪರೀಕ್ಷೆಯಲ್ಲಿ ಉತ್ತರಿಸುವಂತೆಯೇ ಉತ್ತರಿಸಬೇಕು. ಅದನ್ನು ಅಧ್ಯಾಪಕರಿಗೆ ತೋರಿಸಿ; ಆ ಉತ್ತರ ಸಮರ್ಪಕವೆ, ಪರಿಪೂರ್ಣವಾಗಲು ಅದನ್ನಿನ್ನು ಹೇಗೆ ಊರ್ಜಿತಗೊಳಿಸಬಹುದು? ಎಂಬುದನ್ನೆಲ್ಲ ತಿಳಿದುಕೊಳ್ಳಬೇಕು. ಅವರ ಸೂಚನೆಯಂತೆ ಆ ಉತ್ತರವನ್ನು ತಿದ್ದಿ ಪುನಃ ಅಲ್ಲೇ ಬರೆಯಬೇಕು. ಹೀಗೆ ಮಾಡುವುದರಿಂದ ಆ ವಿಚಾರದಲ್ಲಿ ಬರುವ ಪ್ರಶ್ನೆಗಳಿಗೆಲ್ಲ ಚೆನ್ನಾಗಿ ಉತ್ತರಿಸುವ ಸಾಮರ್ಥ್ಯ ನಿಮ್ಮ ಕರಗತವಾಗುತ್ತದೆ. ಎಲ್ಲ ವಿಷಯಗಳಲ್ಲಿಯೂ ಇದೇ ರೀತಿಯ ಪರೀಕ್ಷಾ ತಯಾರಿ ನಡೆಯಬೇಕು. ನಾಟಕ ಪ್ರದರ್ಶನಕ್ಕೂ ಮೊದಲೇ ಅನೇಕ ಬಾರಿ ರಿಹರ್ಸಲ್ ನಡೆದರೆ ಲೋಪದೋಷಗಳೆಲ್ಲ ನಿವಾರಿಸಲ್ಪಟ್ಟು ಅದರ ರಂಗಪ್ರದರ್ಶನ ತುಂಬ ಚೆನ್ನಾಗುವಂತೆ, ಪರೀಕ್ಷೆಗೂ ಮುಂಚೆ ಈ ರೀತಿ ನೀವೇ ನಿಮ್ಮನ್ನು ಪರೀಕ್ಷೆ ಮಾಡಿಕೊಂಡಲ್ಲಿ ಮಾತ್ರ ಆತ್ಮವಿಶ್ವಾಸ ವೃದ್ಧಿಸಿ ಅಂತಿಮ ಪರೀಕ್ಷೆ ತುಂಬ ಚೆನ್ನಾಗುವುದು ಖಂಡಿತ. ಆ ನಿಟ್ಟಿನಲ್ಲಿ ದಿನದಿನವೂ ಒಂದು ಮಿನಿ ಪರೀಕ್ಷೆ ಎಂದೇ ಎಣಿಸಿ, ದಿನದ ಕೆಲಸ ಕಾರ್ಯಗಳನ್ನೆಲ್ಲ ಅತ್ಯಂತ ಸಮರ್ಪಕವಾಗಿ ಪೂರೈಸಬೇಕು. ಹೀಟ್ಸ್‌ನಲ್ಲಿ ಅಥವಾ ಪೂರ್ವಭಾವಿ ಓಟದಲ್ಲಿ ಗೆದ್ದರೆ ಮಾತ್ರ ಫೈನಲ್‌ನಲ್ಲಿ ಅಥವಾ ಅಂತಿಮ ಓಟದಲ್ಲಿ ಭಾಗವಹಿಸುವ ಯೋಗ್ಯತೆ ಒದಗಿ ಬರುವಂತೆ, ದಿನದಿನದ ಈ ಪರೀಕ್ಷೆಯಲ್ಲಿ ಗೆದ್ದರೆ ಮಾತ್ರ ಅಂತಿಮ ಪರೀಕ್ಷೆಯಲ್ಲಿ ಯಶಸ್ಸೆಂದು ತಿಳಿಯಿರಿ.

ತರಗತಿಯಲ್ಲಿ ನಡೆಯುವ ಕಿರು ಪರೀಕ್ಷೆಗಳೆಲ್ಲ ದಿನದಿನವೂ ನಡೆಯುವ ನಿಮ್ಮ ಈ ಪರೀಕ್ಷಾ ಸಿದ್ಧತೆಯ ಒರೆಗಲ್ಲು ಎಂದೇ ತಿಳಿಯಿರಿ. ಇಷ್ಟು ದಿನ ಪಟ್ಟ ಪ್ರಯತ್ನಕ್ಕೆ ಫಲ ಬರುವ ಪರೀಕ್ಷೆಯಲ್ಲಿ ಭಾಗವಹಿಸುವುದೂ, ಯಶಸ್ಸಿಗಾಗಿ ಸರ್ವ ಪ್ರಯತ್ನ ಮಾಡುವುದೂ ನಿಮ್ಮ ಪಾಲಿಗೆ ಸಂತಸದ ಕೆಲಸವಾಗಬೇಕು. ನಿಮ್ಮ ಸತ್ವಪರೀಕ್ಷೆ ಮಾಡಿ ಯಶಸ್ಸಿಗಾಗಿ ನಿಮ್ಮನ್ನು ಅಣಿಗೊಳಿಸುವ ಅವುಗಳನ್ನು ಸಂತೋಷದಿಂದ ಸ್ವಾಗತಿಸಿ ಅವುಗಳಲ್ಲಿ ಭಾಗವಹಿಸಿ. ಒಂದೊಮ್ಮೆ ನೀವು ಎಣಿಸಿದಷ್ಟು ಅಂಕಗಳು ಸಿಗಲಿಲ್ಲ ಎಂದೆಣಿಸಿ. ಆಗ ಅಧೀರರಾಗಬಾರದು. '೧೦೦ ಡಿಗ್ರಿ ಸೆಲ್ಸಿಯಸ್ ಕಾಯಿಸಿದರೆ ನೀರು ಕುದಿಯುತ್ತದೆ ನಿಜ. ಆದರೆ ನಾನಿನ್ನೂ ಬಹುಶಃ ೬೦ ಡಿಗ್ರಿಯ ಹಂತದಲ್ಲೆ ಇದ್ದಿರಬೇಕು. ಹಾಗಾಗಿ ಯಶಸ್ಸು ನನಗೆ ಸಿಗಲಿಲ್ಲ. ಇನ್ನಾದರೂ ನನ್ನ

ಪ್ರಯತ್ನದ ಕಾವನ್ನು ಹೆಚ್ಚಿಸಿಕೊಳ್ಳುವೆ. ನನ್ನ ದೋಷಗಳನ್ನು ತಿದ್ದಿಕೊಂಡು ತಿರುಗಿ ಪ್ರಯತ್ನಿಸುವೆ' ಎಂಬ ಛಲದಿಂದ ಇನ್ನಷ್ಟು ಪ್ರಯತ್ನಶೀಲರಾಗಬೇಕು. ಇನ್ನಷ್ಟು ಏಕಾಗ್ರತೆ, ಏಕನಿಷ್ಠೆಗಳಿಂದ ವಿದ್ಯಾರ್ಜನೆಯ ತಪಸ್ಸಿನಲ್ಲಿ ಮುಳುಗಬೇಕು. ಸಾವಿರ ಏಟುಗಳು ಒಂದು ಸುಂದರ ಶಿಲ್ಪದ ನಿರ್ಮಾಣಕ್ಕೆಡೆಮಾಡುವಂತೆ ಈ ಎಲ್ಲ ಅನುಭವಗಳು ನಿಮ್ಮ ಅಂತಿಮ ಪರೀಕ್ಷೆಯ ಅದ್ಭುತ ಯಶಸ್ಸಿಗೆ ದಾರಿ ಮಾಡಿಕೊಡಬೇಕು.

### ಅನುಭವದ ಮುತ್ತು-ರತ್ನ

ಫೆಬ್ರುವರಿ ತಿಂಗಳ ಕೊನೆ ಕೊನೆಗೆ ಪಾಠಗಳೆಲ್ಲ ಮುಗಿಯುತ್ತ ಬಂದಂತೆ ಮನೆಯಲ್ಲೇ ಕುಳಿತು ಓದುವ ಭ್ರಮೆಯಿಂದ ಶಾಲೆಯ ಪಾಠಕ್ಕೆ ಚಕ್ಕರ್ ಕೊಡುವವರಿದ್ದಾರೆ. ಆದರೆ ಇದು ಮಾತ್ರ ಕೂಡದು. ಪಾಠಗಳು ಮುಗಿದರೂ ಅಧ್ಯಾಪಕರ ಪಾಲಿನ ಕೆಲಸ ಮುಗಿದಿರುವುದಿಲ್ಲ ಎಂಬುದನ್ನು ನೆನಪಿಡಿ. ಎಲ್ಲ ಅಧ್ಯಾಪಕರಿಗೂ ರಿವಿಷನ್ ಮಾಡಿ, ಚೆನ್ನಾಗಿ ಉತ್ತರಿಸುವ ಬಗ್ಗೆ ತಮ್ಮ ಅನುಭವದ ಮುತ್ತುರತ್ನಗಳನ್ನೆಲ್ಲ ಎಲ್ಲ ವಿದ್ಯಾರ್ಥಿಗಳಿಗೂ ಹಂಚಬೇಕೆಂದಿರುತ್ತದೆ. ಪುಕ್ಕಟೆಯಾಗಿ ಸಿಗುವ ಈ 'ಗುರುದಕ್ಷಿಣೆ'ಯಿಂದ ವಂಚಿತರಾಗಬೇಡಿ! ತರಗತಿಗೆ ಬಿಡದೆ ಹಾಜರಾಗಿ ಅಧ್ಯಾಪಕರ ಮಾತಿಗೆ ಕಿವಿಗೊಡಿ. ಈ ರಿವಿಷನ್ ಮಾಡುವ ವೇಳೆಯಲ್ಲಿ ಈ ಹಿಂದಿನ ಪರೀಕ್ಷೆಯ ಪ್ರಶ್ನೆಗಳನ್ನೇ ಕೊಟ್ಟು ಉತ್ತರ ಬರೆಯಿಸಿ ಆನಂತರ ಆ ಬಗ್ಗೆ ಚರ್ಚಿಸುವವರೂ ಇದ್ದಾರೆ. ವಿದ್ಯಾರ್ಥಿಗಳನ್ನು ಪರೀಕ್ಷೆಗೆ ತಯಾರು ಮಾಡುವ ಪರಮೋತ್ಕೃಷ್ಟ ಕ್ರಮ ಇದು. ಬೇಗ ಪಾಠ ಮುಗಿಸಿ, ಈ ರೀತಿಯ ರಿವಿಷನ್ ಪರಿಪಾಠ ಬೆಳೆಸಿದಷ್ಟೂ ವಿದ್ಯಾರ್ಥಿಗಳಲ್ಲಿ ಪರೀಕ್ಷೆಯನ್ನೆದುರಿಸುವ ಧೈರ್ಯೋತ್ಸಾಹ ಉಕ್ಕುತ್ತದೆ. ಇದರಿಂದ ಪರೀಕ್ಷೆಯಲ್ಲಿ ಅದ್ಭುತ ಯಶಸ್ಸು ಸುಲಭಸಾಧ್ಯವಾಗುತ್ತದೆ.

ಅಂತೂ ಪರೀಕ್ಷೆ ಸಮೀಪಿಸುತ್ತ ಬಂದಂತೆ ಹೊಸ ವಿಚಾರ ತಿಳಿಯುವ ಪ್ರಯತ್ನಕ್ಕೆ ಪೂರ್ಣ ವಿರಾಮ ಹಾಕಿ, ಈವರೆಗೆ ತಿಳಿದ ವಿಚಾರಗಳನ್ನೇ ಅರಗಿಸಿ ಅಣಿಗೊಳಿಸಿಕೊಳ್ಳಿ. ತಿಳಿಯದೆ ಇರುವ ವಿಚಾರಗಳನ್ನು ಅಧ್ಯಾಪಕರೊಡನೆ ಕೇಳಿ ತಿಳಿದುಕೊಳ್ಳಿ. ಅರ್ಥಮಾಡಿಕೊಳ್ಳದೆ ಸುಮ್ಮನೆ ಬಾಯಿಪಾಠ ಮಾಡಿದರೆ, ಪ್ರಶ್ನೆಯನ್ನು ಸ್ವಲ್ಪ ಬದಲಿಸಿದಾಗ ನೀವು ತಲೆಕೆಳಕಾಗಿ ಅದನ್ನು ಉತ್ತರಿಸುವಲ್ಲಿ ವಿಫಲರಾಗುವಿರಿ. ಹಾಗಾಗಿ ಅರ್ಥಮಾಡಿಕೊಂಡು, ಒಂದಕ್ಕೂ ಇನ್ನೊಂದಕ್ಕೂ ಇರುವ ಸಂಬಂಧವನ್ನೆಣಿಸಿಕೊಳ್ಳಿ. ಆಗ ಪ್ರಶ್ನೆ ಬದಲಾದರೂ ಅದಕ್ಕೆ ಬೇಕಾದ ಉತ್ತರ ಬರೆಯುವ ಜಾಣ್ಮೆ ನಿಮ್ಮದಾಗುತ್ತದೆ.

ಪ್ರಶ್ನೆ ಕೇಳಿದರೆ ತನಗೆ ಅರ್ಥವಾಗಲಿಲ್ಲವೆಂದು ಅಧ್ಯಾಪಕರೆಲ್ಲಿ ಮೂದಲಿಸುವರೋ ಎಂದು ಸಂಶಯವಿದ್ದಾಗ್ಯೂ ಪ್ರಶ್ನೆ ಕೇಳಲು ಹಿಂಜರಿಯುವವರಿದ್ದಾರೆ. ಈ ನಾಚಿಕೆ-ಅಂಜಿಕೆಗಳನ್ನು ಬಿಡದವರಿಗೆ ಜ್ಞಾನದೇವತೆ ಒಲಿಯಳೆಂಬುದಂತೂ ನಿಜ. ಆದ್ದರಿಂದ ಯಾವ ಮುಜುಗರವಿಲ್ಲದೆ ನಿಮ್ಮ ಸಂದೇಹ-ಸಮಸ್ಯೆಗಳ ಬಗ್ಗೆ ನಿಮ್ಮ ಅಧ್ಯಾಪಕರೊಡನೆ ಕೇಳಿ. ಹಾಗೆ ಕೇಳುವುದರಿಂದ ನಿಮ್ಮ ಸಹಪಾಠಿಗಳ ಪಾಲಿಗೆ ನೀವು ದಡ್ಡರೆನಿಸಿದರೂ ಸರಿಯಾದ ಉತ್ತರ ತಿಳಿದು, ಪರೀಕ್ಷೆಯಲ್ಲಿ ಹೆಚ್ಚು ಅಂಕ ಗಳಿಸಿ ಲೋಕದ ಪಾಲಿಗೆ ನೀವು ಬುದ್ಧಿವಂತರೆನಿಸುವಿರಿ. ಬದಲಿಗೆ ನೀವು ಸಹಪಾಠಿಗಳ ನಡುವೆ ಬುದ್ಧಿವಂತರೆಂದು ನಟಿಸುತ್ತ ಕುಳಿತರೆ ಪರೀಕ್ಷೆಯಲ್ಲಿ ಆ ಪ್ರಶ್ನೆಗಳಿಗುತ್ತರಿಸಲಾರದೆ ದಡ್ಡರೆಂದು ಜಗಜ್ಜಾಹೀರಾಗುವಿರಿ. ನಿಮಗೆ ಲೋಕದೆದುರು ಹೋಗಲಿ, ನಿಮ್ಮ ಮನೆಯವರೆದುರು ಬುದ್ಧಿವಂತರೆನಿಸಿಕೊಳ್ಳಬೇಕೆಂದಿದ್ದರೆ, ನಿಮಗೆ ದಾರಿ ತೋರಲು ಕಾದಿರುವ ನಿಮ್ಮ ಅಧ್ಯಾಪಕರೊಡನೆ ನಿಮ್ಮ ಸಂದೇಹಗಳನ್ನೆಲ್ಲ ಮನಬಿಚ್ಚಿ ಹೇಳಿ.

ಎಪ್ರಿಲ್ ೫ರಂದು ಪರೀಕ್ಷೆ ಪ್ರಾರಂಭ ಎಂದಿರಲಿ. ಮಾರ್ಚ್ ೧೦ರವರೆಗೆ ತರಗತಿಗಳನ್ನು ನಡೆಸಿ ನಿಮ್ಮನ್ನು ಓದಲು ಬಿಡುತ್ತಾರೆಂದೆಣಿಸಿ. ಅಡಿಗಾಗಿ ಬೇಳೆ-ಕಾಳು, ತರಕಾರಿ-ಹಣ್ಣು, ಪಾತ್ರೆ-ಪರಡಿಗಳನ್ನೆಲ್ಲ ಕಟ್ಟಿಕೊಂಡು ದೂರದ ಪ್ರವಾಸಕ್ಕೆ ಹೊರಟವರಂತೆ, ನೀವೂ ಈ ಮಾರ್ಚ್ ೧೦ರೊಳಗೆ ಎಲ್ಲ ವಿಷಯಗಳಲ್ಲೂ ಅಧ್ಯಾಪಕರಿಂದ, ಲೈಬ್ರರಿ ಪುಸ್ತಕಗಳಿಂದ, ಬೇರೆ ಪಠ್ಯಪುಸ್ತಕಗಳಿಂದ, ಬೇಕಾದರೆ ಗೈಡ್‌ಗಳಿಂದ ನಿಮಗೆ ಪರೀಕ್ಷೆಗೆ ಬೇಕಾದ ಎಲ್ಲ ವಿಚಾರಗಳನ್ನೂ ಕಲೆ ಹಾಕಿ ಅವುಗಳ ಸಮನ್ವಯೀಕರಣದ ರಿವಿಷನ್‌ಗೆ ತಯಾರಾಗಿ ಶಾಲೆ

ಯಿಂದ ಮರಳಬೇಕು.

### ಪ್ರತಿ ವಿಷಯಕ್ಕೂ....

ರಾಕೆಟ್ ಹಾರಿಸುವಾಗ ಸಂಖ್ಯೆಯನ್ನು ಇಳಿಕೆಯ ಕ್ರಮದಲ್ಲಿ ಎಣಿಸುತ್ತ ರಾಕೆಟ್ ಉಡಾವಣೆಯ ಗಳಿಗೆ ಸನ್ನಿಹಿತವಾಗುತ್ತಿರುವುದರ ಬಿಸಿ ಹುಟ್ಟಿಸುವಂತೆಯೇ ಸಮೀಪಿಸುತ್ತಿರುವ ಪರೀಕ್ಷೆಯ ಕಾವು ತಟ್ಟಲೂ ನೀವು ಅದೇ ಕ್ರಮ ಅನುಸರಿಸಬೇಕು. ೧೧ನೇ ತಾರೀಖಿನ ಬೆಳಿಗ್ಗೆ ಎದ್ದೊಡನೆಯೇ ಪರೀಕ್ಷೆಗಿನ್ನು ೨೫ ದಿನಗಳಿವೆ ಅಥವಾ ಯಶಸ್ಸಿನ ಶಿಖರಕ್ಕಿನ್ನು ೨೫ ಮೆಟ್ಟಿಲುಗಳಿವೆ ಎಂದೆಣಿಸಿದರೆ, ೧೨ನೇ ತಾರೀಖಿನ ಬೆಳಿಗ್ಗೆ ಇನ್ನು ಇಪ್ಪತ್ನಾಲ್ಕೇ ಮೆಟ್ಟಿಲುಗಳು ಎಂದೆಣಿಸಬೇಕು. ದಿನವೂ ಹೀಗೆ ಎಣಿಸುವುದರ ಜೊತೆಗೇ 'ನಾನು ದಿನೇ ದಿನೇ ಎಲ್ಲ ವಿಧದಲ್ಲೂ ಉತ್ತಮಗೊಳ್ಳುತ್ತಿದ್ದೇನೆ' ಎಂಬ ಧೀರ ಮಂತ್ರವನ್ನೂ ಉಚ್ಚರಿಸಿ ಆತ್ಮವಿಶ್ವಾಸ ನವೀಕರಿಸಿಕೊಳ್ಳುವುದನ್ನೂ, ಆತ್ಮಶಕ್ತಿ ಜಾಗೃತಗೊಳಿಸಿಕೊಳ್ಳುವುದನ್ನೂ ಬಿಡಲೇಬಾರದು.

ನಾಲ್ಕು ನಾಲ್ಕು ದಿನಗಳನ್ನು ಇರುವ ಆರು ವಿಷಯುಗಳಿಗೆ ಹಂಚಿಹಾಕಿಕೊಂಡು ರಿವಿಷನ್ ಮಾಡುವ ಬದಲು, ದಿನ ದಿನವೂ ಪ್ರತಿ ವಿಷಯಕ್ಕೆ ಎರಡೆರಡು ಗಂಟೆಗಳಷ್ಟು ಸಮಯವನ್ನು ವಿನಿಯೋಗಿಸುವುದೇ ಲೇಸು. ಆಗಲೂ ನಿಮಗೆ ಕಷ್ಟವೆನಿಸುವ, ಹೆಚ್ಚು ಪರಿಶ್ರಮ ಅಗತ್ಯವಿರುವ ವಿಷಯವನ್ನು ಮುಂಜಾನೆ ಮನಸ್ಸು ಉಲ್ಲಸಿತವಾಗಿರುವಾಗಲೇ ಅಭ್ಯಸಿಸಿ. ಪಠ್ಯಪುಸ್ತಕದಲ್ಲಿ ಒಟ್ಟು ೧೫ ಅಧ್ಯಾಯಗಳಿದ್ದರೆ, ಕೊನೆಯ ೧೫ನೇ ಅಧ್ಯಾಯದಿಂದಲೇ ರಿವಿಷನ್‌ಗೆ ಪ್ರಾರಂಭಿಸಿ. ಮೊದಲಿನ ಆಧ್ಯಾಯಗಳನ್ನು ಈಗಾಗಲೇ ನೀವು ಸಾಕಷ್ಟು ಬಾರಿ ಅಭ್ಯಸಿಸಿಯಾಗಿದೆ. ಆದರೆ ಇತ್ತೀಚೆಗಷ್ಟೇ ಪಾಠ ಮಾಡಿ ಮುಗಿಸಲ್ಪಟ್ಟ ಕೊನೆಯ ಅಧ್ಯಾಯಗಳ ವಿಚಾರ ಹಾಗಲ್ಲ. ಹಾಗಾಗಿ ಅವುಗಳಿಗೇ ಮೊದಲ ಆದ್ಯತೆ ಕೊಡಿ.

### ಉತ್ತರದ ವಿನ್ಯಾಸ

ಎಲ್ಲ ಪಾಠಗಳ ರಿವಿಷನ್ ಮಾಡುವಾಗಲೂ ಪಠ್ಯಪುಸ್ತಕ, ಪ್ರಶ್ನೋತ್ತರ ಪುಸ್ತಕ ರೆಡಿ ಇರಲಿ. ರಫ್ ಕಾಗದ, ಪೆನ್ನುಗಳನ್ನು ಅಣಿಗೊಳಿಸಿಕೊಳ್ಳಿ. ಆ ಅಧ್ಯಾಯದ ಮೇಲೆ ಈ ಹಿಂದೆ ಬಂದಿರುವ ಪ್ರಶ್ನೆಗಳನ್ನು ಪ್ರಶ್ನೋತ್ತರ ಪುಸ್ತಕದಿಂದ ನೋಡಿಕೊಳ್ಳಿ. ಅದರ ಉತ್ತರವನ್ನು ಓದಿ. ಓದುವಾಗ ಉತ್ತರದ ಮುಖ್ಯಾಂಶಗಳನ್ನು ಕಾಗದದ ಮೇಲೆ ಬರೆದು ಓದಿ, ಓದಿ ಬರೆಯಿರಿ. ಪೂರ್ತಿ ಓದಿದ ನಂತರ ಪುಸ್ತಕವನ್ನು ಮಡಚಿಟ್ಟು ಉತ್ತರದ ರೂಪ



ರೇಖೆಯ ಬಗ್ಗೆ ಚಿಂತಿಸಿ. ಕಾಗದದ ಮೇಲೆ ಅದನ್ನು ಮೂಡಿಸಿ. ಇಡಿ ಇಡೀ ವಾಕ್ಯಗಳನ್ನಾಗ ಬರೆಯಬೇಕೆಂದಿಲ್ಲ. ಬಾಯಿಯಲ್ಲಿ ಉತ್ತರವನ್ನು ಉಚ್ಚರಿಸುತ್ತ ಅವಸರವಸರವಾಗಿ ಆ ಕಾಗದದ ಮೇಲೆ ಬರೆದರೂ ಸರಿಯೇ. ಅಂತೂ ಉತ್ತರದ ವಿನ್ಯಾಸ ನಿಮ್ಮ ಕರಗತವಾಗಬೇಕು. ಹೀಗೆ **ಈ ಮನನ ಹಾಗೂ ಲೇಖನಗಳ ಕೆಲಸ ನಿಮ್ಮ ರಿವಿಷನ್‌ನ ಅವಿಭಾಜ್ಯ ಅಂಗಗಳಾಗಬೇಕು.**

ಈ ರಿವಿಷನ್ ಮಾಡುವಾಗ ಚಿಕ್ಕ ನೋಟ್ಸ್ ಪುಸ್ತಕವೊಂದನ್ನು ತೆಗೆದುಕೊಂಡು ಅದರಲ್ಲಿ ಮುಖ್ಯ ಪ್ರಶ್ನೆಗಳ ಉತ್ತರಗಳ ಮುಖ್ಯಾಂಶಗಳನ್ನು ಬರೆದಿಟ್ಟುಕೊಳ್ಳಬಹುದು. ಕೆಲವು ವಿಚಾರಗಳನ್ನು ನೆನಪಿಟ್ಟುಕೊಳ್ಳಲು ನಿಮ್ಮದೇ ಆದ ಸುಲಭ ತಂತ್ರಗಳನ್ನೂ, ಮೊದಲ ಅಕ್ಷರಜನ್ಯ ಶಬ್ದ- mnemonics-ಗಳನ್ನೂ ಉಪಯೋಗಿಸಬಹುದು. (ಹೀಗೆ ಆಮ್ಲಗಳು ನೀಲಿ ಲಿಟ್ಮಸನ್ನು ಕೆಂಪು ಮಾಡುತ್ತವೆಂಬುದನ್ನು ಆನಿಕೆ ಎಂದೂ, ಬೆಸುಗೆ ಲೋಹದ ಘಟಕಗಳು ಸೀಸ ಮತ್ತು ತವರ ಎಂಬುದನ್ನು ಸೀತ ಎಂದೂ, ಬೆಳಕಿನ ವರ್ಣಮಾಲೆಯಲ್ಲಿನ ಊದಾ, ನೇರಳೆ, ನೀಲಿ, ಹಸಿರು, ಹಳದಿ, ಕಿತ್ತಳೆ, ಕೆಂಪು ಬಣ್ಣಗಳನ್ನು VIBGYOR ಅಥವಾ ಊಟ ಮಾಡಿ ನೇರವಾಗಿ ನೀವು ಹತ್ತು ಹಣ್ಣುಗಳನ್ನು ಕಿತ್ತು ಕೆಡವಿ ಎಂದೂ ನೆನಪಿಟ್ಟುಕೊಳ್ಳಬಹುದಾಗಿದೆ) ಪರೀಕ್ಷೆಯ ಮುನ್ನಾದಿನದ ಅವಸರ ಅವಸರದ ರಿವಿಷನ್‌ಗೆ ಅವೆಲ್ಲ ಉಪಯುಕ್ತವಾಗುತ್ತವೆ. ಕಲಿತ ಸ್ಟೋರಿಯನ್ನೋ, ನಿಯಮವನ್ನೋ, ಸೂತ್ರವನ್ನೋ ಆಗಾಗ ಮೆಲುಕುಹಾಕುತ್ತ ನೆನಪಿಸುತ್ತಲೇ ಇರಬೇಕು. 'ಅಮ್ಮ ಅಮ್ಮ' ಎಂದಾಗಲೆಲ್ಲ ಅಮ್ಮ ಓಗೊಟ್ಟರೆ ಅಮ್ಮ ನಿದ್ದೆ ಹೋಗಿಲ್ಲ ಎಂಬುದು ಖಾತ್ರಿಯಾಗುವಂತೆ, ನೆನಪಿಸಿದಾಗಲೆಲ್ಲ ಈ ವಿಚಾರಗಳು ಮನಃಪಟಲದಲ್ಲಿ ಮೂಡಿದರೆ ಅವು ಮನೋಮಂಡಲದಲ್ಲಿ ಜಾಗೃತವಾಗಿವೆ ಎಂಬುದು ಖಚಿತವಾಗುತ್ತದೆ.

## ಕಠೋರ ತಪಸ್ಸಿನ ದಿನಗಳು

ರಿವಿಷನ್ ಮಾಡತೊಡಗಿದ ಮೇಲೆ 'ಆ ನೋಟ್ಸ್ ಬರೆದುಕೊಳ್ಳಲಿಲ್ಲ. ಈ ಚಿತ್ರ ಬಿಡಿಸಿಕೊಳ್ಳಲಿಲ್ಲ' ಎಂದು ಸ್ನೇಹಿತರ ಮನೆಗೆ ತಿರುಗುವ ಬೇಜವಾಬ್ದಾರಿ ವಿದ್ಯಾರ್ಥಿಗಳೂ ಇದ್ದಾರೆ. ನೀವು ಅಂಥವರಾಗಬಾರದು. ಇನ್ನು ಕೆಲವರು ನಿಮ್ಮ ಏಕಾಗ್ರತೆಗೆ ಭಂಗ ತರಬೇಕೆಂದೇ ತಾವು ಅಷ್ಟು ಬಾರಿ ಓದಿದೆವು, ಹಾಗೆ ಮಾಡಿದೆವು, ಹೀಗೆ ಮಾಡಿದೆವು ಎಂದು ಬಣ್ಣಿಸುವುದುಂಟು. ನೀವು ಅವರ ಮಾತಿಗೂ ಕಿವಿಗೊಡಬೇಡಿ. ಈ ರಿವಿಷನ್ ದಿನಗಳನ್ನು ಕಠೋರ ತಪಸ್ಸಿನ ದಿನಗಳೆಂದು ಎಣಿಸಿ ಏಕಾಗ್ರತೆ, ನೇಮ, ನಿಷ್ಠೆಗಳಿಂದ ಕಳೆಯಿರಿ. ಆಗ ದೇಹದ ಶೃಂಗಾರ-ಅಲಂಕಾರ ಗೌಣವಾಗಲಿ; ಟಿ.ವಿ., ಸಿನೆಮಾ, ರೇಡಿಯೋ ದೂರವಾಗಲಿ; ಮಾತುಕತೆ ಕಡಿಮೆ ಆಗಲಿ; ಊಟ ಹಿತಮಿತವಾಗಲಿ. (ಅದರಲ್ಲೂ ಬೆಳಗ್ಗೆ ಬೇಗ ಎಚ್ಚರವಾಗಲೂ, ಉಲ್ಲಾಸದಿಂದ ಕಾರ್ಯೋನ್ಮುಖವಾಗಲೂ ರಾತ್ರಿ ಮಿತಾಹಾರ ಸೇವಿಸುವುದು ತೀರಾ ಅಗತ್ಯ.) ಆದರೆ ಆರೋಗ್ಯದ ಕಡೆ ತೀವ್ರ ಗಮನವಿರಲಿ.

ಒಂದೇ ಸವನೆ ಓದಿದರೆ ತಲೆ ಬಿಸಿ ಆಗಿ ಕೆಟ್ಟು ಹೋಗುತ್ತದೆಂದು ಈ ಅಮೂಲ್ಯ ರಿವಿಷನ್ ದಿನಗಳಲ್ಲೂ ಟಿ.ವಿ., ಸಿನೆಮಾ ನೋಡುತ್ತ ಕಾಲ ಕಳೆಯುವವರಿದ್ದಾರೆ. ಹೌದು, ಅವುಗಳನ್ನು ನೋಡುವಾಗ ಮನೋರಂಜನೆ ಆಗುತ್ತದೆ ನಿಜ. ಆದರೆ ಕಳ್ಳ ಮನಸ್ಸು ಅನಂತರವೂ ಅವುಗಳಿಂದ ಹಿಂದಿರುಗಲೊಲ್ಲದೇ ರಿವಿಷನ್‌ಗೆ ತೊಂದರೆಯಾಗುತ್ತದೆ. ಟಿ.ವಿ.ಯಲ್ಲೋ, ಸಿನಿಮಾದಲ್ಲೋ 'ಪ್ರೇಮದ ಕಡಲಲ್ಲೀ.....' ಪದ್ಯ ಕೇಳಿ ಕನಸಿನ ಲೋಕದಲ್ಲಿ ವಿಹರಿಸಿದವರಿಗೆ ಮರುದಿನ ಪುಸ್ತಕ ತೆರೆದರೂ ಆ 'ಪ್ರೇಮದ ಕಡಲೇ' ಅಲ್ಲಿ ಕಾಣಿಸುತ್ತದೆ. ಇನ್ನು ರೇಡಿಯೋದಲ್ಲಿ ಆ ಪದ್ಯ ಮೊರೆಯತೊಡಗಿದರಂತೂ ಕೇಳುವುದೇ ಬೇಡ-- ಕೈ ಕಾಲುಗಳೆಲ್ಲ ಅದೇ ಗುಂಗಿನಲ್ಲಿ ತಾಳಹಾಕುತ್ತಾ ಕುಣಿಯತೊಡಗುತ್ತವೆ. ಇದರಿಂದಾಗಿ ಸ್ವಲ್ಪ ಕಾಲ ಪರೀಕ್ಷೆಯ ನೆನಪೇ ಮಾಸಿದಂತಾಗಿ ರಿವಿಷನ್‌ನ ಓಟಕ್ಕೆ ಧಕ್ಕೆಯಾಗುತ್ತದೆ. ಹೀಗೆ ರೋಗಕ್ಕಿಂತ ಚಿಕಿತ್ಸೆ ಭಯಾನಕ ಆಗುವುದರಿಂದಲೇ ಪರೀಕ್ಷೆ ಮುಗಿಯುವವರೆಗೂ ಟಿ.ವಿ., ಸಿನೆಮಾಗಳಿಗೆ ಗುಡ್‌ಬೈ ಹೇಳುವುದೊಳಿತು.

ಹಾಗಾದರೆ ಮನದ ಆಯಾಸ ಕಳೆಯುವುದೆಂತು ? ಸರಿ, ಕುಳಿತು ಓದುವಾಗ ಆಯಾಸವಾಗಿ

ಆಕಳಿಕೆ ಬರತೊಡಗಿದರೆ, ನಿಂತುಕೊಂಡು ಓದುವುದು; ಹೊರಗಡೆ ಗಾಳಿಯಲ್ಲಿ ತಿರುಗಾಡುತ್ತ ಓದುವುದು; ಪುಸ್ತಕದಲ್ಲಿ ನೆಟ್ಟ ಕಣ್ಣನ್ನು ಕಿತ್ತು ಹಸಿರು ಮರ ಗಿಡಗಳನ್ನೋ, ನೀಲಿ ಗಗನವನ್ನೋ, ನೋಡುವುದು; ತಂಗಾಳಿಯಲ್ಲಿ ಓಡಾಡುವುದು-ಇವೇ ಆಯಾಸ ಪರಿಹಾರದ ಸುಲಭ ಮಾರ್ಗಗಳು. ಬೆಳಗ್ಗಿನ ಹಾಗೂ ಸಂಜೆಯ ಹೊತ್ತುಗಳಲ್ಲಿ ಬಯಲು, ನದಿ, ಸಮುದ್ರಗಳ ರಮ್ಯ ಪರಿಸರದಲ್ಲಿ ಓದುವುದರಿಂದ ವಿಚಾರಗಳು ಬೇಗ ಮನದಟ್ಟಾಗುತ್ತವೆ. ಓದುವಾಗ ನಿದ್ರೆಬರುವಂತಾದರೆ ಕಣ್ಣುಗಳನ್ನು ನೀರಿನಿಂದ ಚೆನ್ನಾಗಿ ತೊಳೆದುಕೊಳ್ಳುವುದರಿಂದಲೂ, ಸ್ವಲ್ಪ ನೀರು ಕುಡಿದು ಎದೆ ಉಬ್ಬಿಸಿ ಜೋರಾಗಿ ಉಸಿರೆಳೆದುಕೊಳ್ಳುವುದರಿಂದಲೂ, ಹೊಸತನ ಅಂಕುರಿಸಿ ನಿದ್ದೆಯಲ್ಲ ಓಡಿಹೋಗುತ್ತದೆ. ಕಲ್ಲು ಸಕ್ಕರೆಯನ್ನೋ, ಗ್ಲುಕೋಸನ್ನೋ ಸೇವಿಸುವುದೂ ಪರಿಣಾಮಕಾರಿ. (ಆದರೆ ಅವುಗಳ ಸೇವನೆಗಾಗಿಯೇ ನಿದ್ದೆಬಾರದಿರಲಿ !) ಮತ್ತೂ ನಿದ್ದೆ ಬಂದರೆ ಒಂದು ಮೆಣಸಿನಕಾಳು, ಒಂದು ಲವಂಗ ಮತ್ತು ಒಂದು ಚೂರು ಶುಂಠಿ ಸೇರಿಸಿ ತಿನ್ನಿ. ಒಮ್ಮೆ ಗರಂ ಆಗಿ ನಿದ್ದೆ ಕಾಲ್ಕೀಳುತ್ತದೆ. ಅಪ್ಪಾದರೂ ನಿದ್ದೆಯ ಕಾಟ ತಡೆಯಲಾಗದಿದ್ದರೆ ಒಂದೈದು ನಿಮಿಷ ಮೈ ಬಿಡಿಸಿ ದೀರ್ಘ ಉಸಿರನ್ನೆಳೆಯುತ್ತ ಮಲಗಿ. ಕ್ಷಣಕಾಲ ಗಾಢ ನಿದ್ರೆ ಬಂದು ಆಯಾಸವೆಲ್ಲ ಪರಿಹಾರವಾಗಿ ಉಲ್ಲಾಸ ಉಕ್ಕುವಂತಾಗುತ್ತದೆ. ಅಂತೂ ನೀವು ಎಷ್ಟು ಹೊತ್ತು ಅಭ್ಯಾಸ ಮಾಡುವಿರಿ ಎನ್ನುವುದಕ್ಕಿಂತಲೂ ಹೇಗೆ ಅಭ್ಯಾಸ ಮಾಡುವಿರಿ ಎನ್ನುವುದು ಮುಖ್ಯ. ಈ ಅಭ್ಯಾಸದ ತೀವ್ರತೆಯೇ ನಿಮ್ಮ ಯಶಸ್ಸಿನ ರೂವಾರಿ ಎಂಬುದನ್ನು ಮರೆಯದಿರಿ. ಅಂತೂ ಪರೀಕ್ಷೆ ಸಮೀಪಿಸಿದಂತೆ ಸ್ಕೋರಿ ಬರೆಯುವುದು, ಉತ್ತರ ಬರೆಯುವುದು, ಸಮಸ್ಯೆ ಪರಿಹರಿಸುವುದು, ಚಿತ್ರ ಬಿಡಿಸುವುದು, ಹೀಗೆ ಎಲ್ಲ ಪಾಠಗಳ ಎಲ್ಲ ಬಗೆಯ ಪ್ರಶ್ನೆಗಳ ಮೇಲೂ ನಿಮ್ಮ ಪ್ರಭುತ್ವ ಹೆಚ್ಚಿ ಆತ್ಮವಿಶ್ವಾಸ ಉಕ್ಕುವಂತಾಗಬೇಕು.

**ಪರೀಕ್ಷೆಯ ಮುನ್ನಾದಿನ....**

೬೫ ಅಂಕಿಗಳ ಟೆಲಿಫೋನ್ ನಂಬರು ಇದ್ದರೆ ಒಂದೊಂದೇ ಅಂಕಿಯನ್ನು ಸಾವಧಾನವಾಗಿ ಡಯಲು ಮಾಡುತ್ತ ಹೋದಂತೆ, ೬೫ ಅಂಕಿಗಳು ಮುಗಿಯುತ್ತಲೇ ರಿಂಗ್ ಆಗತೊಡಗುವುದಿಲ್ಲವೇ ? ಅದೇ ರೀತಿ ದಿನದಿನವೂ ನೀವು ನಿಷ್ಠೆಯಿಂದ ಈ ರೀತಿ ಯಶಸ್ಸಿನೆಡೆಗೆ ಹೆಜ್ಜೆ ಹಾಕಿದ ಪರೀಕ್ಷೆಯ ಮುನ್ನಾದಿನ ಬಂದೇ ಬರುತ್ತದೆ. ಅಂದು ಮರುದಿನದ ಪರೀಕ್ಷೆಯ ವಿಚಾರದ ಕಡೆಗೇ ಪೂರ್ತಿ ಗಮನಕೊಡಿ. ರಾತ್ರಿ ಮಲಗುವ ಮೊದಲೇ ಪರೀಕ್ಷೆಗೆ ಬೇಕಾದ ಸಲಕರಣೆಗಳನ್ನೆಲ್ಲ ಚೆನ್ನಾಗಿ ಬರೆಯುವ ಎರಡು) ಪೆನ್ನುಗಳು, ಪೆನ್ಸಿಲು, ರಬ್ಬರು, ಹಾಲ್‌ಟಿಕೆಟ್ ಇತ್ಯಾದಿಗಳನ್ನೆಲ್ಲ ಅಣಿಗೊಳಿಸಿಡಿ. **ಅಂದು ನಿದ್ದೆಗೆಟ್ಟು ಓದಬೇಡಿ**. ಯಶಸ್ಸಿನ ದೇವತೆಯನ್ನು ಎದುರುಗೊಳ್ಳಲು ಹಾಯಾಗಿ ನಿದ್ದೆ ಮಾಡಿ ಉಲ್ಲಸಿತರಾಗಿ ಮೇಲೇಳಿ.

ಟ್ರಾಮ್ ಬಂಡಿ ನಿಲ್ದಾಣದಲ್ಲಿ ಬಂದು ಕ್ಷಣ ಕಾಲ ನಿಲ್ಲುತ್ತದೆ. ಆ ವೇಳೆಯಲ್ಲಿ ಎಚ್ಚರದಿಂದ ಅದನ್ನೇರಿದರೆ ಮಾತ್ರ ಯಾನ ಸಲೀಸು.... ಅದೇ ರೀತಿ ಗಣಿತದಲ್ಲಿ ನೂರು ಮಾರ್ಕು ಗಳಿಸಬೇಕು ಎಂದು ವರ್ಷದ ಆದಿಯಲ್ಲಿ ನಿರ್ಧರಿಸಿದ ಗುರಿ ಸೇರುವ ಶುಭಗಳಿಗೆ ಲೆಕ್ಕದ ಪರೀಕ್ಷೆಯಾಗಿ ಬಂದಿದೆ ಎಂದೆಣಿಸಿ, ಟ್ರಾಮ್ ಬಂಡಿಯನ್ನು ಎಚ್ಚರದಿಂದ ಏರಿದಂತೆ ನೀವೀಗ ಧೈರ್ಯದಿಂದ ಪರೀಕ್ಷೆಯನ್ನೆದುರಿಸಿದಲ್ಲಿ ಮಾತ್ರ ಯಶಸ್ಸಿನ ಶಿಖರದೆಡೆಗೆ ನಿಮ್ಮ ಯಾನ ಸುಖಾಂತ್ಯವಾಗುವುದಂತೂ ಖಂಡಿತ. ಆದ್ದರಿಂದ ನಗುನಗುತ್ತ ಉಲ್ಲಾಸದಿಂದ ಏಳಿ. ಮೇಲೆದ್ದು ನಿಮ್ಮ ಎಂದಿನ ದಿನಚರಿ ಮುಗಿಸಿ. ಚಿಕ್ಕ ನೋಟ್ಸ್‌ಪುಸ್ತಕದಲ್ಲಿ ಬರೆದಿಟ್ಟುಕೊಂಡ ಸೂತ್ರಗಳನ್ನೂ, ಸಮಸ್ಯೆಗಳನ್ನೂ ಬಗೆಹರಿಸುವ ರೀತಿಗಳನ್ನೂ ಅವಲೋಕಿಸಿ. ಹೊಸದಾಗಿ ಬೇರೇನನ್ನೂ ನೋಡಬೇಡಿ. ಓದಿದ್ದನ್ನೇ ಮನನ ಮಾಡುತ್ತ ಊಟ ಮಾಡಿ. ಹತ್ತೂವರೆ ಗಂಟೆಗೆ ಪರೀಕ್ಷೆಯಾದರೆ ಒಂಬತ್ತೂವರೆ ಗಂಟೆಯೊಳಗೇ ಪರೀಕ್ಷಾ ಕೇಂದ್ರದಲ್ಲಿರಲಾಗುವಂತೆ ಬೇಗ ಹೊರಡಿ. ಒಗೆದಿರಿಸಿದ ಶುಭ್ರ ಬಟ್ಟೆಯನ್ನು ಧರಿಸಿಕೊಂಡು ಉಲ್ಲಾಸದಿಂದ ನಗುನಗುತ್ತ ಹೆಜ್ಜೆ ಹಾಕಿ. ಮಗುವನ್ನು ಎದುರುಗೊಳ್ಳಲು ತಾಯಿ ಬರುತ್ತಿದ್ದಾಳೆಂದೆಣಿಸಿ. ಆಗ ಮಗುವಿನ ಮನದಲ್ಲಿ ಉಕ್ಕುವ ಸಂತಸದಂತೆ, ಯಾವ ಯಶಸ್ಸಿಗಾಗಿ ವರ್ಷವಿಡೀ ಪ್ರಯತ್ನಿಸಿದಿರೋ ಅದೇ ಈಗ ನಿಮ್ಮ ಬಳಿಗೆ ಬರುತ್ತಿರುವಾಗ

ವಿದ್ಯಾರ್ಥಿಯ ಜೀವನಶಿಲ್ಪ ರೂಪಿಸುವಲ್ಲಿ ಈ ಅಂಶಗಳ ಕೊಡುಗೆಯ ಶೇಕಡಾ ಪ್ರಮಾಣ ಈ ಕೆಳಗಿನಂತಿದೆ:

| | |
|---|---|
| ೧. ರಕ್ಷಕರು: | ಶೇಕಡಾ ೪೦. |
| ೨. ಶಿಕ್ಷಕರು: | ಶೇಕಡಾ ೨೦. |
| ೩. ವಿದ್ಯಾರ್ಥಿಯ ಸಂಚಿತಕರ್ಮ: | ಶೇಕಡಾ ೫. |
| ೪. ಸ್ವಪ್ರಯತ್ನ: | ಶೇಕಡಾ ೧೫. |
| ೫. ಗೆಳೆಯರು: | ಶೇಕಡಾ ೧೦. |
| ೬. ಸಮಾಜ: | ಶೇಕಡಾ ೨. |
| ೭. ಸರಕಾರ: | ಶೇಕಡಾ ೨. |
| ೮. ಸಿರಿತನ ಇಲ್ಲವೆ ಬಡತನ: | ಶೇಕಡಾ ೧. |
| ೯. ದೈವಭಕ್ತಿ-ಶ್ರದ್ಧೆ: | ಶೇಕಡಾ ೫. |

ಅಂದರೆ ರಕ್ಷಕರ ಹಾಗೂ ಶಿಕ್ಷಕರ ಪ್ರಭಾವವೇ ವಿದ್ಯಾರ್ಥಿಯ ಜೀವನ ರೂಪಿಸುವಲ್ಲಿ ಪ್ರಧಾನ ಪಾತ್ರವಹಿಸುತ್ತದೆ. ಆದ್ದರಿಂದ ರಕ್ಷಕರೂ, ಶಿಕ್ಷಕರೂ ಜಾಗೃತರಾದರೆ ವಿದ್ಯಾರ್ಥಿಗಳ ಉದ್ಧಾರ ಬೇಗ ಸಾಧ್ಯ.

ನಿಮ್ಮಲ್ಲೂ ಆತ್ಮವಿಶ್ವಾಸದ ಸಂತಸ ಉಕ್ಕುತ್ತಿರಲಿ.

## ಗಂಟೆ ಹೊಡೆಯುವ ಹೊತ್ತಿಗೆ

ಓದುತ್ತ ಕುಳಿತು, ತಡವಾಗಿ ಮನೆಯಿಂದ ಹೊರಟು, ಬೆವರಿಳಿಸುತ್ತ ಪರೀಕ್ಷಾ ಕೋಣೆಗೆ ಓಡಿ ಬರುವವರಿದ್ದಾರೆ; 'ಹಾಲ್‌ಟಿಕೆಟ್ ಪೆಟ್ಟಿಗೆಯಲ್ಲೇ ಬಿಟ್ಟು ಬಂದೆ....' ಎಂದು ಗಡಿಬಿಡಿಯಿಂದ ಮನೆ ಗೋಡುವವರಿದ್ದಾರೆ; ರಾಶಿ ಪುಸ್ತಕಗಳನ್ನೇ ಹೊತ್ತು ತರುವವರಿದ್ದಾರೆ. ದಾರಿಯುದ್ದಕ್ಕೂ ಮಾತ್ರವಲ್ಲ, ಪ್ರಶ್ನೆಪತ್ರಿಕೆ ಕೊಡುವ ಗಳಿಗೆಯವರೆಗೂ ಪುಸ್ತಕ ಬಿಡಿಸಿ ಓದುವವರಿದ್ದಾರೆ. ಆದರೆ ನೀವು ಹಾಗೆಲ್ಲ ಮಾಡಬೇಡಿ. ಯಾರೊಡನೆಯೂ ಹೆಚ್ಚು ಮಾತನಾಡದೆ ಪರೀಕ್ಷಾ ಕೇಂದ್ರದಲ್ಲಿ ನಿಮ್ಮ ಕೋಣೆ ಯಾವುದೆಂದು ಮೊದಲು ನೋಡಿಕೊಳ್ಳಿ. ಅಲ್ಲೇ ಸಮೀಪದ ನೆರಳಿನಲ್ಲಿ ಕುಳಿತು ಮತ್ತೊಮ್ಮೆ ನಿಮ್ಮ ಮಿನಿನೋಟ್ಸನ್ನು ಮಗುಚಿಹಾಕಿ. ಗಂಟೆ ಬಾರಿಸುತ್ತಲೇ ಧೈರ್ಯದಿಂದ ಪರೀಕ್ಷಾ ಕೊಠಡಿಯನ್ನು ಪ್ರವೇಶಿಸಿ.

ಮನದಲ್ಲೇ ನಿಮ್ಮ ಗುರಿಯನ್ನು ನೆನೆಯಿರಿ. ಯಶಸ್ಸನ್ನು ಗಳಿಸದಿದ್ದರೆ ಭವಿಷ್ಯ ಬೆಳಗದೆಂದು ಜಾಗ್ರತರಾಗಿ. ಚೊಕ್ಕವಾಗಿ, ಚೆನ್ನಾಗಿ, ಕ್ರಮಬದ್ಧವಾಗಿ ಬರೆಯಲು ಸನ್ನದ್ಧರಾಗಿ. ಸರಿ. ಗಂಟೆ ಬಾರಿಸುತ್ತದೆ. ಪ್ರಶ್ನೆ ಪತ್ರಿಕೆ ಕೈಗೆ ಬರುತ್ತದೆ. ಆಮೂಲಾಗ್ರವಾಗಿ ಅದನ್ನು ಓದಿ.

ಯಾವುದಾದರೂ ಒಂದು ಪ್ರಶ್ನೆಯನ್ನು ಉತ್ತರಿಸಿ ಎಂದಿದ್ದರೆ, ಒಂದು ಎಂಬುದರ ಕೆಳಗೆ ಗೆರೆ-ಒಂದು-ಎಳೆದುಕೊಳ್ಳಿ, ಬರೆ, ಸಾಧಿಸು, ಹೋಲಿಸು, ವಿವರಿಸು ಚರ್ಚಿಸು.... ಇತ್ಯಾದಿ ಹೇಳಿಕೆಗಳನ್ನೆಲ್ಲ ಚೆನ್ನಾಗಿ ಗಮನಿಸಿ. ಈಗ ನಿಮ್ಮ ಯಶಸ್ಸಿನ ಆಧಾರ ಸ್ತಂಭಗಳು ಈ ಪ್ರಶ್ನೆಗಳೇ ಎಂಬುದನ್ನು ಮನಗಾಣಿ. ಪ್ರತಿಯೊಂದು ಪ್ರಶ್ನೆಗೂ ಪರಿಪೂರ್ಣತೆಯೇ ಮೈವೆತ್ತಂತೆ ಚೆನ್ನಾಗಿ ಉತ್ತರ ಬರೆಯಲು ತೊಡಗಿ.

## ಸ್ಪಷ್ಟವಾಗಿ, ಕ್ರಮಬದ್ಧವಾಗಿ

ಮೊದಲ ನೋಟಕ್ಕೇ ಪರೀಕ್ಷಕರಲ್ಲಿ ಸದ್ಭಾವನೆ ಮೂಡಿಸಲು ನಿಮಗೆ ಚೆನ್ನಾಗಿ ಉತ್ತರ ಗೊತ್ತಿರುವ ಪ್ರಶ್ನೆಯನ್ನೇ ಮೊದಲು ಆಯ್ದುಕೊಳ್ಳಿ. ಮೊದಲ ಪ್ರಶ್ನೆಯನ್ನೇ ಮೊದಲು ಉತ್ತರಿಸಬೇಕೆಂಬ ನಿಯಮವೇನಿಲ್ಲ. ಆದರೆ ಉತ್ತರಿಸುವ ಪ್ರಶ್ನೆಯ ಸಂಖ್ಯೆಯನ್ನು ಮಾತ್ರ ಮಾರ್ಜಿನ್‌ನಲ್ಲಿ ಸ್ಪಷ್ಟವಾಗಿ ಬರೆಯಿರಿ. ಉತ್ತರ ಪತ್ರಿಕೆಯ ಗೆರೆಗಳು ತುಂಬ

ದಪ್ಪವಾಗಿರುವುದುಂಟು. ಆದರಿಂದ ತೆಳ್ಳಗೆ ಬರೆಯುವ ಪೆನ್ನಿನ ಅಕ್ಷರಗಳು ಆ ಗೆರೆಗಳಲ್ಲಿ ಮುಳುಗಿಯೇ ಹೋಗುತ್ತವೆ. ಬರೆದು ಬಳಕೆಯಾಗದ ಪರೀಕ್ಷೆಗಾಗಿಯೇ ಹೊಸಪೆನ್ನನ್ನೋ, ನಿಬ್ಬನ್ನೋ ಬಳಸಿದರೂ ಹೀಗಾಗುತ್ತದೆ. ಆದ್ದರಿಂದ ಹೀಗಾಗದಂತೆ ಎಚ್ಚರವಹಿಸಿ. ಎದ್ದು ಕಾಣುವ ಸ್ಪಷ್ಟ ಅಕ್ಷರಗಳಲ್ಲಿ ಕ್ರಮಬದ್ಧವಾಗಿ ಒಂದರ ಕೆಳಗಿನ್ನೊಂದರಂತೆ ನಿಮ್ಮ ಉತ್ತರಗಳು ಮೂಡಿಬರಲಿ.

ಟೈಪಿಂಗ್ ಕಲಿಯುವವರೂ, ಹಾರ್ಮೋನಿಯಂ ಕಲಿಯುವವರೂ ಮೆಲ್ಲಮೆಲ್ಲನೆ ಬೇಗಬೇಗನೆ ಸೂತ್ರವನ್ನನುಸರಿಸಿ ಯಶಸ್ವಿಯಾಗುತ್ತಾರೆ. ನೀವೂ ಈಗ ಯಶಸ್ಸಿಗಾಗಿ ಅದೇ ಸೂತ್ರವನ್ನನುಸರಿಸಬೇಕು. ಪ್ರಶ್ನಸಂಖ್ಯೆಯನ್ನು ನಮೂದಿಸುತ್ತ, ಉತ್ತರಿಸಿದ ಪ್ರಶ್ನೆಗೆ ಪ್ರಶ್ನಪತ್ರಿಕೆಯಲ್ಲಿ ಗುರುತು ಹಾಕುತ್ತ, ಒಂದೊಂದಾಗಿ ಉತ್ತರಿಸುತ್ತ ಹೋಗಿ. ನಾಲ್ಕಾರು ಪ್ರಶ್ನೆಗಳಿಗೆ ಉತ್ತರಿಸುವ ವೇಳೆಗೆ ಯಶಸ್ಸಿನ ಶಿಖರ ಏರಲೇಬೇಕೆಂಬ ಹಂಬಲ ಜಾಗೃತವಾಗಿ ಕೈಗಳಲ್ಲಿ ಅದೇನೋ ಶಕ್ತಿ ಸಂಚಾರವಾದಂತಾಗುತ್ತದೆ. ಉತ್ತರಗಳನ್ನೆಲ್ಲ ಪರಿಪೂರ್ಣವಾಗಿಸುವ ತುಡಿತ ಉಕ್ಕುತ್ತದೆ. ಅದರಿಂದಾಗಿ ಆಚೀಚಿನ ಪರಿವೆ ಇಲ್ಲದೆ ಒಂದಾದ ಮೇಲೆ ಮತ್ತೊಂದರಂತೆ ಪ್ರಶ್ನೆಗಳನ್ನು ಉತ್ತರಿಸುತ್ತ ಹೋಗಲು ಸಾಧ್ಯವಾಗುತ್ತದೆ.

ಹೊಸ ಪ್ರಶ್ನೆಯನ್ನು ಹೊಸ ಪುಟದಲ್ಲೇ ಪ್ರಾರಂಭಿಸುವವರಿದ್ದಾರೆ. ಆದರೆ ಒಂದೊಂದು ಪ್ರಶ್ನೆಯ ಒಂದೊಂದು ಭಾಗ ಉತ್ತರಿಸುವಾಗ ಈ ಕ್ರಮ ಹೇಳಿಸಿದ್ದಲ್ಲ. ಅದಕ್ಕೆಂದೇ ಪ್ರತಿಯೊಂದು ಪ್ರಶ್ನೆ ಆದ ನಂತರ ಎರಡು ಮೂರು ಗೆರೆ ಬಿಟ್ಟು ಮುಂದಿನ ಪ್ರಶ್ನೆ ಪ್ರಾರಂಭಿಸಿ.

### ಸಮಯಪ್ರಜ್ಞೆ

ಸಮಯದ ಕಡೆಗೆ ಗಮನ ಕೊಟ್ಟು ಚುಟುಕು- ಚುಟುಕಾಗಿಯೇ ಬರೆಯಲು ಯತ್ನಿಸಿ. ಪ್ರಶ್ನೆಗಳನ್ನೆಂದಿಗೂ ಬಿಡಬೇಡಿ. ಒಂದೊಮ್ಮೆ ಒಂದು ಪ್ರಶ್ನೆಯನ್ನು ಹೇಗೆ ಉತ್ತರಿಸುವುದೆಂದು ಸರಿಯಾಗಿ ತಿಳಿಯದಿದ್ದರೆ, ಇಲ್ಲವೇ ಒಂದು ಲೆಕ್ಕವನ್ನು ಮಾಡುವಾಗ ಎಲ್ಲೋ ತಪ್ಪಾಗಿ ತಲೆಬಿಸಿ ಆದರೆ ಅಲ್ಲೇ ಸ್ವಲ್ಪ ಜಾಗ ಬಿಟ್ಟು ಮುಂದಿನ ಪ್ರಶ್ನೆಗಳನ್ನೆಲ್ಲ ಉತ್ತರಿಸಿ. ಎಂದಿಗೂ ಅದನ್ನು ಉತ್ತರಿಸಿಯೇ ಮುಂದುವರಿಯುವೆನೆಂಬ ಹಟ ಬೇಡ. ಎಲ್ಲ ಪ್ರಶ್ನೆಗಳನ್ನು ಉತ್ತರಿಸಿದ ಮೇಲೆ ಪುನಃ ಆ ಪ್ರಶ್ನೆಯನ್ನೆತ್ತಿಕೊಳ್ಳಿ. ಖಂಡಿತ ಆಗ ಉತ್ತರಿಸಲಾಗುತ್ತದೆ. **ಕೊನೆಯ ಕ್ಷಣದವರೆಗೂ ಎಂದಿಗೂ ಬರೆಯುತ್ತಿರಬೇಡಿ.** ಅವಧಿ ಮುಗಿಯುವ ಹತ್ತು ಹದಿನೈದು ನಿಮಿಷಗಳ ಮೊದಲೇ ನೀವು ಬರೆದ ಹಾಳೆಗಳನ್ನೆಲ್ಲ ಕ್ರಮಬದ್ಧವಾಗಿ ಜೋಡಿಸಿ ಪ್ರಶ್ನೆಗಳಿಗೆ ಬರೆದ ಉತ್ತರವನ್ನೊಮ್ಮೆ ಓದಿನೋಡಿ. ಆಗಲೇ ತಪ್ಪುಗಳನ್ನು ತಿದ್ದಿ, ಮುಖ್ಯಾಂಶಗಳಿಗೆ ಕೆಳಗೆರೆ (underline) ಹಾಕಿ. ಬಿಟ್ಟು ಹೋದ ವಿಚಾರಗಳನ್ನು ಸೇರಿಸಿ. ಅಂತೂ ನಿಮ್ಮ ಉತ್ತರದ ಶಿಲ್ಪಕ್ಕೆ ಪರಿಪೂರ್ಣತೆಯ ರೂಪ (final touches) ಕೊಡಿ.

### ಪಾಂಡಿತ್ಯ ಪ್ರದರ್ಶನ ಬೇಡ

ಆ ಪರೀಕ್ಷೆಯ ಬಗ್ಗೆ ಚರ್ಚಿಸದೆ, ಚಿಂತಿಸದೆ, ನೇರವಾಗಿ ಮರುದಿನದ ಪರೀಕ್ಷೆಯ ಯೋಚನೆಯಲ್ಲೇ ಮನೆಗೆ ಮರಳಿ. ಆ ಪರೀಕ್ಷೆಯ ಯಶಸ್ಸಿಗಾಗಿ ನಿಮ್ಮ ಪ್ರಯತ್ನವನ್ನೆಲ್ಲ ಕೇಂದ್ರೀಕರಿಸಿ.

ಶಿಲ್ಪದ ಮೂಗನ್ನು, ಕಿವಿಯನ್ನು, ಕಣ್ಣನ್ನು- ಹೀಗೆ ಒಂದೊಂದು ದಿನ ಒಂದೊಂದು ಅವಯವವನ್ನು ಪರಿಪೂರ್ಣವಾಗಿ ಮೂಡಿಸುತ್ತ ಸುಂದರ ಶಿಲ್ಪವೇ ಒಡಮೂಡುವಂತೆ ಒಂದೊಂದೇ ವಿಷಯದ ಪರೀಕ್ಷೆಯನ್ನೂ ಒಂದೊಂದು ದಿನ ಚೆನ್ನಾಗಿ ನಿರ್ವಹಿಸುತ್ತ ಅದ್ಭುತ ಯಶಸ್ಸೇ ನಿಮಗೊಲಿದು ಬರುವುದಂತೂ ಖಂಡಿತ.

'ರಾಮಾಯಣದ ಯುದ್ಧವು ಯಾರ ಯಾರ ನಡುವೆ ಜರುಗಿತು ?' ಎಂಬ ಪ್ರಶ್ನೆಗೆ 'ರಾಮಾಯಣದ ಯುದ್ಧವು ರಾಮ, ರಾವಣರ ನಡುವೆ ಜರುಗಿತು' ಎಂಬುದೇ ತಕ್ಕುದಾದ ಉತ್ತರ. ಅದಕ್ಕೆ ಮಾರ್ಕು ಸಿಗುತ್ತದೆ. ಹೀಗೆ ಬರೆಯದ ರಾಮಾಯಣದ ಬಗ್ಗೆ ತನ್ನ ಪಾಂಡಿತ್ಯ ತೋರಿಸಲೆಂದು 'ದಶರಥ ಮಹಾರಾಜನಿಗೆ ಮಕ್ಕಳಿರಲಿಲ್ಲ' ಎಂಬಲ್ಲಿಂದ ತೊಡಗಿ ಪುಟಗಟ್ಟಲೇ ಇಡೀ ರಾಮಾಯಣದ ಕಥೆ ಬರೆದು ಕಟ್ಟಕಡೆಗೆಲ್ಲೋ 'ರಾಮಾಯಣದ ಯುದ್ಧವು ರಾಮರಾವಣರ ನಡುವೆ ಜರುಗಿತು' ಎಂದು ಬರೆದರೆ ಪ್ರಶ್ನೆಗೆ ತಕ್ಕುದಾದ ಉತ್ತರ

ಇದಲ್ಲವೆಂದು ತೀರ್ಮಾನಿಸಿ ಪರೀಕ್ಷಕರು ಮಾರ್ಕು ಕೊಡಲಾರರು. ಆ ಪುಟಗಳೆಡೆಯಲ್ಲೆಲ್ಲೋ ಸರಿಯಾದ ಉತ್ತರ ಇದ್ದರೂ ಅದನ್ನು ಹುಡುಕಿ ತಡಕಿ ಅಂಕಗಳನ್ನು ಕೊಡುವಷ್ಟು ವ್ಯವಧಾನ ಪರೀಕ್ಷಕರಿಗಿರದು. ಆದ್ದರಿಂದ ಚುಟುಕಾಗಿ, ಚೆನ್ನಾಗಿ, ಚೊಕ್ಕವಾಗಿ ಬರೆಯುವುದವಶ್ಯ.

ಚುಟುಕಾಗಿ ಬರೆಯುವುದರಿಂದ ಚೆಂದವಾಗಿಯೂ ಬರೆಯಲಾಗುತ್ತದೆ. ಮಾತ್ರವಲ್ಲ ಪರೀಕ್ಷಕರ ಒಲುಮೆಗೂ ಪಾತ್ರರಾಗಬಹುದು. ಪರೀಕ್ಷಕರು ದಿನದಿನವೂ ರಾಶಿ ಉತ್ತರಪತ್ರಿಕೆಗಳ ಮೌಲ್ಯಮಾಪನ ಮಾಡಬೇಕಾಗಿರುವ್ನದರಿಂದ ಚುಟುಕಾಗಿ ಬರೆದರೆ ಮಾತ್ರ ಅವರು ಓದುವ ಸಂಭವ ಇದೆ. ಸುಮ್ಮನೆ ಉದ್ದುದ್ದ ಬರೆದರೆ ಅವರು ಓದಿ ನೋಡುವ ಗೋಜಿಗೆ ಹೋಗದೆ ಸುಮ್ಮನೆ ಒಂದಷ್ಟು ಮಾರ್ಕನ್ನು ಗೀಚಬಹುದು ಅಷ್ಟೇ.

'ಚೊಕ್ಕವಾಗಿ' ಎಂಬುದು ಶಾಯಿಕಲೆ, ಹೊಡೆದು ಬಡಿದು ಹಾಕಿದ ಗುರುತುಗಳಿರಬಾರದೆಂದು ಸೂಚಿಸಿದರೆ, 'ಚೆನ್ನಾಗಿ' ಎಂಬುದು ಬರಹ ಮುದ್ದಾಗಿರಬೇಕು, ಭಾಷೆ ಸುಂದರವಾಗಿದ್ದು ಸ್ಪೆಲ್ಲಿಂಗ್ ದೋಷಗಳಿಂದ ಮುಕ್ತವಾಗಿರಬೇಕು, ಪ್ಯಾರಾದ ನಂತರ ಪ್ಯಾರಾ ಬರೆದಿರಬೇಕು, ಒಂದರ ಕೆಳಗಿನ್ನೊಂದರಂತೆ (point by point) ನಮೂದಿಸಿರಬೇಕು, ಚಿತ್ರ, ತಪ್ತೆ, ನಕ್ಷೆ, ಸಮೀಕರಣ ಇತ್ಯಾದಿ ಒದಗಿಸಿರಬೇಕು ಎಂಬುದನ್ನು ಸೂಚಿಸುತ್ತದೆ.

**ನೆನಪಿಡಿ- ಉತ್ಕೃಷ್ಟ ಉತ್ತರದ ಲಕ್ಷಣಗಳು ಇವೆಂದು ಇವುಗಳನ್ನು ತಿಳಿದರೆ ಸಾಲದು, ವರ್ಷದ ಆದಿಯಿಂದಲೇ ಪ್ರಶ್ನೋತ್ತರ ಮಾಡುವಾಗಲೆಲ್ಲ, ತರಗತಿಯ ಪರೀಕ್ಷೆಗಳಲ್ಲಿ ಉತ್ತರಿಸುವಾಗಲೆಲ್ಲ ಈ ಲಕ್ಷಣಗಳು ನಿಮ್ಮ ಉತ್ತರಗಳಲ್ಲಿರುವಂತೆ ಎಚ್ಚರವಹಿಸಬೇಕು, ಇವೇ ನಿಮ್ಮ ಅಭ್ಯಾಸವಾಗಿಸಿಕೊಳ್ಳಬೇಕು.** ಆಗ ಮಾತ್ರ ಪರೀಕ್ಷಾಭವನದಲ್ಲಿ ಅಂತೆನೇ ಉತ್ತರಿಸಲಾದೀತು. ಅಂತೂ ನಿಮ್ಮ ಉತ್ತರ ಸುಂದರ ಶಿಲ್ಪದಂತೆ ಅಚ್ಚುಕಟ್ಟಾಗಿ ನಾಜೂಕಾಗಿರುವುದು ತೀರಾ ಅವಶ್ಯ.

ಮಾತನಾಡುವುದರಿಂದ, ಓದುವುದರಿಂದ, ಬರೆಯುವುದರಿಂದ ಯಾವುದೇ ಭಾಷೆಯಲ್ಲಿ ಪ್ರೌಢಿಮೆಯನ್ನು ಗಳಿಸಿಕೊಳ್ಳಬಹುದು. ಆದ್ದರಿಂದ ಕನ್ನಡವಿರಲಿ, ಇಂಗ್ಲೀಷೇ ಇರಲಿ ಚೆನ್ನಾಗಿ ಮಾತನಾಡಲು ಕಲಿಯಿರಿ. ಆ ಭಾಷೆಯ ವರ್ತಮಾನ ಪತ್ರಿಕೆಯನ್ನೋ, ಸಾಹಿತ್ಯ-ಗ್ರಂಥವನ್ನೋ ಓದಿರಿ. ಓದುವಾಗ ತುಂಬ ಚೆನ್ನಾದ ಭಾಗಗಳನ್ನೂ, ಒಳ್ಳೆಯ ಮಾತುಗಳನ್ನೂ ಒಂದು ಪುಸ್ತಕದಲ್ಲಿ ಬರೆದಿಟ್ಟುಕೊಳ್ಳಿ, (ಭಾಷಣ, ಲೇಖನ ಸ್ಪರ್ಧೆಗಳಿಗೆ ಆ ನುಡಿಮುತ್ತುಗಳೇ ಬಂಡವಾಳವಾಗುತ್ತವೆ.) ಹೊಸಶಬ್ದಗಳನ್ನೂ ಇದೇ ರೀತಿ ನಮೂದಿಸಿಕೊಂಡು, ಅವುಗಳ ಅರ್ಥ ತಿಳಿಯಿರಿ. ನಿಮ್ಮ ಭಾವನೆಗಳನ್ನು ನಿಮ್ಮದೇ ಮಾತುಗಳಲ್ಲಿ - ನಾಲ್ಕಾರು ಪಂಕ್ತಿಗಳಷ್ಟಾದರೂ ಸರಿಯೇ, ವ್ಯಕ್ತಪಡಿಸಲು ಕಲಿಯಿರಿ. ಆ ಪಂಕ್ತಿಗಳನ್ನೇ ಹೊಸ ಶಬ್ದ ನುಡಿಕಟ್ಟುಗಳನ್ನು ಉಪಯೋಗಿಸಿ ಇನ್ನೂ ಚೆನ್ನಾಗಿ ಬರೆಯಲು ಸಾಧ್ಯವೇ ಎಂದೂ ಯೋಚಿಸಿ. ಉತ್ತಮ ಲೇಖಕರ ಲೇಖನಗಳನ್ನೂ, ಭಾಷಣಕಾರರ ಭಾಷಣಗಳನ್ನೂ ಬಿಡದೆ ಓದಿ, ಕೇಳಿ. ನಿಮ್ಮ ಶಾಲೆಯಲ್ಲಿ ಭಿತ್ತಿ ಪತ್ರಿಕೆ (wall magazine) ಇದ್ದರೆ ನಿಮ್ಮ ಬರಹಗಳನ್ನು ಅದಕ್ಕಾಗಿ ಬರೆದು ಕೊಡಿ. ಪ್ರಬಂಧ ಬರೆಯುವಾಗ ಭಾಷೆ ಚೆನ್ನಾಗಿರುವಂತೆ ಪ್ರಯತ್ನಿಸಿ. ಲೇಖನ-ಭಾಷಣ ಸ್ಪರ್ಧೆಗಳಲ್ಲೆಲ್ಲ ತಪ್ಪದೆ ಭಾಗವಹಿಸಿ. ಅಂತೂ ತಪ್ಪಿಲ್ಲದ, ಕಿರಿದರೊಳು ಪಿರಿದರ್ಥವನ್ನು ಹೇಳಬಲ್ಲಂಥ ಸುಂದರ ಭಾಷೆಯಲ್ಲಿ ಉತ್ತರಗಳನ್ನು ಪ್ರಶ್ನೋತ್ತರ ಪುಸ್ತಕದಲ್ಲಿ ಮೊದಲೇ ಬರೆದಿಟ್ಟುಕೊಂಡು ಕಲಿತು ಪರೀಕ್ಷೆಯಲ್ಲಿ ಅವುಗಳನ್ನೇ ನೆನಪಿಸಿಕೊಂಡು ಸರಸರನೆ ಬರೆದು ಮುಗಿಸಿ. ಪರೀಕ್ಷಾಕೋಣೆಯಲ್ಲೇ ಭಾಷೆ ಸುಂದರವೂ, ತಪ್ಪಿಲ್ಲದಂತೆಯೂ ಇರಬೇಕೆಂದು ನೀವು ಯೋಚಿಸಿ ಬರೆಯುವುದು 'ಯುದ್ಧಕಾಲೇ ಶಸ್ತ್ರಾಭ್ಯಾಸಃ' ಎಂಬಂತೆಯೇ ಆದೀತು. ಆದ್ದರಿಂದ ವರ್ಷದ ಮೊದಲಿನಿಂದಲೇ ಈ ಬಗ್ಗೆ ಪ್ರಯತ್ನಿಸಿ, ಸುಂದರ ಭಾಷೆಯಲ್ಲಿ ಚೆನ್ನಾಗಿ ಬರೆಯುವುದು ಪರೀಕ್ಷಕರ ಮೆಚ್ಚುಗೆ ಗಳಿಸುವ ಪರಮ ಅಸ್ತ್ರ ಎಂಬುದನ್ನು ಮರೆಯದಿರಿ.

### ಅಧಿಕಾಂಕ ಪಡೆಯಲು....

ಸರಿಯಾದ ಉತ್ತರಗಳನ್ನು ಬರೆದ ಹತ್ತು ವಿದ್ಯಾರ್ಥಿಗಳ ಉತ್ತರ ಪತ್ರಿಕೆಗಳು, ಬೇಗ ಬೇಗ ತಿದ್ದುವ ಗಡಿಬಿಡಿಯಲ್ಲಿರುವ ಪರೀಕ್ಷಕರ ಕೈಸೇರು



ತ್ರವಂದಣಿಸಿ. ಅವುಗಳಿಗೆಲ್ಲ ಒಂದೇ ರೀತಿಯಲ್ಲಿ ಅಂಕಗಳು ದೊರೆಯುತ್ತವೆಯೇ ಎಂದರೆ 'ಇಲ್ಲ' ಎಂಬುದೇ ಉತ್ತರ. ಕಾರಣ ಅವೆಲ್ಲವೂ ಒಂದೇ ರೀತಿಯಾಗಿ ಪರೀಕ್ಷಕರನ್ನು ಮುಟ್ಟಿ ತಟ್ಟುವುದಿಲ್ಲ.

ಕೆಲವು ಉತ್ತರ ಪತ್ರಿಕೆಗಳನ್ನು ಕೈಗೆತ್ತಿಕೊಳ್ಳು ತ್ತಲೇ-

೧) ಚಿತ್ರವಿಚಿತ್ರ ಚಿತ್ತುಗಳೂ, ಹೊಡೆದು ಹಾಕಿದ, ಮಧ್ಯೆ ಮಧ್ಯೆ ಸೇರಿಸಿ ಎಲ್ಲೆಲ್ಲೋ ಬರೆದ ಉತ್ತರಗಳೂ- ಅಂತೂ ತುಂಬ ಗಲೀಜಾಗಿರುವ ಪುಟವೇ ಮೊದಲು ಪ್ರತ್ಯಕ್ಷವಾಗುತ್ತದೆ.

೨) ಕೆಲವದರಲ್ಲಿ ಪ್ರಶ್ನೆ ಸಂಖ್ಯೆಗಳನ್ನೇ ಬರೆದಿರುವುದಿಲ್ಲ.

೩) ಕೆಲವು ಉತ್ತರ ಪತ್ರಿಕೆಗಳನ್ನು ಯಾವುದೋ ಬಣ್ಣದ ಶಾಯಿಯಲ್ಲಿ ಬರೆದಿರುವುದರಿಂದ ಬರೆಹಗಳು ಎದ್ದು ಕಾಣದೆ ಸರಿಯಾಗಿ ಓದಲಾಗುವುದಿಲ್ಲ.

೪) ಕೆಲವರ ಅಕ್ಷರಗಳು ತೆಳ್ಳಗಾಗಿ, ಚಿಕ್ಕದಾಗಿದ್ದು ಆ ಉತ್ತರಗಳನ್ನೋದಲು ಭೂತಗನ್ನಡಿ ಹಿಡಿಯಬೇಕಾದ ಪರಿಸ್ಥಿತಿ ಉಂಟಾಗಿರುತ್ತದೆ; ಇನ್ನು ಕೆಲವರ ಮೋಡಿ ಬರಹ ಓದಲು ಕಷ್ಟವಾದ ಬ್ರಹ್ಮಲಿಪಿಯಂತಿರುತ್ತದೆ.

೫) ಇನ್ನು ಕೆಲವರ ಉತ್ತರ ಪತ್ರಿಕೆಯಲ್ಲಿ ಚಿತ್ರ ಎಲ್ಲೋ, ವಿವರಣೆ ಎಲ್ಲೋ ಇರುತ್ತದೆ. ಲೆಕ್ಕ ಮಾಡಿದ ಸ್ಪಷ್ಟ ರೀತಿ ಅಲ್ಲಲ್ಲೇ ಇರುವುದಿಲ್ಲ. ವಿಚಾರಗಳನ್ನು ಒಂದಾದ ನಂತರ ಒಂದರಂತೆ ಇರಿಸದೆ ಪ್ರಬಂಧದ ಹಾಗೆ ಉದ್ದುದ್ದ ವಾಕ್ಯಗಳಲ್ಲಿ ಬರೆದವರೂ ಇರುತ್ತಾರೆ. ಇಡೀ ಪುಟದಲ್ಲಿ ಒಂದೇ ಪ್ಯಾರಾಮಾಡಿ ಉತ್ತರ ಬರೆಯುವವರೂ ಇರುತ್ತಾರೆ.... ಈ ಎಲ್ಲ ಲೋಪದೋಷಗಳಿಂದಾಗಿ ಅವರೆಲ್ಲರಿಗೂ, ಅವರೆಲ್ಲರೂ ಸರಿ ಉತ್ತರ ಬರೆದರೂ, ಒಂದೇ ರೀತಿಯಲ್ಲಿ ಅಂಕಗಳು ಸಿಗುವುದಿಲ್ಲ. ಪರಿಣಾಮವಾಗಿ 'ಸರಿಯಾಗಿ ಬರೆದರೂ ಮಾರ್ಕು ಸಿಗಲಿಲ್ಲ' ಎಂದು ಕೊನೆಗೆ ವ್ಯಥೆ ಪಡುವಂತಾಗುತ್ತದೆ. ಹೀಗಾಗಲು ಕಾರಣ ನೀವು **'ಏನನ್ನು ಬರೆಯುವಿರಿ ?'** ಎಂಬುದರಷ್ಟೇ **'ಹೇಗೆ ಬರೆಯುವಿರಿ ?'** ಎಂಬುದೂ ಮುಖ್ಯ ಎಂಬುದನ್ನು ಗಮನಿಸದಿರುವುದೇ ಆಗಿದೆ. ಆದ್ದರಿಂದ ಸರಿಯಾದ ಉತ್ತರಗಳನ್ನು ಸರಿಯಾಗಿ ಬರೆದರೆ ಮಾತ್ರ ಸರಿಯಾಗಿ ಅಂಕಗಳು ಸಿಗುತ್ತವೆ-- ಹೀಗೆ ಚೆನ್ನಾಗಿ ಬರೆದಾಗ ಕೆಲವೊಮ್ಮೆ ಚಿಕ್ಕ ಚಿಕ್ಕ ತಪ್ಪುಗಳನ್ನು ನಿರ್ಲಕ್ಷಿಸಿಯೂ ಪರೀಕ್ಷಕರು ನಿಮಗೆ ಅಂಕಗಳನ್ನು ಕರುಣಿಸುವುದಿದೆ. ಆ ರೀತಿ ಪರೀಕ್ಷಕರ ಮನ ಮೆಚ್ಚಿಸಿ ಕೃಪಾಂಕವನ್ನು ಗಿಟ್ಟಿಸಿಕೊಳ್ಳಲು ನೀವು ಈ ವಿಚಾರಗಳನ್ನು ತಪ್ಪದೇ ಗಮನಿಸಬೇಕು:

* ಪ್ರಶ್ನೆ ಸಂಖ್ಯೆಗಳನ್ನು ತಪ್ಪದೆ ಬರೆಯಿರಿ. ಒಂದು ಪ್ರಶ್ನೆ ಆದ ಮೇಲೆ ಕೆಲವು ಗೆರೆ ಬಿಟ್ಟು ಮುಂದಿನ ಪ್ರಶ್ನೆಗೆ ಉತ್ತರಿಸಿ. ಒಂದು ಪ್ರಶ್ನೆಯ ಉತ್ತರವೆಲ್ಲ ಒಂದೇ ಕಡೆ ಇರುವಂತೆ ನೋಡಿಕೊಳ್ಳಿ.

* ಪರೀಕ್ಷಕರ ಮೇಲೆ ಸತ್ಪರಿಣಾಮ ಬೀರಲು ಉತ್ತರ ಪತ್ರಿಕೆಯ ಮೊದಲ ಪುಟದಲ್ಲಿ-ಮುಂದೆಯೂ ಕೂಡ, ಚಿತ್ತುಗಳಿಲ್ಲದಂತೆ ಎಚ್ಚರವಹಿಸಿ. ಅಂದರೆ (think before you ink) ಉತ್ತರ ಬರೆಯುವ ಮೊದಲು ಚೆನ್ನಾಗಿ ಯೋಚಿಸಿ- ಯೋಜಿಸಿಕೊಳ್ಳಿ. ಸರಿಯಾಗಿ ಉತ್ತರ ತಿಳಿದಿರುವ ಪ್ರಶ್ನೆಯನ್ನೇ ಮೊದಲು ಉತ್ತರಿಸಿ. ಉತ್ತರಕ್ಕೆ ಸೇರಿಸುವ ಅಂಶವೇನಾದರೂ ಇದ್ದರೆ ಅಲ್ಲೇ ಜಾಗಬಿಟ್ಟು ಮುಂದುವರಿಯಿರಿ, ಕೊನೆಗದನ್ನು ಅಲ್ಲೇ ಸೇರಿಸಿ. ಚಿತ್ರಗಳಿರುವಲ್ಲೇ ವಿವರಣೆಯನ್ನೂ, ಲೆಕ್ಕ ಮಾಡಿದಲ್ಲೇ ರೀತಿಯನ್ನೂ ಮಾಡಿ.

* ಕಣ್ಣಿಗೆ ಎದ್ದು ತೋರುವ ನೀಲಿ ಬಣ್ಣದ

ಅಥವಾ ಕಪ್ಪು ಬಣ್ಣದ ಶಾಯಿಯನ್ನೇ ಉಪಯೋಗಿಸಿ.

* ದಪ್ಪವಾಗಿ ಬರೆಯುವ ಪೆನ್ನನ್ನು ಬಳಸಿ, ಬರೆದು ಬರೆದು ರೂಢಿಯಾಗಿರದ, ಪರೀಕ್ಷೆಗಾಗಿಯೇ ತೆಗೆದುಕೊಂಡ ಪೆನ್ನಿನಿಂದ ಇದು ಸಾಧ್ಯವಾಗದು. ಹಾಗಾಗಿ ರೂಢಿಯಾದ ಪೆನ್ನನ್ನೇ ಉಪಯೋಗಿಸಿ.

* ಅಕ್ಷರಗಳು ಮುದ್ದಾಗಿ ಸ್ಫುಟವಾಗಿರಲಿ, ಚಿತ್ರ ಚೆನ್ನಾಗಿರಲಿ, ತಖ್ತೆ ಸ್ಪಷ್ಟವಾಗಿರಲಿ.

* ಒಂದರ ಕೆಳಗಿನ್ನೊಂದರಂತೆ ಅಚ್ಚುಕಟ್ಟಾಗಿ ಬರೆಯಿರಿ. ಶೀರ್ಷಿಕೆಗಳು ಎದ್ದು ಕಾಣುವಂತೆ ಇರಲಿ. ಅವುಗಳಡಿ ಬೇಕಾದರೆ ಗೆರೆಹಾಕಿ.

* ಉದ್ದುದ್ದ ವಾಕ್ಯಗಳ ಗೀಳನ್ನು ಬಿಡಿ. ತಪ್ಪಿಲ್ಲದ ಚಿಕ್ಕ-ಚಿಕ್ಕ ವಾಕ್ಯಗಳಲ್ಲಿ ವಿಚಾರಗಳನ್ನು ಚಿಕ್ಕ ಚಿಕ್ಕ ಪ್ಯಾರಾಗಳಲ್ಲಿ ನಮೂದಿಸುತ್ತ ಮಂಡಿಸಿ. ಯಾವ ವಿಚಾರಗಳನ್ನೆಲ್ಲ ಬರೆಯಬೇಕು, ಹೇಗೆ ಬರೆಯಬೇಕು, ಎಂದು ಯೋಚಿಸಿ ಪ್ರಬಂಧ ಬರೆಯತೊಡಗಿದರೆ ಮಾತ್ರ ಇದು ಸಾಧ್ಯ.

ವರ್ಷದ ಮೊದಲಿನಿಂದಲೇ ಉತ್ತರಿಸುವಾಗ ನೀವು ಈ ಅಂಶಗಳನ್ನು ಗಮನಿಸುತ್ತ ಬಂದಲ್ಲಿ, ಖಂಡಿತವಾಗಿಯೂ ನೀವು ಪರೀಕ್ಷಕರೊಲುಮೆ ಗಳಿಸಿ ಹೆಚ್ಚು ಅಂಕಗಳನ್ನು ಪಡೆದೇ ಪಡೆಯುವಿರಿ.

## ಭೀತಿ ಯಾಕೆ?

ಇಡೀ ವರ್ಷ ಕಲಿತ ವಿಚಾರಗಳಲ್ಲೇ ಪ್ರಶ್ನೆಗಳು ಬರುವುದಾದರೂ ಪರೀಕ್ಷೆ ಎಂದೊಡನೆಯೇ ಅದೇನೋ ಭೀತಿ, ಪ್ರಶ್ನೆಪತ್ರಿಕೆ ನೋಡಿದೊಡನೆಯೇ ಅದೇನೋ ಗೊಂದಲ ಗಲಿಬಿಲಿ ಉಂಟಾಗಿ ಕಲಿತದ್ದೂ ಮರೆಯುವಂತಾಗುವುದಲ್ಲ, ಯಾಕೆ? ಅದರ ನಿವಾರಣೆ ಎಂತು?

ಪ್ರೀತಿಯ ಅಭಾವದಿಂದ ಭೀತಿ ತಲೆದೋರುತ್ತದೆ. ವರ್ಷದ ಮೊದಲಿನಿಂದಲೇ ಗುರಿಯನ್ನು ನಿರ್ಧರಿಸಿಕೊಂಡು, ಪಾಠಗಳ ಮೇಲೆ ಪ್ರೀತಿ ಬೆಳೆಸಿಕೊಂಡು ದಿನದಿನವೂ ಆ ಬಗ್ಗೆ ಪ್ರಯತ್ನಿಸುತ್ತಿದ್ದವರಿಗೆ, ಪರೀಕ್ಷೆ ಎಂದರೆ ಎಣಿಸಿದ ಯಶಸ್ಸಿನ ಮಹಡಿಗೆ ಏರಿಸುವ ಏಣಿ ಎಂದೇ ತೋರೀತು. ಹಾಗಾಗಿ ಅದನ್ನು ಸರಿಯಾಗಿ ದಾಟಿ ಯಶಸ್ಸನ್ನು ತಲುಪುವ ಕಾತರ ಅವರಲ್ಲಿದ್ದೀತೇ ಹೊರತು ಭೀತಿಯ ಅಥವಾ ಗೊಂದಲ ಲವಲೇಶವೂ ಇರದು.

ಸಾಮಾನ್ಯವಾಗಿ ಪರೀಕ್ಷೆಯ ಈ ಭೀತಿ-ಗೊಂದಲಗಳಿಗೆ ಕಾರಣಗಳು ಇವು-

೧) ಭವಿಷ್ಯದ ಬಗ್ಗೆ ಚಿಂತಿಸದೆ ಗುರಿಯನ್ನೂ, ಅದನ್ನು ಸೇರುವ ದಾರಿಯನ್ನೂ ಸ್ಪಷ್ಟವಾಗಿ ನಿರ್ಧರಿಸದೆ ಇರುವುದು; ವರ್ಷದ ಮೊದಲಿನಿಂದಲೂ ಪ್ರಯತ್ನಿಸದೆ ಇರುವುದು.

೨) ಆಸಕ್ತಿ ಬೆಳೆಸಿಕೊಳ್ಳದೆ, ಅರ್ಥ ಮಾಡಿಕೊಳ್ಳದೆ, ತಲೆದೋರಿದ ಸಂಶಯ-ಸಮಸ್ಯೆಗಳನ್ನು ಬಗೆಹರಿಸಿಕೊಳ್ಳದೆ ಸುಮ್ಮನೆ ಉರುಹಾಕುತ್ತಾ ಕಲಿಯುವುದು.

೩) ಪರೀಕ್ಷೆ ತೀರ ಸನ್ನಿಹಿತವಾದಾಗ ಓದಲು ಪ್ರಾರಂಭಿಸುವುದು. ನಿದ್ದೆಗೆಟ್ಟು, ಗುಳಿಗೆ ಸೇವಿಸಿ, ಚಾ-ಕಾಫಿ ಸೇವಿಸಿ ಎಡೆ ಬಿಡದೆ ಓದುವುದು- ಅಲ್ಲ, ಓದುವ ಶಾಸ್ತ್ರ ಮಾಡುವುದು.

೪) ಏನನ್ನು ಓದಬೇಕೆಂದೇ ತಿಳಿಯದೇ ಆ ಗೈಡನ್ನು ಓದುವುದು, ಈ ಪುಸ್ತಕ ಓದುವುದು, ಆ ನೋಟ್ಸ್‌ಗಾಗಿ ತಡಕಾಡುವುದು. ಹೀಗೆ ಕೊನೆಯ ಕ್ಷಣದವರೆಗೂ ವಿಚಾರಗಳನ್ನು ಅರಗಿಸಲು ಸಮಯಾವಕಾಶ ಬೇಕೆಂಬುದನ್ನು ಅರಿಯದೆ ವಿಚಾರಗಳನ್ನು ಮನದ ಮೇಲೆ ಹೇರುತ್ತ ಹೋಗುವುದು.

೫) ಸಂಭಾವ್ಯ ಪ್ರಶ್ನೆಗಳು ಎಂತೋ, ಪರೀಕ್ಷೆಗೆ ಮುನ್ನವೇ ಹೊರಬಿದ್ದ ಪ್ರಶ್ನೆಗಳು ಎಂತೋ ಕೆಲವು ಪಾಠಗಳನ್ನು ಮಾತ್ರ ಆರಿಸಿ ಓದುವುದು, ಕಲಿಯುವುದು; ಉಳಿದವನ್ನೆಲ್ಲ ಬಿಟ್ಟೇಬಿಡುವುದು.

೬) ತಡವಾಗಿ ಮನೆಯಿಂದ ಹೊರಟು ಗಡಿಬಿಡಿಯಿಂದ ಪರೀಕ್ಷಾಭವನಕ್ಕೆ ಓಡೋಡಿ ಬರುವುದು. ಏನಾಗುವುದೋ ಏನೋ ಎಂದು ಅಲ್ಲಿದ್ದಾಗ ಎಣಿಸಿ ಹೆದರುವುದು.

ಈ ಅವ್ಯವಸ್ಥೆ, ಅಸ್ತವ್ಯಸ್ತತೆಗಳಿಂದ ಮುಕ್ತಿ ಸಿಗಲು-

* ಪರೀಕ್ಷೆಯಲ್ಲಿ ಹೇಗೋ ಬರೆದು ಹಾಕುವುದು, ಏನೋ ಆಗುತ್ತದೆಂಬ ನಿರ್ಲಕ್ಷ್ಯಭಾವದ ವಿದ್ಯಾರ್ಥಿಗಳಾಗಬೇಡಿ. ವರ್ಷದ ಆದಿಯಲ್ಲೇ ನಿಮ್ಮ ಭವಿಷ್ಯದ ರೂವಾರಿಗಳು ನೀವೇ ಎಂಬುದನ್ನು ಅರ್ಥಮಾಡಿಕೊಂಡು, ನಿಮ್ಮ ಗುರಿಯನ್ನು

ನಿರ್ಧರಿಸಿಕೊಳ್ಳಿ. ವರ್ಷದುದ್ದಕ್ಕೂ ಅದನ್ನು ಸಾಧಿಸಲು ಪ್ರಯತ್ನಿಸಿ. ಪಾಠದ ಮೇಲೂ, ಪರೀಕ್ಷೆಯ ಮೇಲೂ ಪ್ರೀತಿ ಬೆಳೆಸಿಕೊಳ್ಳಿ.

* ಅರ್ಥಮಾಡಿಕೊಳ್ಳದೆ ಸುಮ್ಮನೆ ಗಿಳಿಪಾಠ ಮಾಡುವ ಹುಚ್ಚು ಗೀಳಿಗೆ ಬಲಿಬೀಳಬೇಡಿ. ನಾಚಿಕೆ ಅಂಜಿಕೆ ತೊರೆದು ನಿಮ್ಮ ಅಧ್ಯಾಪಕರನ್ನು ಕಾಡಿಸಿ, ಪೀಡಿಸಿಯಾದರೂ ವಿಚಾರಗಳನ್ನು ಆಗಾಗಲೇ ಅರ್ಥಮಾಡಿಕೊಳ್ಳಿ. ಏನೇ ಸಂಶಯ ಬಂದರೂ ಅದನ್ನು ಬಗೆಹರಿಸಿಕೊಳ್ಳಿ. ಇಲ್ಲವಾದರೆ ಮನದ ಮೂಲೆಯಲ್ಲಿ ಅವಿತಿದ್ದ ಆ ಸಂಶಯರಾಕ್ಷಸನೇ ಪರೀಕ್ಷೆಯ ದಿನ ತಲೆ ಎತ್ತಿ ನಿಮ್ಮನ್ನು ನಡುಗಿಸುತ್ತಾನೆ. 'ಸಂಶಯಾತ್ಮಾ ವಿನಶ್ಯತಿ' ಎಂಬುದು ನೆನಪಿರಲಿ.

* ಉದ್ದನ್ನು ತಂದೊಡನೆಯೇ ಬೇಳೆ ಮಾಡಿ ಹಿಟ್ಟು ಮಾಡಿ ಇಡ್ಲಿ ತಯಾರಿಸಿ ತಿಂದು ದಪ್ಪಪುಷ್ಪನಾಗುವೆ ಎಂದರೆ ಎಂದಾದರೂ ಸಾಧ್ಯವೇ ? ಹಾಗೆಯೇ ಈ ಕೂಡಲೇ ಎಡಬಿಡದೆ ಓದಿ ಪರೀಕ್ಷೆಯಲ್ಲಿ ಬರೆದು ಫಸ್ಟ್‌ಕ್ಲಾಸ್ ಬರುವೆ ಎಂಬುದೂ ಬರೀ ಹುಚ್ಚು ಭ್ರಮೆ. ಆರೋಗ್ಯ ಚೆನ್ನಾಗಿರುವಾಗ ಮನಸ್ಸು ಶಾಂತವಾಗಿರುವಾಗ ಮಾತ್ರ ವಿಚಾರಗಳನ್ನು ಗ್ರಹಿಸಬಲ್ಲದು. ಇಲ್ಲವಾದರೆ ತುಂಬಿದ ಪಾತ್ರೆಯ ಮೇಲೆ ಸುರಿದಂತೆ ಓದಿದ್ದೆಲ್ಲಾ ವ್ಯರ್ಥ. ಹಾಗಾಗಿ ನಿದ್ರೆಗೆಟ್ಟು, ಕಾಫಿ, ಟೀ, ಗುಳಿಗೆ ಸೇವಿಸಿ ಓದುವ ಹವ್ಯಾಸ ಬಿಡಿ. ಕಡಿಮೆ ಓದಿದರೂ, ಪೂರ್ಣ ಮನಸ್ಸಿನಿಂದ ಓದಿ. ಓದಿದ್ದನ್ನು ಅರಗಿಸಿಕೊಳ್ಳಲು ಪುರಸೊತ್ತು ಕೊಡಿ. ಹೆಚ್ಚು ವಿಚಾರ ಓದಲಿದೆ ಎಂದು ಮುಂದಾಗಿ ಮನಗಂಡು ಬೇಗ ಓದಲು ಪ್ರಾರಂಭಿಸಿ.

* ರಿವಿಷನ್ ವೇಳೆಯಲ್ಲಿ ಹೊಸ ವಿಚಾರಗಳನ್ನು ಕಲಿತು ಮನಸ್ಸಿಗೆ ತುರುಕಲು ಹೋಗಬೇಡಿ. ಅಲ್ಲಸಲ್ಲದ ಗೈಡ್‌ಗಳನ್ನು ಓದುತ್ತ ಸಮಯ ಹಾಳು ಮಾಡಬೇಡಿ. ನೀವು ಮಾಡಿದ ನೋಟ್ಸನ್ನೇ ತಿರುತಿರುಗಿ ಓದಿ ಅರ್ಥಮಾಡಿಕೊಳ್ಳಿ.

* ಸಂಭಾವ್ಯ ಪ್ರಶ್ನೆಗಳು (likely questions) ಎಂದೋ ಮೊದಲೇ ಹೊರಬಿದ್ದ ಪ್ರಶ್ನೆಗಳು ಎಂದೋ ಅವುಗಳನ್ನೇ ನಂಬಿ ಕೆಡಬೇಡಿ. ಎಲ್ಲ ಪಾಠಗಳನ್ನು ಓದಿ ಯಾವ ಪ್ರಶ್ನೆಗಳು ಬಂದರೂ ಉತ್ತರಿಸುವ ಬಗೆ ಅರಿತು ಸನ್ನದ್ಧರಾಗಿ.

* ಪರೀಕ್ಷೆಯ ಮುಂಚಿನ ದಿನ, ಪರೀಕ್ಷೆಯ ದಿನ ನಿದ್ದೆ ಬಿಡಬೇಡಿ, ಆಯಾಸದ ಕೆಲಸದಲ್ಲಿ ತೊಡಗಬೇಡಿ. ಬೇಗನೆ ಮನೆಯಿಂದ ಎಲ್ಲಾ ಸಾಮಗ್ರಿಗಳೊಂದಿಗೆ ಧೈರ್ಯವಾಗಿ ಹೊರಡಿ. 'ನಾನು ಖಂಡಿತ ಸಾಧಿಸಬಲ್ಲೆ' ಎಂಬ ಆತ್ಮ ವಿಶ್ವಾಸದಿಂದ ಹೆಜ್ಜೆ ಹಾಕಿ. ಆತ್ಮಶಕ್ತಿ ಮಂತ್ರ 'ನಾನು ದಿನೇ ದಿನೇ ಎಲ್ಲ ವಿಧಗಳಲ್ಲೂ ಉತ್ತಮಗೊಳ್ಳುತ್ತಿದ್ದೇನೆ'-ಇದನ್ನು ದಿನವೂ ಉಚ್ಚರಿಸುತ್ತ ಭೀತಿ-ಗೊಂದಲಗಳನ್ನು ಹೊಡೆದೋಡಿಸುವ ಕೆಚ್ಚಿನ ಶೌರ್ಯವನ್ನು ನಿಮ್ಮಲ್ಲಿ ಆವಾಹಿಸಿಕೊಳ್ಳಲು ಹಿಂದಾಗದಿರಿ.

ಪ್ರಿಯ ವಿದ್ಯಾರ್ಥಿಗಳೇ, ಯಶಸ್ಸಿನ ಶಿಖರಕ್ಕೆ ಸೋಪಾನಗಳೇ ಈ ವರೆಗೆ ಹೇಳಿದ ಎಲ್ಲ ವಿಧಿ-ವಿಧಾನಗಳು. ಅವುಗಳನ್ನು ನೀವೆಷ್ಟು ಮೈಗೂಡಿಸಿಕೊಂಡಿದ್ದೀರೆಂಬುದೇ ಯಶಸ್ಸಿನೆಡೆಗೆ ನಿಮ್ಮ ನಡಿಗೆಗೊಂದು ಅಳತೆಗೋಲು. ●

## ಯಶಸ್ಸಿನ ಸೋಪಾನ



ಆರೋಗ್ಯಮಂಗಳ





# 'ಪವಿತ್ರ ಸ್ನಾನ'ದ ಪರಮ ಸಂಕಟಗಳು....

● ಡಾ. ಬಿ.ಬಿ. ಪಾಟೀಲ
ನಂ.೧೫, ೧ನೆ ಮಹಡಿ,
ಯುರೇಕಾ ಟಾವರ್ಸ್,
ಟ್ರಾಫಿಕ್ ಐಲ್ಯಾಂಡ್,
ಹುಬ್ಬಳ್ಳಿ-೫೮೦೦೨೯.

## ಆರೋಗ್ಯದಂಗಳ

# 'ಪವಿತ್ರ ಸ್ನಾನ'ದ ಪರಮ ಸಂಕಟಗಳು....

ನಮ್ಮದು 'ಪುಣ್ಯಕ್ಷೇತ್ರ'ಗಳಿಂದ ತುಂಬಿತುಳುಕುವ ದೇಶ.

ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ, ದ್ವಾರಕೆಯಿಂದ ಜಗನ್ನಾಥಪುರಿವರೆಗೆ ಒಂದೊಂದು ಕ್ಷೇತ್ರದಲ್ಲೂ ಒಬ್ಬೊಬ್ಬ ದೇವರು.

ಈ ಒಂದೊಂದು ಸ್ಥಳದಲ್ಲೂ ಆಯಾ ದೇವರಿಗೆಂದೇ ಮೀಸಲಾದ ದೇವರ ಬಾವಿಗಳು, ಪುಷ್ಕರಿಣಿ'ಗಳು.

ಹೊಂಡ-ಕೆರೆಗಳಿಗೂ ಕಮ್ಮಿಯಿಲ್ಲ.

ಇನ್ನು ಕೆಲವೆಡೆ ಹರಿಯುವ ಹೊಳೆಗಳು, ಮುದಗೊಳಿಸುವ ನದಿ-ನದಗಳು. ಸುಂದರವಾದ ಕೊಳಗಳು.

ದೇವನ ದರ್ಶನದಿಂದ ಪಾವನಗೊಳ್ಳುವ ಬಯಕೆ ನಮಗೆ. ಪವಿತ್ರ ಸ್ನಾನದಿಂದ ಪಾಪಮುಕ್ತರಾಗುವ ಹೆಬ್ಬಯಕೆಯೂ ನಮ್ಮದು.

ಅಂತೆಯೇ ಪರ್ವಕಾಲಗಳಲ್ಲಿ 'ಪವಿತ್ರ ಸ್ನಾನ'ಕ್ಕೆಂದು ಪುಣ್ಯಕ್ಷೇತ್ರಗಳನ್ನು ಹುಡುಕಿಕೊಂಡು ಹೋಗುವವರು ಅಸಂಖ್ಯ.

(ಕುಂಭ ಮೇಳಗಳಂಥ ಸಂದರ್ಭಗಳಲ್ಲಿನ ಉತ್ಸಾಹಭರಿತ ಜನಸಂದಣಿ'ಯ ವರದಿಗಳನ್ನು ನೀವು ಓದಿಯೇ ಇರುತ್ತೀರಿ.)

"ಗಂಗಾಸ್ನಾನ ತುಂಗಾಪಾನ"ವನ್ನು ಅತ್ಯಂತ ನಿಷ್ಠೆಯಿಂದ ನಡೆಸಿಕೊಂಡು ಬಂದವರ ಸಂಖ್ಯೆಯೂ ಬಹಳ.

ಆದರೆ ಇದೆಲ್ಲ ಇದ್ದುಳ್ಳವರ, ಅನುಕೂಲಸ್ಥರ ಅಳವಿನ ಮಾತು.

ಕಾಶಿಯಷ್ಟು ದೂರ ಹೋಗಿ ಗಂಗಾಸ್ನಾನ ಮಾಡಲು ಆಗದ ಬಹುಸಂಖ್ಯರು ಏನು ಮಾಡಿಯಾರು ?

ಹರಿಹರಕ್ಕೋ-ಹಂಪೆಗೋ ಹೋಗಿ ತುಂಗಾಪಾನಗೈಯಲು ಅಸಾಧ್ಯವೆನಿಸಿದವರೇನು ಮಾಡಬೇಕು ?

ಅನುಕೂಲಸಿಂಧು ಅವರ ನೆರವಿಗೆ ಬರುತ್ತದೆ.

ಆಗ ಅವರಿಗೆ ಊರ ಮುಂದಿನ ಹೊಳೆಯೇ ಗಂಗೆಯಾಗುತ್ತದೆ- ತುಂಗೆಯಾಗುತ್ತದೆ.

ಹೊಳೆಯಿಲ್ಲದಿದ್ದರೆ ಕೊಳವೂ ಆದೀತು, ಕಾಲುವೆಯೂ ನಡೆದೀತು.

ಇದಾವೂ ಸಿಕ್ಕದಿದ್ದರೆ ಊರೊಳಗಿನ ಕೆರೆ-ತೊರೆ, ಕೊನೆಗೆ ಇರಬಹುದಾದ ದೇವರಬಾವಿ ಅವರ ಪಾಲಿನ ಗಂಗಾವಳಿ.

"ಕೆರೆಯಂ ಕಟ್ಟಿಸು... ಬಾವಿಯಂ ತೋಡಿಸು," ಎಂಬುದು ನಮ್ಮ ಹಿಂದಿನ ರಾಜ-ಮಹಾರಾಜ, ಸಾಮಂತ-ಮಾಂಡಲಿಕ, ಪೆರ್ಗಡೆ-ದೇಸಾಯಿಗಳಿಗೆ ಅವರವರ ಗುರುಗಳು ನೀಡುತ್ತಿದ್ದ ಆದೇಶ. ಜನಕಲ್ಯಾಣದ ಈ ಕೆಲಸಕ್ಕೆ ನಮ್ಮ ಹಿಂದಿನ ಆಡಳಿತಗಾರರು ಹಿಂದೆಮುಂದೆ ನೋಡಲಿಲ್ಲ. ಅವರೆಲ್ಲ ನಿರ್ಮಿಸಿದ ಅಂಬುಧಿ, ತೀರ್ಥ, ಕಲ್ಯಾಣ'ಗಳು ಶತಮಾನಗಳ ಹಿಂದಿನಿಂದಲೂ ಉಳಿದುಕೊಂಡು ಬಂದಿವೆ. ಕೆಲವೆಡೆ ಕೆರೆಗಳು ಬಯಲಾಗಿವೆ, ಬಾವಿಗಳು ಬಾಯಿ ಮುಚ್ಚಿಸಿಕೊಂಡು ಕೊಳವೆಗಳ

## ಆರೋಗ್ಯದಂಗಳ

# 'ಪವಿತ್ರ ಸ್ನಾನ'ದ ಪರಮ ಸಂಕಟಗಳು....

ಮೂಲಕ, ತಮ್ಮ ಮೇಲೇರಿದ ಐದಾರು ಅಂತಸ್ತಿನವರಿಗೆ, ನೀರುಣ್ಣಿಸುತ್ತಿವೆ.

ಆದರೆ ಅನೇಕ ಕ್ಷೇತ್ರಗಳಲ್ಲಿ 'ಸ್ನಾನಘಟ್ಟ'ಗಳು ಮಾತ್ರ ಇಂದಿಗೂ ಕಾಣಸಿಗುತ್ತವೆ.

ಇನ್ನು ಕೆಲವೆಡೆಗಳಲ್ಲಂತೂ ಇರುವ ಕೆರೆಯೋ-ಹೊಂಡವೋ ಆಯಾ ಊರಿನವರ ನೀರಡಿಕೆ ಹಿಂಗಿಸುವುದರ ಜತೆಗೆ, ಬಟ್ಟೆ ಒಗೆಯುವ-ದನಕರುಗಳಿಗೆ ನೀರುಣ್ಣಿಸುವ, ಮೈ ತೊಳೆಯುವ ಏಕಮಾತ್ರ ಜಾಗ. ಜಾನುವಾರುಗಳ ಮೈತೊಳೆದು ನಂತರ ಅಲ್ಲಿಯೇ ತಾವೂ ಒಮ್ಮೆ ಈಜು ಹೊಡೆದು ಹೋಗುವ ದೃಶ್ಯ ಗ್ರಾಮಾಂತರ ಪ್ರದೇಶಗಳಲ್ಲಿ ಸರ್ವೇಸಾಮಾನ್ಯ.

"ನೀರಿಗೆ ದೋಷವಿಲ್ಲ", "ಗಂಗೆ ಪವಿತ್ರಳು-ಪರಿಶುದ್ಧಳು," ಎಂಬ ನಂಬಿಕೆ ಬಲವಾಗಿ ಬೇರೂರಿದ ಸಮಾಜ ನಮ್ಮದು. ಹೀಗಾಗಿ ದೇವಪೂಜೆಗೆ ಮೊದಲು ತೆಗೆದ ನಿರ್ಮಾಲ್ಯದಿಂದ ಹಿಡಿದು ಚಿತಾಭಸ್ಮ-ಅಸ್ಥಿಗಳವರೆಗೂ "ಅವರಿವರ ಕಾಲಲ್ಲಿ ತುಳಿಯಲ್ಪಡಬಾರದ್ದನ್ನು" ಒಯ್ದು ಜಲದೇವತೆಗೆ ಅರ್ಪಿಸುತ್ತೇವೆ. ಮೊದಲೇ ಮಲಿತ ನೀರಿಗೆ ಇನ್ನಷ್ಟು ಮಾಲಿನ್ಯವನ್ನು ಸೇರಿಸುತ್ತೇವೆ.

ಕಾಶಿಯನ್ನೇ ತೆಗೆದುಕೊಳ್ಳಿ. ಆ ಜಲರಾಶಿಯಲ್ಲಿ ತೇಲಿಹೋಗುವ ಹೆಣವೂ ಹೇಸಿಕೊಳ್ಳುವಷ್ಟು ಹೊಲಸು ತುಂಬಿದೆಯೆಂಬುದು ನಿಷ್ಠುರ ಸತ್ಯ.

ಕೃತಾರ್ಥಗೊಳ್ಳುವ ಮನಸ್ಸಿಗೆ ಇದೆಲ್ಲದರ ಪರಿವೆಯಲ್ಲಿ?

ನೀರು ಜೀವದಾಯಿನಿ ನಿಜ. ಆದರೆ ನಾವದನ್ನು ರಕ್ಷಿಸಿದರೆ ಅದು ನಮ್ಮನ್ನು ರಕ್ಷಿಸುತ್ತದೆ. ಅದುಬಿಟ್ಟು ಭಾವುಕತೆಗೆ ಒಳಗಾಗಿ ಅಶುದ್ಧತೆಯನ್ನೇ ಪೋಷಿಸಿಕೊಂಡು ಹೋದರೆ? ಈಗ ನಾವು ಮಾಡುತ್ತಿರುವುದು ಇದನ್ನೇ.

ಜಲಮಾಲಿನ್ಯಕ್ಕೆ ತಮ್ಮ ನಿತ್ಯದ ಪಾಲನ್ನು ಒಪ್ಪಿಸುತ್ತಿರುವ ಬೃಹತ್ ಕೈಗಾರಿಕೆಗಳು ಒಂದೆಡೆ. ಅಂಥ ನೀರಲ್ಲಿ ನಂಜಿದೆ ಎಂಬುದನ್ನು ಅರಿತೂ ಮರೆತುಬಿಡುವ ಜನ ಇನ್ನೊಂದೆಡೆ. ಹೀಗಾಗಿ ಜಲಸಂಬಂಧಿ ಜಾಡ್ಯಗಳಿಗೆ ಪಕ್ಕಾಗುತ್ತಿರುವವರ ಪ್ರಮಾಣ ನಿಜಕ್ಕೂ ಗಾಬರಿಪಡಿಸುವಂತ ಬೆಳೆಯುತ್ತಲೇ ಇದೆ.

ಇಂಥ ಅಶುದ್ಧ ನೀರಿನ ಸಾಮೀಪ್ಯ-ಬಳಕೆಯಿಂದ ಉಂಟಾಗುವ ರೋಗಗಳ ಪಟ್ಟಿಯನ್ನು ಕೊಡುತ್ತ ಹೋದರೆ ಒಂದೊಂದು ರೋಗದ ವಿವರವೂ ಈ ಅಂಕಣ ದಷ್ಟಾದೀತು. ಆದ್ದರಿಂದ, ಅದೆಲ್ಲ ವಿವರಕ್ಕೆ ಹೋಗದೆ, ಅಲೋಪಥಿ ವೈದ್ಯಶಾಸ್ತ್ರವೂ ಚಿಕಿತ್ಸಾ ವಿಧಾನವನ್ನು ಕಂಡುಕೊಳ್ಳಲು ಪರದಾಡುತ್ತಿರುವ, ಬಲು ವಿಚಿತ್ರವೂ ಭಯಾನಕವೂ ಹಾಗೂ ಬದುಕನ್ನೇ 'ನರಕಯಾತನೆ'ಗೀಡುಮಾಡುವಂಥದೂ ಆದ ರೋಗವೊಂದರ ಕಡೆ ನಿಮ್ಮ ಗಮನಸೆಳೆಯುವ ಪ್ರಯತ್ನವನ್ನಿಲ್ಲಿ ಮಾಡುತ್ತಿದ್ದೇವೆ.

ದಯವಿಟ್ಟು ಒಂದು ಅಂಶವನ್ನು ನೆನಪಿನಲ್ಲಿಟ್ಟುಕೊಳ್ಳಿ: ಎಲ್ಲ ನೀರೂ ತೀರ್ಥವಲ್ಲ; ಎಲ್ಲ ಕೆರೆ-ಹೊಂಡ-ಪುಷ್ಕರಿಣಿ'ಯೂ ಪವಿತ್ರವಲ್ಲ. ಇಂಥ ನೀರಿಗಿಳಿಯುವ ಮೊದಲು ಒಂದು ಸಲ, ಒಂದೇ ಒಂದು ಸಲ, ಯೋಚಿಸಿ ನೋಡಿ.

ಕಂಡಕಂಡಲ್ಲೆಲ್ಲ 'ಪವಿತ್ರ ಸ್ನಾನ'ಗೈದು ಪರಮಸಂಕಟಕ್ಕೀಡಾಗಬೇಡಿ.

● **ಸಂಪಾದಕ**

## ಆರೋಗ್ಯದಂಗಳ

## 'ಪವಿತ್ರ ಸ್ನಾನ'ದ ಪರಮ ಸಂಕಟಗಳು....



**ನೋ**ಡಿದಿರಾ ಈ ಮುಖವನ್ನು?

ಈತ ವೃತ್ತಿಯಿಂದ ಒಬ್ಬ ಶಿಕ್ಷಕ. ಇತ್ತ ಪಟ್ಟಣವೂ ಅಲ್ಲದ, ಅತ್ತ ನಗರವೂ ಅಲ್ಲದ ಊರೊಂದರಲ್ಲಿರುವಾತ.

## ಆರೋಗ್ಯದಂಗಳ

# 'ಪವಿತ್ರ ಸ್ನಾನ'ದ ಪರಮ ಸಂಕಟಗಳು....

ವಯಸ್ಸು ಕೇವಲ ಮೂವತ್ತು.

ಹದಿನಾರು ವರ್ಷಗಳ ಹಿಂದೆ ಒಮ್ಮೆ ಮಾತ್ರ ತನ್ನ ಊರಿನ ಹೊಂಡದಲ್ಲಿ ಮುಳುಗಿ ಎದ್ದ.

ಪಾಪ, ತಾನು ಮುಳುಗಿ ಎದ್ದದ್ದು ಒಂದು ರೋಗಸಾಗರದಲ್ಲಿ ಎಂಬುದು ಅವನಿಗೆ ಆಗ ಗೊತ್ತಾಗಲೇ ಇಲ್ಲ. ಹದಿನಾಲ್ಕರ ಹುಮ್ಮಸ್ಸಿನ ಹುಡುಗನಿಗೆ ಅದು ಗೊತ್ತಾದೀತಾದರೂ ಹ್ಯಾಗೆ? ಊರ ಜನರ ಸರ್ವೋಪಯೋಗಿಯಾದ ಆ ಹೊಂಡದಲ್ಲಿ ಇತರರ ಹಾಗೆ ಈತನೂ ಇಳಿದ.

ಆರೇಳು ತಿಂಗಳು ಕಳೆದಿರಬೇಕು. ಒಂದು ದಿನ ಆತನ ಮೂಗಿನ ಹೊರಳೆಗಳಲ್ಲಿ ತುರಿಕೆ ಕಾಣಿಸಿಕೊಂಡಿತು. ತುರಿಸಿಕೊಂಡ. ಕಡಿಮೆಯಾದಂತೆನಿಸಿದರೂ ಮತ್ತೆ ಕಾಡತೊಡಗಿತು. ಈತ ಪುನಃ ಕೈ ಆಡಿಸಿಕೊಂಡ. ಮೂಗಿನಿಂದ ಒಂದು ರೀತಿಯ ರಕ್ತ ಮಿಶ್ರಿತ ದ್ರವ ಸುರಿಯಲಾರಂಭಿಸಿತು. ಗಾಬರಿಯಾದ. ಊರ ವೈದ್ಯರು ಏನೋ ಒಂದು ಮದ್ದು ಹೇಳಿದರು. ಅದನ್ನು ಅರೆದು ಹಚ್ಚಿಕೊಂಡ. ಊಹುಂ. ಏನೂ ಗುಣವೆನಿಸಲಿಲ್ಲ. ಡಾಕ್ಟರೊಬ್ಬರನ್ನು ಕಂಡ. ಅವರು ಅದಾವುದೋ ನಂಜು ನಿರೋಧಕ ಮಲಮು ಬರೆದುಕೊಟ್ಟರು. ದುಡ್ಡು ದಂಡವಾಯಿತೆ ಹೊರತು ಮೂಗಿನ ಸಮಸ್ಯೆಗೆ ಪರಿಹಾರ ಸಿಕ್ಕಲಿಲ್ಲ.

> ನೋಡುವವರಿಗೇ ಸಂಕಟವೆನಿಸಬೇಕಾದರೆ
> ಇನ್ನು ಅನುಭವಿಸುವವನಿಗೆ ಎಷ್ಟಾಗಬೇಡ!

ವಾರ ಕಳೆಯುವ ಹೊತ್ತಿಗೆ ಮೂಗಿನ ಹೊರಳೆಗಳೆರಡೂ ಬಂದಾದಂತೆ ಭಾಸವಾಗತೊಡಗಿತು. ಕನ್ನಡಿ ನೋಡಿಕೊಂಡ. ಅಲ್ಲಿ ಕಡಲೆಕಾಯಿ ಗಾತ್ರದ ಗುಳ್ಳೆಯಂಥದು ಕಂಡಿತು. ಮುಟ್ಟಿ ನೋಡಿದ. ನೋವೆನಿಸಿತು. ಜತೆಗೆ ವಾಕರಿಕೆ ಬರುವಂಥ ದುರ್ವಾಸನೆ. ಅಪ್ಪ-ಅಮ್ಮನಿಗೆ ತೋರಿಸಿದ. ಅವರು ಮಗನನ್ನು 'ಓಣಿ'ಯ ಹಿರಿಯರ ಬಳಿಗೊಯ್ದರು. ಸಮೀಪದ ಶಹರಕ್ಕೆ ಕರೆದುಕೊಂಡು ಹೋಗುವುದೇ ಒಳ್ಳೆಯದೆಂಬ ಸಲಹೆ ಬಂತು.

ಇಂಥದನ್ನು ಈ ಮೊದಲೆಂದೂ ನೋಡಿ ಗೊತ್ತಿರದ ಶಹರದ ವೈದ್ಯರು ತಲೆತುರಿಸಿಕೊಂಡರು. ವೈದ್ಯಕೀಯ ಪುಸ್ತಕಗಳನ್ನು ಅವಸರದಲ್ಲಿ ತಿರುವಿಹಾಕಿದರು. ಏನೊಂದೂ ತಿಳಿಯಲಿಲ್ಲ. ಹಾಗೆಂದು ಸುಮ್ಮನೇ ಬಿಟ್ಟುಬಿಡಲಿಕ್ಕಾಗುತ್ತದೆಯೆ? ಅದರ ಲಕ್ಷಣಗಳನ್ನೆಲ್ಲ 'ಟಿಪ್ಪಣಿ' ಮಾಡಿಕೊಂಡರು. ತತ್ಕಾಲಕ್ಕೆಂದು ಕೆಲವಷ್ಟು ಮಾತ್ರೆ ಮೂಗಿಗೆ ಹಾಕಿಕೊಳ್ಳುವ ಔಷಧಿ (Nasal-drops) ಯನ್ನು ಸೂಚಿಸಿ ವಾರಬಿಟ್ಟು ಬರಲು ಹೇಳಿದರು.

ಹೀಗೆಯೇ ವಾರಬಿಟ್ಟು ಬರಲು ಹೇಳಿದ ಡಾಕ್ಟರುಗಳೆಷ್ಟೋ. ಅವರೆಲ್ಲರ ಸಲಹೆಯಂತೆ ನುಂಗಿದ ಮಾತ್ರೆಗಳೆಷ್ಟೋ. ಮೂಗಿಗೆ ಹಾಕಿಕೊಂಡ ಔಷಧಿಯ ಹನಿಗಳು

ಆರೋಗ್ಯದಂಗಳ

## 'ಪವಿತ್ರ ಸ್ನಾನ'ದ ಪರಮ ಸಂಕಟಗಳು....

ಅದೆಷ್ಟೋ.

ಋತುಗಳು ಬದಲಾದವೆ ಹೊರತು ಈತನ ತೊಂದರೆ ತೀರಲಿಲ್ಲ. ಹಾಗೆಯೇ ಹುಡುಗ ಮೆಟ್ರಿಕ್ಕು ಮುಗಿಸಿದ. ಶಿಕ್ಷಕ ತರಬೇತಿಯನ್ನೂ ಮುಗಿಸಿದ. ಮಾಸ್ತರನೂ ಆದ. ಬದುಕಿಗೊಂದು ನೆಲೆ ದೊರೆಯಿತಾದರೂ ಬದುಕುವ ಆಶೆಯೇ ನಶಿಸತೊಡಗಿತು. ಮೂಗಿನ ಹೊರಳೆಗಳಿಂದ ಆರಂಭವಾದ ಮುಳ್ಳುಹಣ್ಣಿನಂಥ ಆ ಪೀಡೆ ಈಗಾಗಲೇ ಬಾಯಿ, ಕಣ್ಣು, ಕಿವಿ, ಹಣೆಯಿಂದ ಮೈಯಿಡೀ ಹಬ್ಬಿ ಯಾತನೆ ನೀಡಲಾರಂಭಿಸಿತ್ತು. ಕಣ್ಣುರಿ, ಮೂಗಿನಲ್ಲಿ ಅಸಹ್ಯ ನಾತ, ಹಸಿವೆಯಾಗದಿರುವಿಕೆ, ಹೊಟ್ಟೆಯುರಿ, ಸಂದುಗಳಲ್ಲಿ ಬಾವು, ಜ್ವರ, ಹಿಂಬಡಗಳಲ್ಲಿ ವಿಪರೀತ ನೋವು, ಅಸಾಧ್ಯ ತಲೆಶೂಲೆ... ಶುರುವಾಗಿ ಹೋಗಿತ್ತು ಪೀಡಾಪರಂಪರೆ.

ದೇಹದ ಯಾವುದೇ ಒಂದು ಭಾಗದಲ್ಲಿ ಸ್ವಲ್ಪ ಶೂಲೆ ಎನಿಸಿದರೂ ಸಂಕಟಪಡುವ ಮನುಷ್ಯನಿಗೆ ಮೈಯಿಡೀ ಅದೇ ತಾಂಡವವಾಡತೊಡಗಿದರೆ ಇನ್ನೇನಾದೀತು ಹೇಳಿ.

ಹೇಗಾದರೂ ಇದರಿಂದ ಮುಕ್ತಿ ಪಡೆಯಬೇಕು. ಆದರೆ ಹೇಗೆ ? ಅಲೋಪಥಿ ಔಷಧಿಗಳಿಂದೇನೂ ಪ್ರಯೋಜನವೆನಿಸದ್ದರಿಂದ ಬೇರೆ ವೈದ್ಯಕೀಯ ವಿಧಾನಗಳತ್ತ ಹೊರಳಿದ. ನಾಟಿ ವೈದ್ಯರಿಂದ ನಾರುಬೇರುಗಳವರೆಗೂ ಪ್ರಯೋಗಿಸಿ ನೋಡಿದ. ಊಹುಂ. ಜಾಡ್ಯ ಜಗ್ಗಲಿಲ್ಲ. ಗಾವಠಿ ಮದ್ದೂ ಗುಣಕಾರಿ ಎನಿಸಲಿಲ್ಲ. ಯುನಾನಿಗೂ ಮೊರೆಹೋದ. ಮುಳ್ಳುಹಣ್ಣಿನಂಥ ಗುಳ್ಳೆಗಳು ಮಣಿಯಲಿಲ್ಲ. ಆಯುರ್ವೇದವೂ ಆಯಿತು. ಅದರಿಂದಲೂ ಪರಿಹಾರ ದೊರೆಯಲಿಲ್ಲ. ಈ ನಡುವೆ ಯಾರೋ "ಇದು ಕುಷ್ಠರೋಗವೋ ಹುಡುಗಾ," ಎಂದರು. ಆಶೆಗಳ ವಯಸ್ಸಿನ-ಹುಮ್ಮಸ್ಸಿನ ಹುಡುಗ ಕುಗ್ಗಿಹೋದ. ಕುಷ್ಠವನ್ನು ಕಡಿಮೆ ಮಾಡುವ ಚಿಕಿತ್ಸೆಯೂ ನಡೆಯಿತು.

ಆದರೆ ಕಣ್ಣಾಮುಚ್ಚಾಲೆಯಾಟವಾಡಿದಂತೆ ಈ ರೋಗ ಚಿಟಗುಮುಳ್ಳಾಡಿಸತೊಡಗಿದರೆ ಚಿಕಿತ್ಸಕರಾದರೂ ಏನು ಮಾಡಿಯಾರು ? ಇಲ್ಲಿದೆ ಎಂದು ಅಲ್ಲಿ ಔಷಧಿ ಮಾಡಿದರೆ "ನಾನಿಲ್ಲಿದ್ದೇನೆ," ಎಂದು ಕೂಗಿ ಹೇಳಿ ಅಣಕಿಸುವಂತೆ ಮತ್ತೊಂದು ಜಾಗದಲ್ಲಿ ಕಾಣಿಸಿಕೊಳ್ಳುವ ಇದಕ್ಕೆ ಹೆಸರಿಡಲೂ ಅಸಮರ್ಥರಾದರು ವೈದ್ಯರು.

ಹದಿನೈದು ವರ್ಷಗಳು ಹೀಗೆಯೇ ಉರುಳಿದವು.

ಹದಿನೈದು ವರ್ಷಗಳು !

ಈ ದೀರ್ಘಾವಧಿಯಲ್ಲಿ ಈ ತರುಣನ ಸ್ಥಿತಿ ಏನಾಗಿರಬೇಡ ನೀವೇ ಊಹಿಸಿಕೊಳ್ಳಿ. ಡಾಕ್ಟರುಗಳೇನೋ ತಮ್ಮಿಂದ ನೀಗದ್ದು ಎಂದು ಮತ್ತೊಂದೆಡೆ ಹೋಗಲು ಹೇಳಿ ಕೈತೊಳೆದುಕೊಂಡರು. ಆದರೆ ಹೋದೆಡೆಯಲ್ಲೆಲ್ಲ "ಈ ಮನೆಯಲ್ಲ, ಆ ಮನೆ" ಎಂದಂತೆ ಕೈ ತೋರಿಸುತ್ತಲೇ ಹೋದರೆ ರೋಗಿ ಏನು ಮಾಡಬೇಕು ?

ಯಾರೋ ಒಬ್ಬರು, "ಹೋಮಿಯೋಪಥಿ ತಜ್ಞರನ್ನು ಎಂದಾದರೂ ಕಂಡಿದ್ದೀಯಾ ? ಅವರಿಗೂ ಒಮ್ಮೆ ತೋರಿಸಿ ಬಾ," ಎಂದರಂತೆ.

ಭರ್ಜರಿ ಪ್ರವಾಹದಲ್ಲಿ ತೇಲಿಹೋಗುವವನಿಗೆ ಹುಲ್ಲುಕಡ್ಡಿಯೂ ಹಡಗಿನಂತೆ, ಆಸರೆಯ ಆಶೆಯಂತೆ ತೋರುತ್ತದೆಂಬುದು ಸುಳ್ಳಲ್ಲ.

## ಆರೋಗ್ಯದಂಗಳ

# 'ಪವಿತ್ರ ಸ್ನಾನ'ದ ಪರಮ ಸಂಕಟಗಳು....

ಹುಡುಗ ನನ್ನ ಬಳಿ ಬಂದ.

ಆತನ ಶರೀರವನ್ನೆಲ್ಲ ಪರೀಕ್ಷಿಸಿದೆ. ಹೌದು, ಪರೀಕ್ಷಿಸಲೇಬೇಕಾದ್ದು ಅನಿವಾರ್ಯವಾಗಿತ್ತು. ನಾನಂದುಕೊಂಡದ್ದೇ ಹೌದೋ ಅಲ್ಲವೋ ಎಂಬ ಶಂಕೆಗೆ ಆಸ್ಪದವೇ ಇರಲಿಲ್ಲವಾದರೂ ಪರೀಕ್ಷಿಸಿ ನೋಡಿ ಆ ಮುಳ್ಳುಹುಣ್ಣು ಯಾವ್ಯಾವ ಭಾಗವನ್ನು ವ್ಯಾಪಿಸಿಕೊಂಡಿದೆ ಎಂಬುದನ್ನು ಅರಿತುಕೊಳ್ಳಲೇಬೇಕಾದ್ದು ವೈದ್ಯನಾಗಿ ನನ್ನ ಮೊದಲ ಕರ್ತವ್ಯ. ಆ ಮೇಲೆ ಆತ ಆವರೆಗೆ ತೆಗೆದುಕೊಂಡ ಔಷಧಿಗಳ ವಿವರ, ಆ ಪೀಡೆ ಪ್ರಾರಂಭವಾದ ರೀತಿ ಎಲ್ಲವನ್ನೂ ಕೇಳಿ ತಿಳಿದುಕೊಂಡೆ.

ನನ್ನ ಈ ಮೂವತ್ತು ವರ್ಷಗಳ ಅನುಭವದಲ್ಲಿ ಈ ಪೀಡೆಗೊಳಗಾಗಿ ನನ್ನ ಬಳಿ ಬಂದವರು ಸುಮಾರು ೬೦ ಜನ. ಆದರೆ ಈತನದು ಉಳಿದೆಲ್ಲರಿಗಿಂತ ಶೋಚನೀಯ ಸ್ಥಿತಿ. ಕಾಲಿನಿಂದ ತಲೆಯವರೆಗೂ- ಗುಪ್ತಾಂಗವೂ ಸೇರಿದಂತೆ- ಎಲ್ಲ ಕಡೆಗೂ ಮುಳ್ಳುಹುಣ್ಣು ದಾಳಿಯಿಟ್ಟಿತ್ತು. ಈ ಹದಿನಾರು ವರ್ಷಗಳಲ್ಲಿ ಆತನ ಶರೀರದ ಬೇರೆ ಬೇರೆ ಭಾಗಗಳಲ್ಲಿ ೧೪ ಬಾರಿ ಶಸ್ತ್ರಕ್ರಿಯೆಗಳೂ ನಡೆದಿವೆ. ಆದರೆ ಈ ಶಸ್ತ್ರಕ್ರಿಯೆಗಳಿಂದ ಆತನಿಗೆ ತೊಂದರೆ ನೂರ್ಮಡಿಯಾಯಿತೇ ವಿನಾ ಕಡಿಮೆಯಾಗಲಿಲ್ಲ.

ಆತನಿಗಿರುವ ತೊಂದರೆಯಾದರೂ ಏನು ?



**ಡಾ. ಬಿ. ಬಿ. ಪಾಟೀಲ**

ಕಳೆದ ಕಾಲು ಶತಮಾನಕ್ಕೂ ಹೆಚ್ಚು ಕಾಲದಿಂದ ಕಿವಿ-ಮೂಗು-ಗಂಟಲು (E.N.T.)ತಜ್ಞರಾಗಿ ಜತೆ ಜತೆಗೆ ಹೋಮಿಯೋಪಥಿ ಹಾಗೂ 'ಸಮಗ್ರ ಚಿಕಿತ್ಸೆ' (Holistic Treatment)ಯನ್ನು ನಡೆಸುತ್ತ ಬಂದಿರುವ ಡಾ. ಬಿ.ಬಿ. ಪಾಟೀಲರು ಮುಂಬಯಿ ವಿಶ್ವವಿದ್ಯಾಲಯದ ಪದವೀಧರ. ಕಿವಿ, ಮೂಗು, ಗಂಟಲಿನ ಸೂಕ್ಷ್ಮ ಶಸ್ತ್ರಕ್ರಿಯೆ ಹಾಗೂ ಹೋಮಿಯೋಪಥಿಯಲ್ಲಿ ಇಂಗ್ಲಂಡಿನಲ್ಲಿ ಉನ್ನತಾಧ್ಯಯನಗೈದವರು. ಇವೆಲ್ಲ ವಿಷಯಗಳಿಗೆ ಸಂಬಂಧಿಸಿದಂತೆ ಅನೇಕ ಶಿಬಿರಗಳನ್ನು ನಡೆಸಿರುವುದಲ್ಲದೆ ರಾಷ್ಟ್ರೀಯ-ಅಂತಾರಾಷ್ಟ್ರೀಯ ವೈದ್ಯಕೀಯ ಪತ್ರಿಕೆಗಳಿಗೆ ಲೇಖನಗಳನ್ನು ಬರೆದಿದ್ದಾರೆ, ರಾಷ್ಟ್ರೀಯ-ಅಂತಾರಾಷ್ಟ್ರೀಯ ಮಟ್ಟದ ವೈದ್ಯಕೀಯ ಸಮಾವೇಶಗಳಲ್ಲಿ ಪ್ರಬಂಧಗಳನ್ನೂ ಮಂಡಿಸಿದ್ದಾರೆ.

# 'ಪವಿತ್ರ ಸ್ನಾನ'ದ ಪರಮ ಸಂಕಟಗಳು....



ವೈದ್ಯಕೀಯ ಪರಿಭಾಷೆಯಲ್ಲಿ 'ರ್‍ಹಿನೋಸ್ಪೊರಿಡಿಯಾಸಿಸ್' (Rhinosporid-iosis) ಎಂದು ಗುರುತಿಸಲ್ಪಡುವ ವ್ಯಾಧಿಯಿದು. ಇದುವರೆಗೂ ಇದಕ್ಕೆ ತಕ್ಕುದಾದ ಚಿಕಿತ್ಸಾ ಕ್ರಮವೇ ಕಂಡುಹಿಡಿಯಲ್ಪಟ್ಟಿಲ್ಲ. ಆದರೆ, ತಾನು ಅಂಟಿಕೊಂಡವನನ್ನು ಆತನ ಕೊನೆಯುಸಿರಿರುವ ತನಕವೂ ಅಂಟಿಕೊಂಡೇ ಇರುವಂಥ ಈ ಹಟಮಾರಿ ಪೀಡೆಯನ್ನು ಗುರುತಿಸುವುದು ಸುಲಭವಾದರೂ ತೊಲಗಿಸುವುದು ಅಸಾಧ್ಯದ ಮಾತಾಗಿಬಿಟ್ಟಿದೆ. ಈ ವ್ಯಾಧಿ ಏಡ್ಸ್ ಮತ್ತು ಕ್ಯಾನ್ಸರ್‌ಗಳಿಗಿಂತ ಹೆಚ್ಚು ಭೀಕರವಾದದ್ದು ಎಂಬುದನ್ನು ಇಲ್ಲಿ ಹೇಳಲೇಬೇಕಾಗಿದೆ. ಏಡ್ಸ್ ಹಾಗೂ ಕ್ಯಾನ್ಸರ್‌ಗಳು ಕೆಲವಷ್ಟು ಕಾಲ ವ್ಯಕ್ತಿಯನ್ನು ಹಿಂಡಿಹಿಪ್ಪೆಮಾಡಿ ಕೊನೆಗೊಮ್ಮೆ ಕೊಂದು ಹಾಕುತ್ತವೆ. ಆದರೆ ಈ ರ್‍ಹಿನೋಸ್ಪೊರಿಡಿಯಾಸಿಸ್ ಹಾಗಲ್ಲ. ಇಲ್ಲಿ ಅಸಹನೀಯ ಯಾತನೆಯಂತೂ ಇದ್ದದ್ದೇ. ಆದರೆ ಮರಣ ಅನಿಶ್ಚಿತ. ಏಡ್ಸ್ ಹಾಗೂ ಕ್ಯಾನ್ಸರ್‌ಗಳು ಹೊರನೋಟಕ್ಕೆ ಕಾಣ'ಸದಂಥವು. ಇವುಗಳಿಂದ ಪೀಡಿತನಾದವ ಇತರರಂತೆ ಅಡ್ಡಾಡಬಹುದು. ದೈನಂದಿನ ಎಲ್ಲ ಕಾರ್ಯಗಳನ್ನೂ ಮಾಡಬಹುದು. ಆದರೆ ರ್‍ಹಿನೋಸ್ಪೊರಿಡಿಯಾಸಿಸ್ ಪೀಡಿತನನ್ನು ಅಕ್ಷರಶಃ ಕುರೂಪಗೊಳಿಸುತ್ತದೆ. ಬದುಕುವ ಇಚ್ಛೆಯನ್ನೇ ಕುಂಠಿತಗೊಳಿಸುತ್ತದೆ. ಯಾವುದರಲ್ಲಿಯೂ ಆತ ಅನಾಸಕ್ತನಾಗುವಂತೆ ಮಾಡುತ್ತದೆ. ಕುಳಿತಲ್ಲಿ ಕುಳ್ಳಿರಲು ಬಿಡುವುದಿಲ್ಲ; ನಿಂತಲ್ಲಿ ನಿಲ್ಲಗೊಡುವುದಿಲ್ಲ; ಮಲಗಿದರೆ ಎದ್ದೋಡುವಂತೆ ಮಾಡಿಬಿಡುತ್ತದೆ. ಆದರೆ ಓಡಾ

# 'ಪವಿತ್ರ ಸ್ನಾನ'ದ ಪರಮ ಸಂಕಟಗಳು....

ಡುವುದೂ ಕಷ್ಟವೇ. ದೇಹದ ಎಲ್ಲ ಭಾಗಗಳಲ್ಲೂ ಆವರಿಸಿಕೊಳ್ಳುವುದರಿಂದ ಆಯಾ ಅಂಗಕ್ಕೆ ನಿಶ್ಚಿತವಾದ ಕ್ರಿಯೆಗಳಿಗೂ ಅಡ್ಡಿಯೊಡ್ಡುತ್ತದೆ. ಉಸಿರಾಡಬೇಕೆಂದರೆ ಮೂಗಿನ ಹೊರಳೆಗಳಿಗೆ ಬಂಡೆಯಂತೆ ಕೂತುಕೊಂಡಿರುತ್ತದೆ; ಜತೆಗೆ ಅಸಹ್ಯ ವಾಸನೆ ಬೇರೆ. ಊಟ ಮಾಡಬೇಕೆಂದರೆ ಬಾಯಿಯನ್ನು ತೆರೆಯಲಾಗದಂತೆ ತುಟಿಗಳ ಇಕ್ಕೆಲಗಳಲ್ಲೂ ಹಬ್ಬಿ ನೋವುಂಟುಮಾಡಿರುತ್ತದೆ. ಜತೆಗೆ ಹೇಸಿಗೆ ದ್ರವಸ್ರಾವ. ಹೀಗೆಯೇ ಕಣ್ಣಿವೆ, ಕಿವಿ ಮತ್ತಿತರ ಭಾಗಗಳಲ್ಲೂ ಆಯಾ ಅಂಗದ ಕಾರ್ಯಕ್ಕೆ ವಿಘ್ನ ತರುತ್ತಲೇ ಇರುತ್ತದೆ. ಜತೆಗೆ ಅಸಾಧ್ಯ ತಲೆನೋವು, ಕಣ್ಣುರಿ, ಸಂದುಗಳಲ್ಲಿ ಬಾವು-ನೋವು.

ಒಟ್ಟನಲ್ಲಿ ಪೀಡಿತನಿಗೂ ವೈದ್ಯರಿಗೂ ಬೇಸರ ತರುವಂಥ ವ್ಯಾಧಿ ಈ ರ್ಹಿನೋಸ್ಪೊರಿಡಿಯಾಸಿಸ್. ಇಲಿಯನ್ನು ಹೊರಹಾಕದೆ ಗುದ್ದು ಮುಚ್ಚಲಾಗುವುದಿಲ್ಲ; ಗುದ್ದು ಮುಚ್ಚಬೇಕೆಂದರೆ ಇಲಿ ಕೈಗೆ ಸಿಗುವುದಿಲ್ಲ ಎನ್ನುವ ಹಾಗಿದೆ ಈ ರೋಗದ ಸಮಸ್ಯೆ. ಒಂದೆಡೆ ಗುದ್ದು ಮುಚ್ಚಿದರೆ ಇನ್ನೊಂದೆಡೆ ಗುದ್ದು ಬಾಯಿ ತೆರೆದುಕೊಳ್ಳುವ ಹಾಗೆ ಒಂದು ಭಾಗದಲ್ಲಿನ ರ್ಹಿನೋಸ್ಪೊರಿಡಿಯಾಸಿಸ್ಸನ್ನು ನಿವಾರಿಸುವ ಹೊತ್ತಿಗೆ ಅದು ವೈದ್ಯನಿಗೂ ವ್ಯಾಧಿಪೀಡಿತನಿಗೂ ಗೊತ್ತಾಗದಂತೆ ಒಳಗೊಳಗೆ ಸರಿದು ಮತ್ತೊಂದು ಭಾಗದಲ್ಲಿ ಗೋಚರಿಸಿ ಗಹಗಹಿಸಲಾರಂಭಿಸುತ್ತದೆ.

> ಮೊಳಕೈಗೆ ಆದ ಮುಳ್ಳುಹುಣ್ಣಿಗೆ ಚಿಕಿತ್ಸೆಯಾಗಿದೆ.
> ಆದರೆ ಆ ಹುಣ್ಣು ಮುಂಗೈಯತ್ತ ಸರಿದಿದೆ!

ಏನಿದು ಈ ರ್ಹಿನೋಸ್ಪೊರಿಡಿಯಾಸಿಸ್ ? ಅದು ಯಾಕೆ ಅಂಟಿಕೊಳ್ಳುತ್ತದೆ ? ಹ್ಯಾಗೆ ಅಂಟಿಕೊಳ್ಳುತ್ತದೆ ? ಯಾರಿಗೆ ಅಂಟಿಕೊಳ್ಳುತ್ತದೆ ?

ಒಂದು ಬಗೆಯ ಬೂರ್ಸು ಅಥವಾ ಬೂಷ್ಟಿನಿಂದ (fungus) ಉಂಟಾಗುವ ರೋಗವಿದು. ಹಿಂಸ್ರ ಪಶು ದನದ ಗಂಟಲನ್ನು ಕಚ್ಚಿ ಹಿಡಿದುಕೊಳ್ಳುವ ಮೂಲಕ ಅದನ್ನು ಪೂರ್ಣ ತನ್ನ ವಶದಲ್ಲಿಟ್ಟುಕೊಳ್ಳುವ ಹಾಗೆ ಈ ಬೂಸ್ಟು ಮೊಟ್ಟಮೊದಲು ನಮ್ಮ ಮೂಗನ್ನೇ ಆಕ್ರಮಿಸುತ್ತದೆ. ರ್ಹಿನೋ (Rhino)ಎಂದರೆ ಮೂಗು; ಸ್ಪೊರಿಡಿಯಾಸಿಸ್ (Sporidiosis) ಎಂದರೆ ಈ ಬೂಷ್ಟು. ಆದ್ದರಿಂದ ಈ ರೋಗ 'ರಿನೋಸ್ಪೊರಿಡಿಯಾಸಿಸ್' ಎಂದೇ ಗುರುತಿಸಲ್ಪಟ್ಟಿತು.

ಈ ರೋಗವನ್ನು ಮೊಟ್ಟ ಮೊದಲಬಾರಿಗೆ ಗುರುತಿಸಿದಾತ ಬ್ಯುನೋಸ್ ಐರಿಸ್‌ನ (ಅರ್ಜೆಂಟೈನಾ) ಡಾ. ಮಾಲ್‌ಬ್ರಾನ್ ಎಂಬಾತ. ೧೮೯೨ರಲ್ಲಿ. ಮುಂದೆ ಎಂಟು ವರ್ಷಗಳ ನಂತರ, ೧೯೦೦ರಲ್ಲಿ ಬ್ಯುನೋಸ್ ಐರಿಸ್ ನಿವಾಸಿ ಡಾ. ಗಿಲೆರ್ಮೊ ಸೀಬರ್ ಎಂಬೊಬ್ಬ ಸ್ಪಾನಿಶ್ ಈ ರೋಗದ ಕುರಿತ ತನ್ನ ಪ್ರೌಢ ಪ್ರಬಂಧವನ್ನು ಪ್ರಕಟಿಸಿದ. ಅದೇ ಸುಮಾರಿಗೆ ಭಾರತೀಯ ಸೇನೆಯಲ್ಲಿ ಸೇವೆ ಸಲ್ಲಿಸುತ್ತಿದ್ದ ಮೇಜರ್ ಓ ಕಿನೇಲಿ ಎಂಬ ಮಹಾಶಯ ರ್ಹಿನೋಸ್ಪೊರಿಡಿಯಾಸಿಸ್ ಮೇಲು ನೋಟಕ್ಕೆ ಮಲ್ಬರಿ ಹಣ್ಣಿನಂತೆ(Strawberry) ಕಾಣುತ್ತದೆ ಎಂದು ಹೇಳಿ ಈ ರೋಗದ ಲಕ್ಷಣಕ್ಕೊಂದು

# 'ಪವಿತ್ರ ಸ್ನಾನ'ದ ಪರಮ ಸಂಕಟಗಳು....

ಹೊಸ ಹಾದಿ ಹುಡುಕಿಕೊಟ್ಟ. ೧೯೨೩ರಲ್ಲಿ ಜೆ.ಎಚ್. ಆ್ಯಶ್‌ವರ್ಥ್ ಎಂಬ ಪ್ರಾಣಿಶಾಸ್ತ್ರಜ್ಞ ಬೂಷ್ಟಿನ ಬದುಕಿನ ಕ್ರಮದ ವಿವರಗಳನ್ನು ನೀಡಿದ. ೧೯೪೯ರಲ್ಲಿ ಡಾ. ರುಕ್ಮನ್ ಎಂಬಾತ ಒಟ್ಟು ಇಂಥ ೫೩ ಪ್ರಕರಣಗಳ ಪೃಥಃಕರಣ ನಡೆಸಿದ. ಈ ಪೈಕಿ ೪೪ ಪ್ರಕರಣಗಳು ಭಾರತ ಹಾಗೂ ಶ್ರೀಲಂಕಾ ದೇಶಕ್ಕೆ ಸಂಬಂಧಪಟ್ಟವುಗಳು. ಉಳಿದವುಗಳು ಆಫ್ರಿಕಾ, ಅಮೆರಿಕಾ ಮತ್ತು ಇಟಲಿ ದೇಶದವು. ನಾಸದ್ವಾರದಲ್ಲಿ ಈ ರೋಗ ಬೇರೂರಿ ಬೆಳೆಯುವುದಾದರೂ, ಭಾರತೀಯರಾದ ಡಾ. ಧಾಯಗುಡೆ ಎಂಬವರು ಶಿಶ್ನ ಮತ್ತು ಯಾವುದೇ ಭಾಗದ ಚರ್ಮದ ಮೇಲೂ ಕಾಣಿಸಿಕೊಳ್ಳುತ್ತದೆಂಬುದನ್ನು ತೋರಿಸಿಕೊಟ್ಟರು. ತದನಂತರದ ಪರೀಕ್ಷೆಗಳು ಪರಿಶೀಲನೆಗಳು ಹಾಗೂ ಅಧ್ಯಯನಗಳಿಂದ ರ್ಹಿನೋಸ್ಪೊರಿಡಿಯಾಸಿಸ್ ಸರ್ವವ್ಯಾಪಿಯಾಗಬಲ್ಲ ರಕ್ಕಸಸ್ವರೂಪಿ ಎಂಬುದು ತಿಳಿದುಬಂತು. ನಾಸಾಕುಹರ (nasopharynx), ಕಣ್ಣಿನ ಕುಳಿ, ಹುಬ್ಬು, ಹಣೆ, ಧ್ವನಿಪೆಟ್ಟಿಗೆ, ಶ್ವಾಸನಾಳ, ಮಂಡಿಕ ಅಥವಾ ಗಲಗ್ರಂಥಿ (tonsils) ಅಂಗುಳು (palate) ಶಿಶ್ನ, ಯೋನಿ, ಗುದನಾಳ ಹಾಗೂ ಶರೀರದ ಯಾವುದೇ ಭಾಗದ ಚರ್ಮದ ಮೇಲೂ ಒಟ್ಟನಲ್ಲಿ ದೇಹದ ಒಳಹೊರಗೆ ಇದು ತಲೆದೋರಬಹುದೆಂಬುದು ಗೊತ್ತಾದ ಮೇಲೆ ವೈದ್ಯಕೀಯಲೋಕ ಅಚ್ಚರಿ ಹಾಗೂ ಆತಂಕಕ್ಕೊಳಗಾಯಿತು. (ಮೊಟ್ಟಮೊದಲ ಬಾರಿಗೆ ಈ ರೋಗದ ಕುರಿತ ವಿವರಣಾತ್ಮಕ ಪ್ರಬಂಧಬರೆದ ಡಾ. ಗಿಲೆರ್ಮೊ ಸೀಬರ್ ಹಾಗೂ ಇದು ಮಲ್ಬರಿ ಹಣ್ಣಿನಂತೆ ತೋರುತ್ತದೆಂದು ಅದರ ಮೇಲ್ತೋರಿಕೆಯ ಲಕ್ಷಣಗಳನ್ನು ಹೇಳಿದ ಮೇಜರ್ ಓ ಕಿನೇಲಿಯರ ಸ್ಮರಣಾರ್ಥ ಈ ವ್ಯಾಧಿ 'ರ್ಹಿನೋಸ್ಪೊರಿಡಿಯಮ್ ಕಿನೇಲಿ' ಎಂದೂ 'ರಿನೋಸ್ಪೊರಿಡಿಯಾಸಿಸ್ ಸಿಬೇರಿ' ಎಂದೂ ಕರೆಯಲ್ಪಡುತ್ತದೆ)

ಮೂಗಿನ ಹೊರಳೆಗಳಲ್ಲಿನ ಮ್ಯೂಕಸ್ ಮೇಲ್ಪೊರೆಯಲ್ಲಿ ಬೂಷ್ಟಿನಿಂದಾಗುವ ಸೋಂಕಿನಿಂದ ಪ್ರಾರಂಭವಾಗುವ ಪೀಡೆಯಿದು. ಈ ಬೂಷ್ಟು ನಮ್ಮ ಮೂಗಿನ ಮ್ಯೂಕಸ್ ಮೇಲ್ಪೊರೆಯನ್ನು ಯಾವಾಗ ಮತ್ತು ಹೇಗೆ ತಲುಪಿ ತಳವೂರುತ್ತದೆಂಬುದು ಇಂದಿಗೂ ಒಂದು ರಹಸ್ಯವೇ. ಮೂಗಿನ ಹೊರಳೆಯ ಮ್ಯೂಕಸ್ ಮೇಲ್ಪೊರೆಯಲ್ಲಿ ತರಚು ಗಾಯವಾಗಿದ್ದ ಸಂದರ್ಭದಲ್ಲಿ ಮಲೆತನೀರಿನ ಸಾಮೀಪ್ಯದಿಂದಾಗಿ ಇದು ಮನುಷ್ಯನನ್ನು ತಬ್ಬಿಕೊಳ್ಳುತ್ತದೆಂದು ಕಂಡುಬಂದಿದೆ. ಅಷ್ಟೇ ಅಲ್ಲ, ಇದರ ಸೋಂಕು ಹೊಂದಿದ ಕುದುರೆಗಳ ಒಣಗಿದ ಲದ್ದಿ ಮತ್ತು ದನಗಳ ಒಣ ಸಗಣಿಯಿಂದಲೂ ಈ ಬೂಷ್ಟು ಮನುಷ್ಯನನ್ನು ಅಂಟಿಕೊಳ್ಳಬಹುದಾಗಿದೆ. ಸಹರಾ ಮರುಭೂಮಿಯ ಪ್ರದೇಶಗಳಲ್ಲಿಯೂ ರ್ಹಿನೋಸ್ಪೊರಿಡಿಯಾಸಿಸ್ ಪ್ರಕರಣಗಳು ಪತ್ತೆಹಚ್ಚಲ್ಪಟ್ಟಿವೆಯಾದ್ದರಿಂದ ಈ ಬೂಷ್ಟು ಗಾಳಿಗುದುರೆಯೇರಿ ಬರುವ ಧೂಳಿನ ಮೂಲಕವೂ ವ್ಯಕ್ತಿಯ ಮೂಗನ್ನು ಅಡರುತ್ತದೆಂಬ ಅಂಶ ಗಮನಕ್ಕೆ ಬಂದಿದೆ.

ಗಂಡಸರೆಂದರೆ ಅದೇಕೋ ಏನೋ ರ್ಹಿನೋಸ್ಪೊರಿಡಿಯಾಸಿಸ್‌ಗೆ ಪ್ರೀತಿ. ಅದರಲ್ಲೂ ಎಳೆವಯದ ಹುಡುಗರು, ಮೀಸೆಮೂಡುತ್ತಿರುವ ತರುಣರೆಂದರೆ ತೀರಿತು. ಇಂಥವರಿಗಾಗಿಯೇ ಕಾದುಕೊಂಡು ಕುಳಿತಿರುತ್ತದೇನೋ ಎನ್ನಬೇಕು. ಹೆಂಗಸರಲ್ಲಿ

ಆರೋಗ್ಯದಂಗಳ

## 'ಪವಿತ್ರ ಸ್ನಾನ'ದ ಪರಮ ಸಂಕಟಗಳು....

ರ್ಹಿನೋಸ್ಪೊರಿಡಿಯಾಸಿಸ್‌ನ ಪ್ರಮಾಣ ಗಮನಾರ್ಹವಾಗಿ ಕಡಿಮೆಯೆ. ೧೦ ರಿಂದ ೩೦ ವಯಸ್ಸಿನೊಳಗಿನ ಯಾವುದೇ ಗಂಡಸನ್ನು ಆಯ್ಕೆ ಮಾಡಿಕೊಳ್ಳುವ ಈ ಪೀಡೆ ಮಧ್ಯವಯಸ್ಸಿನ ಪುರುಷರಲ್ಲೂ, ವೃದ್ಧರಲ್ಲೂ ಕಾಣಿಸಿಕೊಂಡದ್ದಿದೆ.

ಮೂಗಿನ ಹೊರಳೆಗಳ ಮುಂಗಡೆಯಲ್ಲಿ ವ್ಯಕ್ತಿಗೆ ಅರಿವಾಗದಂತೆ ಬೆಳೆದ ಬೂಷ್ಟು ಆತನ ಗಮನಕ್ಕೆ ಬರುವುದು ಸಣ್ಣ ಗುಳ್ಳೆಯ ರೂಪವನ್ನು ಪಡೆದಾದ ಮೇಲೆಯೆ. ಆದರೆ ಪ್ರಾರಂಭಿಕ ಹಂತದಲ್ಲಿ ಲೋಳೆಲೋಳೆಯಾದ ದ್ರವ ಮೂಗಿನಿಂದ ಸ್ರವಿಸಲಾರಂಭಿಸುತ್ತದೆ. ಅಲ್ಲದೆ ಆ ಭಾಗದಲ್ಲಿ ತುರಿಕೆ, ನೋವು ಹಾಗೂ ಉಸಿರಾಟಕ್ಕೆ ಅಲ್ಪ ಅಡ್ಡಿಯೂ ಅನುಭವಕ್ಕೆ ಬರುತ್ತದೆ. ಈ ಗುಳ್ಳೆ ಬೆಳೆದು ಸಣ್ಣ ಗಡ್ಡೆಯ ರೂಪ ಪಡೆಯುವ ಹೊತ್ತಿಗೆ ತುರಿಕೆ-ನೋವುಗಳು ಹೆಚ್ಚೆ ಬಾವೂ ಕಾಣಿಸಿಕೊಳ್ಳುತ್ತದೆ. ಪೀಡಿತ ವ್ಯಕ್ತಿ ವೈದ್ಯಕೀಯ ಚಿಕಿತ್ಸೆ ಇಲ್ಲವೆ ಸಲಹೆ ಪಡೆಯಲು ಮುಂದಾಗುವ ವೇಳೆಗಾಗಲೇ ರ್ಹಿನೋಸ್ಪೊರಿಡಿಯಾಸಿಸ್ ತನ್ನ ಯಾತ್ರೆ ಶುರುಮಾಡಿಬಿಟ್ಟಿರುತ್ತದೆ.

ಈ ಹಂತದಲ್ಲಿ ಪೀಡಿತನಿಗೆ ಘ್ರಾಣಶಕ್ತಿ ನಶಿಸಿರುವುದಲ್ಲದೆ ಉಸಿರಾಟದ ತೊಂದರೆಯಿಂದಾಗಿ ಆತ ಬಾಯಿಯನ್ನೇ ಉಸಿರಾಡಲು ಬಳಸುವುದು ಅನಿವಾರ್ಯವಾಗುತ್ತದೆ. ಸೈನಸ್‌ಗೂ ಸೋಂಕು ತಗುಲಿ ಆತ ವಿಪರೀತ ತಲೆಶೂಲೆಯನ್ನು ಅನುಭವಿಸತೊಡಗುತ್ತಾನೆ. ಘ್ರಾಣಶಕ್ತಿಯ ನಷ್ಟದ ದುಷ್ಪರಿಣಾಮದಿಂದಾಗಿ ಪೀಡಿತನಿಗೆ ರುಚಿ ಜ್ಞಾನವೂ ನಶಿಸುತ್ತದೆ.

ಮೂಗಿನಿಂದ ಯಾತ್ರೆ ಆರಂಭಿಸಿದ ರ್ಹಿನೋಸ್ಪೊರಿಡಿಯಾಸಿಸ್‌ನ ಮುಂದಿನ ಹೆಜ್ಜೆಗಳು ಯಾವವು ?

**ಕಣ್ಣು:** ಮೂಗಿನ ಕುಹರವನ್ನು ತಲುಪಿದ ರ್ಹಿನೋಸ್ಪೊರಿಡಿಯಾಸಿಸ್ ಅಲ್ಲಿಂದ ಚಂಗನೆ ಕಣ್ಣುಗಳಿಗೆ ನೆಗೆಯುತ್ತದೆ. ಇದು ಆಂತರಿಕವಾಗಿ ನಡೆಯುವ ಕ್ರಿಯೆ. ('ಭೂಗತದಾಳಿ' ಎನ್ನಿ ಬೇಕಾದರೆ.) ಕಣ್ಣುಗಳಲ್ಲಿ ನೀರು ಸುರಿಯುವಿಕೆ ಅಧಿಕಗೊಳ್ಳುತ್ತದೆ. ಕಣ್ಣಾಲಿಗಳಲ್ಲಿ ಗುಳ್ಳೆಗಳು, ರಕ್ತ ಮಿಶ್ರಿತ ದ್ರವ ಸ್ರಾವದಿಂದಾಗಿ ವ್ಯಕ್ತಿಯು ವಿಕಾರಗೊಂಡಂತೆ ಕಾಣತೊಡಗುತ್ತಾನೆ. ಉಳಿದಂತೆ ತುರಿಕೆ, ಕಣ್ಣು ಚುಚ್ಚುವಿಕೆ, ರಕ್ತದಿಂದೊಡಗೂಡಿದ ಕೀವು, ಉರಿಗಳಲ್ಲದೆ ಕಣ್ಣಲ್ಲಿ ಉಸುಕು ಬಿದ್ದಿದೆಯೇನೋ ಎಂಬ ಅನಿಸಿಕೆ, ಕೆಂಗಣ್ಣುಗಳ ಜತೆಗೆ ಎದುರಿನ ದೃಶ್ಯ ಮಸಕು ಮಸುಕಾಗಿ-ಅಸ್ಪಷ್ಟವಾಗಿ ಕಾಣುವುದೇ ಮೊದಲಾದ ಅನುಭವಗಳು ಪೀಡಿತನಿಗೆ ಆಗತೊಡಗುತ್ತವೆ. ದಿನಗಳೆದಂತೆ ರ್ಹಿನೋಸ್ಪೊರಿಡಿಯಾಸಿಸ್ ಬೆಳೆದು ಹುಬ್ಬುಗಳಿಗೂ ಹಬ್ಬಬಹುದು.

**ಕಿವಿ:** ಮೂಗಿಗೂ ಕಿವಿಗೂ ಗಂಟಲಿಗೂ ಸಂಬಂಧವಿರುವುದರಿಂದ ನಾಸಾಕುಹರದ ಮೂಲಕ ರ್ಹಿನೋಸ್ಪೊರಿಡಿಯಾಸಿಸ್ ಕಿವಿಗಳತ್ತಲೂ ಹಾಲಿಡತೊಡಗುತ್ತದೆ. ಕಿವಿಯಲ್ಲಿ ಭಾರವೆನಿಸುವಿಕೆ, ಶ್ರವಣ ಶಕ್ತಿಯು ಮಂದವಾಗುವಿಕೆ, ಕಿವಿಯ ಒಳಗೇನೋ ವಿಚಿತ್ರ ಸದ್ದು ಕೇಳಿದಂತೆನಿಸುವುದು, ಹಾಗೂ ಕಿವಿಯಲ್ಲಿ ರಕ್ತಮಿಶ್ರಿತ ದ್ರವ ಸುರಿಯುವಿಕೆಗಳಿಂದ ವ್ಯಕ್ತಿ ಗಾಬರಿಗೀಡಾಗುತ್ತಾನೆ.

**ಗಂಟಲು:** ಮೂಗು-ಕಿವಿಗಳಿಗೆ ದಾಳಿಯಿಟ್ಟ ಮೇಲೆ ಗಂಟಲಿಗಿಳಿಯುವುದಕ್ಕೇನು

# 'ಪವಿತ್ರ ಸ್ನಾನ'ದ ಪರಮ ಸಂಕಟಗಳು....

ತದ ? ರ್ಹಿನೋಸ್ಪೊರಿಡಿಯಾಸಿಸ್ ಗಂಟಲಿಗಿಳಿದರೆ ಕಚುಗುಳಿ ಇಟ್ಟಂತಾಗತೊಡಗುತ್ತದೆ. ಅಲ್ಲಿ ಏನೋ ಅನ್ಯಪದಾರ್ಥ ಸಿಕ್ಕಿಕೊಂಡಂತೆನಿಸುತ್ತದೆ. ಅಧಿಕ ಲಾಲಾರಸ ಸುರಿಯುವಿಕೆ, ಪದೇ ಪದೇ ಕೇಕರಿಸಿ ಗಂಟಲು ಸರಿಮಾಡಿಕೊಳ್ಳುವಂತಾಗುವಿಕೆ, ರಕ್ತಮಿಶ್ರಿತ ಉಗುಳುಗಳಲ್ಲದೆ ನುರಿಸುವಿಕೆಗೆ ತೊಂದರೆಪಡುವುದು ಹಾಗೂ ನುಂಗಲು ಆಗದಿರುವಿಕೆಗಳು ವ್ಯಕ್ತಿಯ ಲಕ್ಷಣಗಳಾಗುತ್ತವೆ. ಒಟ್ಟಿನಲ್ಲಿ ರ್ಹಿನೋಸ್ಪೊರಿಡಿಯಾಸಿಸ್‌ನ ಈ ಹಂತ ಪೀಡಿತನಿಗೂ ಚಿಕಿತ್ಸಕನಿಗೂ ನುಂಗಲಾರದ ತುತ್ತೇ ಸೈ.

**ಧ್ವನಿ ಪೆಟ್ಟಿಗೆ:** ಗಂಟಲಿಗೆ ಸಮೀಪದಲ್ಲೇ ಇರುವ ಧ್ವನಿ ಪೆಟ್ಟಿಗೆಯನ್ನು ರ್ಹಿನೋಸ್ಪೊರಿಡಿಯಾಸಿಸ್ ಆವರಿಸಿತೆಂದರೆ ಧ್ವನಿ ಭಾರವಾಗುತ್ತದೆ. ಮಾತನಾಡಲು ವ್ಯಕ್ತಿ ತುಂಬ ಶ್ರಮಪಡುವಂತಾಗುತ್ತದೆ. ಜತೆಗೆ ಉಸಿರಾಡುವುದೂ ಕಷ್ಟವೇ. ಉಸಿರಾಟದ ತೊಂದರೆ ಅತ್ಯಂತ ತೀವ್ರವಾಗಿಬಿಟ್ಟರೆ ? ಆಗ ಶ್ವಾಸನಾಳದಲ್ಲೊಂದು ತೂತು ಕೊರೆಯುವ ಅನಿವಾರ್ಯತೆಯುಂಟಾಗುತ್ತದೆ.

**ಶ್ವಾಸನಾಳ:** ರ್ಹಿನೋಸ್ಪೊರಿಡಿಯಾಸಿಸ್ ಗಾಳಿಗೊಳವೆ (ಶ್ವಾಸನಾಳ)ವನ್ನು ವಶಪಡಿಸಿಕೊಂಡಿತೆಂದರೆ ಅದು ಆ ವ್ಯಕ್ತಿಯನ್ನು ಅಕ್ಷರಶಃ ಕತ್ತುಹಿಚುಕಿ-ಬಿಟ್ಟು ಮಾಡಿದಂತೆಯೆ. ಉಸಿರಾಟವೇ ಅಸಾಧ್ಯವೆಂದಾದರೆ ವ್ಯಕ್ತಿ ಸಮಾಧಾನದಿಂದಿರಲು ಸಾಧ್ಯವೆ ? ಆತ ಒದ್ದಾಡತೊಡಗುತ್ತಾನೆ. ಶಸ್ತ್ರಕ್ರಿಯೆಗೂ ಅನುಕೂಲ ಪ್ರದೇಶವಿದಲ್ಲವಾದ್ದರಿಂದ ಮತ್ತು ಹಾಗೇನಾದರೂ ಮಾಡಲೆತ್ನಿಸಿದರೆ ಅತ್ಯಧಿಕ ರಕ್ತಸ್ರಾವವಾಗುವುದರಿಂದ ಲೇಸರ್ ಕಿರಣಗಳ ಬಳಕೆ ಅನಿವಾರ್ಯವೂ ಏಕಮಾತ್ರ ಅಸ್ತ್ರವೂ ಆಗುತ್ತದೆ. ಆದರೆ ಎಲ್ಲೆಡೆಯೂ ಲೇಸರ್ ಸೌಲಭ್ಯವಿರುತ್ತದೆಯೆ ?

**ಸಂದುಗಳು:** ದೇಹದ ಬೇರೆ ಬೇರೆ ಭಾಗಗಳ ಸಂದುಗಳೆಂದರೆ ರ್ಹಿನೋಸ್ಪೊರಿಡಿಯಾಸಿಸ್‌ಗೆ ಅದೇನು ಸಂಭ್ರಮವೊ ! ಮೊಳಕೈ ಸಂದು, ಮಣಿಕಟ್ಟು, ಕೈ ಬೆರಳ ಸಂದುಗಳು, ಮೊಳಕಾಲು, ಪಾದದ ಸಂದು, ಕಾಲ್ಬೆರಳ ಸಂದುಗಳಲ್ಲಿ ಇದು ಬೇರೂರಿತೆಂದರೆ ಕೈ ಕಾಲುಗಳನ್ನು ಕಟ್ಟಿ ಹಾಕಿದಂತೆಯೆ. ಕೈ ಮತ್ತು ಕಾಲುಗಳ ನಖಮೂಲ (nail bed)ದಲ್ಲಿ ಇದರಿಂದಾಗಿ ರಕ್ತಮಿಶ್ರಿತ ಕೀವು ಸುರಿಯಲಾರಂಭಿಸುತ್ತದೆ. ಸಂದುಗಳಲ್ಲಿ ಬಾವು-ನೋವುಗಳು ಚಲನ ಶಕ್ತಿಯನ್ನೇ ಹ್ರಾಸಗೊಳಿಸಿಬಿಡುತ್ತವೆ. ಅಷ್ಟೇ ಅಲ್ಲ ಕೈಯನ್ನು ಮಡಿಸಲೂ, ಮುಂಚಾಚಲೂ ಭಗೀರಥ ಪ್ರಯತ್ನ ಮಾಡಬೇಕಾಗುತ್ತದೆ.

**ಹಿಂಬಡ ಮತ್ತು ಅಂಗಾಲು:** ಇಲ್ಲೊಂದು ಸಣ್ಣ ಮುಳ್ಳು ನೆಟ್ಟರೇನೇ ಕಸಿವಿಸಿಪಡುವ ಮನುಷ್ಯನಿಗೆ ಅಲ್ಲೆಲ್ಲ ಈ ಮಳ್ಳುಹುಣ್ಣು ಆವರಿಸಿದರೆ ಇನ್ನೆಷ್ಟು ಸಂಕಟಪಡಲಿಕ್ಕಿಲ್ಲ ? ಹೆಜ್ಜೆ ಊರಲಾಗದ ಸ್ಥಿತಿ ತಲುಪಿದರೆ ಮತ್ತೇನಾದೀತು ? ನೋವು-ಕೀವು-ಬಾವುಗಳಂತೂ ಸಾಮಾನ್ಯವೇ. ನಡೆಯುವಾಗ ಮತ್ತು ಕುಳಿತುಕೊಳ್ಳುವಾಗ, ಸಂಡಾಸಿನಲ್ಲಿ ಕಾಲೂರಿ ಕುಳಿತುಕೊಳ್ಳುವಾಗ ಇಂಥ ವ್ಯಕ್ತಿ ನರಳಿ ನವೆಯುತ್ತಾನೆ.

**ಗುಪ್ತಾಂಗಗಳು:** ಗಂಡಸಿನಲ್ಲಿ ಶಿಶ್ನ, ವೃಷಣಗಳು ಹಾಗೂ ಸ್ತ್ರೀಯರಲ್ಲಿ ಯೋನಿ ಪ್ರದೇಶದಲ್ಲಿ ರ್ಹಿನೋಸ್ಪೊರಿಡಿಯಾಸಿಸ್ ಮನೆಮಾಡಿದರೆ ಮಾನಸಿಕ ತೊಂದರೆಗೀಡಾ

## 'ಪವಿತ್ರ ಸ್ನಾನ'ದ ಪರಮ ಸಂಕಟಗಳು....



ಆಪರೇಶನ್ ಮಾಡಲ್ಪಟ್ಟ ಮೂಗು, ತುಟಿ, ಕೆನ್ನೆ, ಹುಬ್ಬು ನೋಡಿ ▲

ಗುವ ಭಯವಿದೆ. ಅಲ್ಲದೆ ಬಟ್ಟೆ ಧರಿಸಲೂ ಬದಲಿಸಲೂ ಆಗದಂಥ ಸ್ಥಿತಿಯುಂಟಾಗುತ್ತದೆ. ತೊಟ್ಟ ಬಟ್ಟೆಗೆ ಕೀವು-ರಕ್ತ ಅಂಟಿಕೊಳ್ಳುವುದರಿಂದ ಮೇಲಿಂದ ಮೇಲೆ ಅವನ್ನು ಬದಲಿಸಲೇಬೇಕಾಗಿಯೂ ಬರುತ್ತದೆ.

**ಚರ್ಮ:** ಈ ಮೊದಲೇ ಹೇಳಿದಂತೆ ದೇಹದ ಯಾವುದೇ ಭಾಗದ ಚರ್ಮವನ್ನಾದರೂ ರ್ಹಿನೋಸ್ಪೊರಿಡಿಯಾಸಿಸ್ ಅತಿಕ್ರಮಿಸಬಹುದಾಗಿದೆ.

ಹೀಗೆ ದೇಹದ ಒಳ-ಹೊರಗೆಲ್ಲ ಅಟಾಟೋಪವನ್ನು ತೋರಿಸುತ್ತ ಅಡ್ಡಾಡುವ ಈ ರ್ಹಿನೋಸ್ಪೊರಿಡಿಯಾಸಿಸ್ ಅದೆಂಥ ಪೀಡೆಯೆಂಬುದನ್ನು ನೀವೇ ಅರ್ಥೈಸಿಕೊಳ್ಳಿ.

### ರ್ಹಿನೋಸ್ಪೊರಿಡಿಯಾಸಿಸ್ ತಂದೊಡ್ಡುವ ಮಾನಸಿಕ ಯಾತನೆ

ಯಾರಿಗೇ ಆಗಲಿ ತನ್ನತ್ತ ಒಂದು ಸಲ ಬಿಟ್ಟು ಇನ್ನೊಂದು ಸಲ ಜನ ವಿಚಿತ್ರವಾಗಿ ನೋಡುತ್ತಿದ್ದಾರೆಂಬುದು ಗಮನಕ್ಕೆ ಬಂದರೆ ಸಾಕು, ತಾನು ಕುರೂಪಿಯೆ ? ತನ್ನ ಮುಖಕ್ಕೇನಾದರೂ ಅಂಟಿಕೊಂಡಿದೆಯ ? ತೊಟ್ಟ ಬಟ್ಟೆ ಸರಿಯಿಲ್ಲವೆ ? ನಿಲುವು-ನಡಿ

# 'ಪವಿತ್ರ ಸ್ನಾನ'ದ ಪರಮ ಸಂಕಟಗಳು....

ಗೆಯಲ್ಲೇನಾದರೂ ಲೋಪವಿದೆಯೆ ? ಎಂದು ಮುಂತಾದ ಸಂಶಯ-ಕೀಳರಿಮೆಗೆ ಒಳಗಾಗುವಿಕೆ ಬಹುತೇಕರ ಅನುಭವಕ್ಕೆ ಬರುವ ಸಂಗತಿ. ಇಂಥ ಸಂದರ್ಭಗಳಲ್ಲಿ ವ್ಯಕ್ತಿ ತಲೆತಗ್ಗಿಸಿಕೊಂಡು ತಿರುಗಲಾರಂಭಿಸುತ್ತಾನೆ. ಜನ ಜಾಸ್ತಿ ಇರುವ ಪ್ರದೇಶಗಳಿಂದ ದೂರವಿರತೊಡಗುತ್ತಾನೆ. ಮತ್ತೆ ಮತ್ತೆ ಕನ್ನಡಿಯಲ್ಲಿ ನೋಡಿಕೊಂಡು ಸಮಾಧಾನಪಟ್ಟುಕೊಳ್ಳಲು ಯತ್ನಿಸುತ್ತಾನೆ.

ಹೀಗಿರುವಾಗ ಇನ್ನು ರ್‍ಹಿನೋಸ್ಪೊರಿಡಿಯಾಸಿಸ್‌ನಂಥದು ಗಂಟುಬಿದ್ದ ವ್ಯಕ್ತಿಯ ಮಾನಸಿಕ ಸ್ಥಿತಿಯೇನು ?

ಆತ ಮಾನಸಿಕವಾಗಿ ಕುಗ್ಗಿಹೋಗುವುದಂತೂ ನೂರಕ್ಕೆ ನೂರರಷ್ಟು ನಿಜ. ಜತೆಗೆ ಸಂಶಯ-ಭಯಗಳಿಗೆ ಈಡಾಗುತ್ತಾನೆ. ದೇಹದ ನಾನಾ ಭಾಗಗಳಲ್ಲಿ ಪ್ರಕಟವಾಗಿ ತೋರುವ ಮುಳ್ಳುಹುಣ್ಣು, ರಕ್ತ ಮಿಶ್ರಿತ ಕೀವುಗಳ ಸ್ರಾವಗಳೇ ಮೊದಲಾದ ಕಾರಣಗಳಿಂದ ಜಗತ್ತಿಗೆ ಮುಖ ತೋರಿಸಲಾರದವನಾಗುತ್ತಾನೆ. ಗೆಳೆಯರಿಂದ ದೂರ ವುಳಿಯುವ ದಾರಿಗಳನ್ನು ಹುಡುಕುವುದಲ್ಲದೆ ಸಾರ್ವಜನಿಕ ಸಭೆ-ಸಮಾರಂಭಗಳೆಂದರೆ ಹೆದರಿ ನಡುಗುತ್ತಾನೆ. ಜನರ ಚುಚ್ಚು ನುಡಿಗಳನ್ನು ಕೇಳದಿರುವುದೇ ವಾಸಿ ಎಂಬ ನಿರ್ಧಾರವನ್ನಾತ ಕೈಗೊಳ್ಳುವುದು ಅನಿವಾರ್ಯವೆನಿಸುತ್ತದೆ. ಯಾಕೆಂದರೆ ಯಾವೊಬ್ಬನಿಗೇ ಆಗಲಿ ತನ್ನ ವೈಕಲ್ಯವನ್ನೆತ್ತಿ ಅಪಹಾಸ್ಯ ಮಾಡುವವರನ್ನು ಕಂಡರೆ, ಅಪಹಾಸ್ಯದ ನುಡಿಗಳನ್ನು ಕೇಳಿದರೆ ಇನ್ನಿಲ್ಲದ ಅವಮಾನವಾಗುತ್ತದೆ. ಆತನ ಅಹಂಗೆ ಪೆಟ್ಟು ಬೀಳುತ್ತದೆ.

ಇನ್ನು ತಾನು ಹೊರಬೀಳಲಾರದ ಸ್ಥಿತಿ ತಂದೊಡ್ಡಿರುವ ರ್‍ಹಿನೋಸ್ಪೊರಿಡಿಯಾಸಿಸ್‌ನಿಂದಾಗಿ ಆತ ಸಾವಾದರೂ ಬೇಗ ಬರಬಾರದೇ ಎಂದು ಹಲುಬತೊಡಗುತ್ತಾನೆ. ಬದುಕಿನ ಬಗೆಗೆ, ಸಮಾಜದ ಬಗೆಗೆ ಒಂದು ರೀತಿಯ ದ್ವೇಷ ಆತನಲ್ಲಿ ಮನೆಮಾಡುತ್ತದೆ. ಕ್ರಮೇಣ ಆತನಲ್ಲಿ ಆತ್ಮಹತ್ಯೆಯ ಯೋಚನೆ ಬಲವಾಗತೊಡಗುತ್ತದೆ. ಹೀಗಾಗಿ ದೈಹಿಕ-ಮಾನಸಿಕ ರೋಗಗಳೆರಡರಿಂದಲೂ ದಿನೇ ದಿನೇ ಜರ್ಜರಗೊಳ್ಳುತ್ತಾನೆ.

## ಯಾವ್ಯಾವ (ಪ್ರ)ದೇಶಗಳಲ್ಲಿದೆ ರ್‍ಹಿನೋಸ್ಪೊರಿಡಿಯಾಸಿಸ್ ?

'ಸರ್ವವ್ಯಾಪಿ' ಎಂಬ ವಿಶೇಷಣವನ್ನೀಗಾಗಲೇ ಈ ರೋಗಕ್ಕೆ ಸಂಬಂಧಿಸಿದಂತೆ ಬಳಸಿದ್ದೇನಷ್ಟೇ. ಇದು ಭೌತಿಕವಾಗಿ ನಿಜವಾಗಿರುವ ಹಾಗೆ ಭೌಗೋಳಿಕವಾಗಿಯೂ ನಿಜ.

ಯಾಕೆಂದರೆ ಇದು ದೂರದ ಅಮೆರಿಕ-ಆಫ್ರಿಕಾ ಮತ್ತು ಯುರೋಪ್ ಖಂಡದ ದೇಶಗಳಲ್ಲದೆ ಏಶಿಯದ ರಾಷ್ಟ್ರಗಳಲ್ಲಿಯೂ ಧಾಂದಲೆ ಹಾಕುತ್ತಲಿರುವುದು ಕಳೆದ ಒಂದು ಶತಮಾನದ ಅವಧಿಯಲ್ಲಿ ವರದಿಯಾಗುತ್ತಲೇ ಇದೆ. ನಮ್ಮ ನೆರೆಯ ಪಾಕಿಸ್ತಾನ ಮತ್ತು ಶ್ರೀಲಂಕಾಗಳಲ್ಲಿ ಇದರ ಪ್ರಕರಣಗಳು ಜಾಸ್ತಿ.

ನಮ್ಮ ದೇಶದ ಬಿಹಾರ, ಉತ್ತರ ಪ್ರದೇಶ, ಮಹಾರಾಷ್ಟ್ರ ಹಾಗೂ ಕರ್ನಾಟಕಗಳಲ್ಲಿ

## ಆರೋಗ್ಯದಂಗಳ

# ‘ಪವಿತ್ರ ಸ್ನಾನ’ದ ಪರಮ ಸಂಕಟಗಳು....

ರ್ಹಿನೋಸ್ಪೊರಿಡಿಯಾಸಿಸ್‌ನ ಅನೇಕ ಕೇಂದ್ರಗಳು ಗುರುತಿಸಲ್ಪಟ್ಟಿವೆ. ಬಹುತೇಕ ಪವಿತ್ರ ಕ್ಷೇತ್ರಗಳಲ್ಲಿನ ಹೊಂಡ-ಪುಷ್ಕರಿಣಿ'ಗಳು ಈ ರೋಗದ ತವರುಗಳೆನಿಸಿವೆ.

ಬೋಧ ಗಯಾದ ಹೆಸರು ಕೇಳಿದ್ದೀರಲ್ಲ. ಅಲ್ಲಿ ರ್ಹಿನೋಸ್ಪೊರಿಡಿಯಾಸಿಸ್ ಪ್ರಮಾಣ ಹೆಚ್ಚೆಂದು ದಾಖಲೆಗಳು ತಿಳಿಸುತ್ತವೆ.

ಕರ್ನಾಟಕದಲ್ಲಿ ಮುಖ್ಯವಾಗಿ ಎರಡು ಕೇಂದ್ರಗಳನ್ನು ಹೆಸರಿಸಬಹುದು: ವಿಜಾಪುರ ಜಿಲ್ಲೆಯ ಬಾದಾಮಿ ಹಾಗೂ ದಕ್ಷಿಣ ಕನ್ನಡ ಜಿಲ್ಲೆಯ ಕೆಲವು ಊರುಗಳು. ನನ್ನ ಬಳಿ ಬಂದ ಮತ್ತು ಈ ಲೇಖನದ ಪ್ರಾರಂಭದಲ್ಲಿ ಉದಾಹರಿಸಿದ ಮೂವತ್ತರ ತರುಣ ಶಿಕ್ಷಕ ಬಾದಾಮಿಯವನು. ಹಾಗೂ ಈ ನನ್ನ ಮೂವತ್ತು ವರ್ಷಗಳ ಅನುಭವದಲ್ಲಿ ನಾನು ಉಪಚರಿಸಿದ ಸುಮಾರು ೬೦ ಜನರಲ್ಲಿ ಹೆಚ್ಚಿನವರು ವಿಜಾಪುರ ಜಿಲ್ಲೆಗೆ ಸೇರಿದವರು.

ಮಂಗಳೂರಿನ ಕಸ್ತೂರಬಾ ಮೆಡಿಕಲ್ ಕಾಲೇಜಿನ ರೋಗನಿದಾನಶಾಸ್ತ್ರ ವಿಭಾಗದಲ್ಲಿ ೧೯೫೫ರಿಂದ ೧೯೯೦ರ ಅವಧಿಯಲ್ಲಿ ಒಟ್ಟು ೧೮೩ ರ್ಹಿನೋಸ್ಪೊರಿಡಿಯಾಸಿಸ್ ಪ್ರಕರಣಗಳು ವರದಿಯಾಗಿವೆ. ಈ ಪೈಕಿ ಗಂಡಸರೇ ಹೆಚ್ಚು. ಅಲ್ಲದೆ ಬಹುತೇಕ ರೋಗಿಗಳು ‘ಎರಡು ಇಲ್ಲವೆ ಮೂರನೆಯ ದಶಕ’ದಲ್ಲಿ ಕಾಲಿಟ್ಟವರು. ಈ ೧೮೩ ರೋಗಿಗಳಲ್ಲಿ ಅತಿ ಕಡಿಮೆ ವಯಸ್ಸಿನ ರೋಗಿ ೯ ವರ್ಷದ ಹುಡುಗ; ಅತಿ ಹೆಚ್ಚು ವಯಸ್ಸಿನ ರೋಗಿ ೮೦ ವರ್ಷದ ವೃದ್ಧ. (IJO & HNS ನಲ್ಲಿ ಪೂರ್ಣಿಮಾ ಬಾಳಿಗಾ ಮತ್ತು ರಾಮದಾಸ ನಾಯಕರು ಬರೆದ ವಿವರಗಳಿಂದ ಆಯ್ದ ಭಾಗ.)

ರ್ಹಿನೋಸ್ಪೊರಿಡಿಯಾಸಿಸ್‌ಗೆ ಈವರೆಗೂ ಪರಿಪೂರ್ಣವಾದ ಚಿಕಿತ್ಸಾವಿಧಾನವೇ ಕಂಡುಹಿಡಿಯಲ್ಪಟ್ಟಿಲ್ಲವೆಂಬುದನ್ನು ಈ ಮೊದಲೇ ಹೇಳಿದ್ದೇನೆ. ಶಸ್ತ್ರಚಿಕಿತ್ಸೆಯನ್ನು ಕೈಗೊಂಡ ಪ್ರಕರಣಗಳೂ ಇವೆ. ನನ್ನ ಬಳಿ ಬಂದ ಬಾದಾಮಿಯ ತರುಣ ಈಗಾಗಲೇ ಸುಮಾರು ೧೪ ಬಾರಿ ಶಸ್ತ್ರಕ್ರಿಯೆಗೆ ಒಳಗಾಗಿದ್ದಾನೆಂದು ಈ ಮುಂಚೆಯೇ ಉಲ್ಲೇಖಿಸಿದ್ದೇನೆ. ಮೂಗಿಗೆ ಹಲವಾರು ಸಲ ಶಸ್ತ್ರಕ್ರಿಯೆಯಾಗಿದೆ. ರೋಗಪೀಡಿತ ಚರ್ಮದ ಭಾಗದಲ್ಲಿಯೂ ಆಪರೇಶನ್ ಮಾಡಲ್ಪಟ್ಟಿದೆ. ಒಂದು ಸಲ ಎಡಮೊಳಕಾಲಿಗೆ ಬಾವು ಹಾಗೂ ನೋವನ್ನು ನಿವಾರಿಸುವುದಕ್ಕಾಗಿ ಶಸ್ತ್ರಕ್ರಿಯೆಯಾಗಿದೆ. ಕೆಳತುಟಿಯ ಬಲಭಾಗವನ್ನು ಕತ್ತರಿಸಿ ತೆಗೆಯಲಾಗಿದೆ. (ಚಿತ್ರ ಗಮನಿಸಿ.)

ಆದರೆ ಶಸ್ತ್ರಕ್ರಿಯೆ ಆತನಿಗೆ ತತ್ಕಾಲಕ್ಕೆ ಸಮಾಧಾನ ತಂದಿರಬೇಕೇ ವಿನಾ ರೋಗವನ್ನು ಪೂರ್ಣ ಹೊಡೆದೋಡಿಸಲೇ ಇಲ್ಲ. ಶಸ್ತ್ರಕ್ರಿಯೆಗಳ ಸಂದರ್ಭದಲ್ಲಿ ರೋಗಕಾರಕ ಬೂಷ್ಟು ರಕ್ತವನ್ನು ಪ್ರವೇಶಿಸಿದ್ದರಿಂದ ಅದಕ್ಕೆ ನೆಲ ಹದಗೊಳಿಸಿಕೊಟ್ಟಂತಾಗಿರಬೇಕು.

ಆದರೂ ವೈದ್ಯಕೀಯ ವಿವರಗಳಲ್ಲಿ (೧) ರೋಗಪೀಡಿತ ಭಾಗದಲ್ಲಿನ ಅಂಗಾಂಶವನ್ನು ಕರೆಂಟಿನಿಂದ ಸುಡುವಿಕೆ, (೨) ಆ್ಯಂಟಿಬಯಾಟಿಕ್ ಔಷಧಿ ನೀಡುವಿಕೆ, (೩) ಬೂಷ್ಟು ವಿರೋಧಿ ಔಷಧಿಗಳನ್ನು ಕೊಡುವಿಕೆಗಳೇ ಮೊದಲಾದ ಹಲವಾರು ಚಿಕಿತ್ಸೆಗಳನ್ನು ಕೈಗೊಳ್ಳಬಹುದೆಂದು ಹೇಳಲಾಗಿದೆ. ಆದರೆ ಇವುಗಳಿಂದ ರ್ಹಿನೋಸ್ಪೊ

